ನೆಮ್ಮದಿಯ ನಾಳೆ ನಮ್ಮದು

# ಹೊಸತು

ಮೇ ೨೦೧೭
ಬೆಲೆ : ₹ ೨೦

ISSN 2319 -7307




## ವಿಶ್ವದ ಶ್ರಮಜೀವಿಗಳಿಗೆ
## ಹೊಸತು ಬಳಗದ ಶುಭಾಶಯಗಳು

## ಕಮ್ಯುನಿಸ್ಟ್ ಮುತ್ಸದ್ದಿ, ಜನಪ್ರಿಯ ಕಾರ್ಮಿಕ ಮುಖಂಡ, ಮಾಜಿ ಶಾಸಕ ಹಾಗೂ ಹಿರಿಯ ನ್ಯಾಯವಾದಿಗಳಾದ

# ಶ್ರೀ ಎಂ. ಸಿ. ನರಸಿಂಹನ್ ಅವರಿಗೆ ಅಭಿವಂದನೆ

**ಬೆಂಗಳೂರು, ದಿನಾಂಕ 16 ಏಪ್ರಿಲ್ 2017**






























# ಹೊಸತು




## ನೆಮ್ಮದಿಯ ನಾಳೆ ನಮ್ಮದು


ಭಗವದ್ಗೀತೆ : ಒಂದು ಅವಲೋಕನ
ಲ. ಬ್ರಹ್ಮಯಜ್ಞ ಮತ್ತು ಜ್ಞಾನಯೋಗ — ಜಿ. ರಾಮಕೃಷ್ಣ ... ೧೧

ಕಾರ್ಮಿಕರ ಹೋರಾಟಕ್ಕೆ ಹೊಸ ಆಯಾಮ ಕೊಟ್ಟ
ಅಂಗನವಾಡಿ ಕೆಲಸಗಾರರು — ಡಾ॥ ಸಿದ್ದನಗೌಡ ಪಾಟೀಲ ... ೨೭
ಭಾರತದಲ್ಲೊಂದು ಶಿಕಾಗೊ — ಮುರಳಿಧರ ಚಿಕ್ಕಮಗಳೂರು ... ೧೫

ಸುಲ್ತಾನಳ ಕನಸು — ಮೂಲ : ಬೇಗಂ ರೊಕೈಯ್ಯ
ಅನುವಾದ : ಜಾಹಿದಾ ಶಿರೀನ್ ... ೧೯
ಸುರುಳಿ ಸುತ್ತಿದ ತಂತಿ — ಪ್ರೊ॥ ಬಿ. ಕೆ. ಹನುಮಂತಯ್ಯ ... ೫೯

ಮೀಸಲಾತಿ ಹೆಚ್ಚಳ : ಮೂಗಿಗೆ ತುಪ್ಪ ಸವರಿದಂತೆ
ಡಾ॥ ಕೆ. ಎನ್. ದೊಡ್ಡಮನಿ ... ೨೫
ಪಶುಸಂಗೋಪನಾಭಿವೃದ್ಧಿ ನೆಲೆಯಲ್ಲಿ ಮಹಿಳಾ ಸಬಲೀಕರಣ
ಡಾ॥ ಸರೋಜಾ ಎಸ್. ಸಂತಿ ... ೩೩

ಕಾವ್ಯಲೋಕ : ೧೦, ೧೪, ೨೩, ೩೧, ೫೪, ೬೧, ೬೨

ಅಮಾನ್ಯಗೊಂಡ ನೋಟುಗಳು, ಅಮಾನ್ಯಗೊಂಡ ಶ್ರೀಸಾಮಾನ್ಯರು
ಮುರಳಿಧರ ಚಿಕ್ಕಮಗಳೂರು ... ೧೭
ಜಿ ಎಸ್ ಟಿ : ಒಕ್ಕೂಟ ವ್ಯವಸ್ಥೆಗೆ ಶಾಪ
ಡಾ॥ ಟಿ. ಆರ್. ಚಂದ್ರಶೇಖರ ... ೪೩

ಶ್ರಮಿಕ ಸಂಗಾತಿ : ಎಂ. ಸಿ. ನರಸಿಂಹನ್ — ಶ್ರೀಸುಮಿತ್ರಾಸುತ ಅಗಸಬಾಳ ... ೩೦

ಕವಿಯುತ್ತಿರುವ ಫ್ಯಾಸೀವಾದ ಸೃಜನಶೀಲರ ಆತಂಕ
ಕೆ. ಎಸ್. ಪಾರ್ಥಸಾರಥಿ ... ೩೯

ಎನ್. ಎಸ್. ಜಿ. – ಭಾರತಕ್ಕೆ ಸದಸ್ಯತ್ವ ?
ಡಾ॥ ಎಮ್. ಎಸ್. ಎಸ್. ಮೂರ್ತಿ ... ೪೭

ಭಾರತದ ರೈತರ ಸಮಸ್ಯೆಗಳು, ಪ್ರಭುತ್ವಗಳು, ಪರಿಹಾರ ಮತ್ತು
ಆತ್ಮಹತ್ಯೆ — ವಿ. ಆರ್. ರಮೇಶ, ಕೋಲಾರ ... ೫೧
ನಿಸರ್ಗದ ಇಷ್ಟ ರೈತನ ಕಷ್ಟ — ಪುಂಡಲೀಕ ಪಾಟೀಲ ... ೪೬
ಪಶ್ಚಿಮ ಘಟ್ಟಗಳ ಜೀವವೈವಿಧ್ಯತೆಯ ನಾಶ ಮತ್ತು
ದಕ್ಷಿಣ ಭಾರತದ ಮರುಭೂಮಿಗಳು — ಡಾ॥ ಎಂ. ವೆಂಕಟಸ್ವಾಮಿ,
ಆರ್. ಹೆಚ್. ಸಾಹುಕಾರ್ ... ೫೭

ಸರ್ವಜ್ಞನೂ, ವಿಡಂಬಾರಿಯೂ — ಮೋಹನ ಹಬ್ಬು ... ೫೫

ನಾನು ಓದಿದ ಪುಸ್ತಕ : ಕನ್ನಡಕ್ಕೊಂದು ಕೈಪಿಡಿ
ಎಸ್. ಎಸ್. ಯದುರಾಜನ್ ... ೪೯
ವಿಶ್ವವೀಕ್ಷಣೆ : ಸಿರಿಯಾದ ಮೇಲೆ ಅಮೆರಿಕದ ದಾಳಿ
ಖಂಡನೀಯ — ಸೀಯಾರ್ಕೆ ... ೪೨
ನಭಾವಲೋಕನ : ಗುರುಗ್ರಹದ ಆಗಮನ — ಡಾ॥ ಬಿ. ಎಸ್. ಶೈಲಜಾ ... ೩೮
ಹೊಸ ಓದು : ಕಲ್ಲೇಶ್ ಕುಂಬಾರ್, ಇಂದಿರಾ ಕುಮಾರಿ ... ೩೨



**ಚಿತ್ರಗಳು :** ಕಮಲಂ ಅರಸು, ನಾಮದೇವ ಕಾಗದಗಾರ,
ಜಿ. ಎಂ. ಬೊಮ್ಮನಳ್ಳಿ, ಗೋಪಿ ಹಿರೇಬೆಟ್ಟು
**ಮುಖಪುಟ :** ಕಾರ್ಮಿಕರ ದಿನಾಚರಣೆಯ ಸಾಂಕೇತಿಕ ಚಿತ್ರ
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ನಂಜನಗೂಡು, ಗುಂಡ್ಲುಪೇಟೆ ವಿಧಾನಸಭೆಯ ಎರಡೂ ಕ್ಷೇತ್ರಗಳಲ್ಲಿ ಕಾಂಗ್ರೆಸ್ ಉಪ ಚುನಾವಣೆಗಳಲ್ಲಿ ಜಯ ಗಳಿಸಿದೆ. ಯಡಿಯೂರಪ್ಪ ನೇತೃತ್ವದ ಭಾರತೀಯ ಜನತಾ ಪಕ್ಷ ಸೋಲನ್ನು ಅನುಭವಿಸಿದೆ ನೇರವಾದ ಸ್ಪರ್ಧೆಯಲ್ಲಿ. ಈ ಚುನಾವಣೆಗಳನ್ನು ಮುಂದಿನ ವರ್ಷ ವಿಧಾನಸಭೆಗೆ ನಡೆಯುವ ಚುನಾವಣೆಗಳಿಗೆ ಮುನ್ಸೂಚನೆ, ಮಿನಿ ಸ್ಪರ್ಧೆ ಎಂದೆಲ್ಲ ಮಾಧ್ಯಮಗಳಲ್ಲಿ ಪ್ರಚಾರ ಇತ್ತು. ಎರಡೂ ಕಡೆ ಪ್ರಚಾರದ ಅಬ್ಬರವೂ ಜೋರಾಗಿತ್ತು. ಸಿದ್ದರಾಮಯ್ಯ ಸಂಪುಟದ ಸಚಿವರುಗಳು, ಭಾಜಪದ ನಾಯಕರುಗಳೂ ಉರಿಬಿಸಿಲಿನಲ್ಲಿ ಪ್ರಚಾರ ನಡೆಸಿದ್ದರು ಕ್ಷೇತ್ರಗಳಲ್ಲಿಯೇ ಮುಕ್ಕಾಮ್ ಹೂಡಿ. ಈ ಫಲಿತಾಂಶದಿಂದ ಕಾಂಗ್ರೆಸ್ ಬೀಗುವುದು ಸಹಜ. ಆದರೆ ನೆಮ್ಮದಿಯಿಂದ ಇರುವಂತಿಲ್ಲ, ಮುಂದಿನ ಶಾಸನಸಭಾ ಚುನಾವಣೆಗಳಲ್ಲಿ ಜಯ ನಮ್ಮದೇ ಎಂದು ನೆಚ್ಚಿಕೊಂಡಿರುವಂತಿಲ್ಲ. ಎರಡೂ ಕ್ಷೇತ್ರಗಳಲ್ಲಿ ಜಯಶಾಲಿಗಳಾಗಿರುವವರು ಗಳಿಸಿದ ಮತಗಳ ಅಂತರ ಹೆಚ್ಚೇನಲ್ಲ. ಮತ್ತೆ ಈ ಬಾರಿ ಚುನಾವಣೆಗಳಲ್ಲಿ ದೇವೇಗೌಡರ ಜೆಡಿಎಸ್ ಸ್ಪರ್ಧಿಸಿರಲಿಲ್ಲ. ಅದು ಸ್ಪರ್ಧಿಸಿದ್ದರೆ ಫಲಿತಾಂಶ ಏನಾಗುತ್ತಿತ್ತೊ. ಮುಂಬರುವ ಚುನಾವಣೆಗಳಲ್ಲಿ ಈ ಅಂಶವನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿದೆ. ನಂಜನಗೂಡು ಕ್ಷೇತ್ರದ ಜನ ಪಕ್ಷಾಂತರ ಮಾಡಿದ ಶ್ರೀನಿವಾಸ ಪ್ರಸಾದ್‌ಗೆ ತಕ್ಕ ಪಾಠ ಕಲಿಸಿದ್ದಾರೆ. ಕಮಲ ಪಕ್ಷಕ್ಕೆ ಸ್ವರಕ್ಷಣೆಯ ಸಲುವಾಗಿ ಜಿಗಿದ ಮಾಜಿ ಮುಖ್ಯಮಂತ್ರಿ ಎಸ್. ಎಂ. ಕೃಷ್ಣರನ್ನು ಪ್ರಚಾರಕ್ಕೆ ಎಳೆದು ತಂದರೂ ಪ್ರಯೋಜನವಾಗಲಿಲ್ಲ. ಭಾಜಪವನ್ನು ಮುಂದಿನ ಚುನಾವಣೆಗಳಲ್ಲಿ ಪರಾಜಯಗೊಳಿಸಲು ಎಲ್ಲ ಪ್ರಜಾಪ್ರಭುತ್ವವಾದಿ, ಮತೀಯ ವಿರೋಧಿ ಪಕ್ಷಗಳು ಒಂದುಗೂಡಬೇಕಾದ ಅಗತ್ಯವನ್ನು ಈ ಚುನಾವಣೆಗಳು ಸಾಬೀತು ಮಾಡಿವೆ. ಹಾಗಾಗಿ, ಕಾಂಗ್ರೆಸ್ ಪಕ್ಷ ಈಗಿನಿಂದಲೇ ಸೂಕ್ತವಾದ ತಯಾರಿ ನಡೆಸುವುದು ಅಗತ್ಯ. ಪ್ರತಿಪಕ್ಷಗಳ ಮತ ಒಡೆಯದಂತೆ ನೋಡಿಕೊಳ್ಳಬೇಕಾಗಿದೆ. ಶತಾಯಗತಾಯ ಭಾಜಪ ಸರಕಾರವನ್ನು ಕರ್ನಾಟಕದಲ್ಲಿ ಅಸ್ತಿತ್ವಕ್ಕೆ ತರಲು ಪ್ರಯತ್ನ ನಡೆಯಲಿದೆ ಎಂಬುದನ್ನು ಮರೆಯುವಂತಿಲ್ಲ.

* * *

ದೇಶದಲ್ಲಿ 'ವಿವಿಐಪಿ ಸಂಸ್ಕೃತಿ' (ಅತ್ಯಂತ ಗಣನೀಯ ವ್ಯಕ್ತಿ) ಪರಂಪರೆ ಬೇರುಬಿಟ್ಟಿದೆ. ಸ್ವಾತಂತ್ರ್ಯಾನಂತರದಲ್ಲಿ ಹೊಸದಾಗಿ ಆಡಳಿತಕ್ಕೆ ಬಂದವರು ಪ್ರಾರಂಭಿಸಿದ ಅಟಾಟೋಪಗಳಲ್ಲಿ ಇದೊಂದು. ಜನರಿಂದ ಆಯ್ಕೆಯಾಗುವ ಎಂ.ಪಿ.ಗಳು, ಎಮ್ಮೆಲ್ಯೇಗಳು ತಾವೇ ಮಹಾರಾಜರುಗಳೆಂದು ತಿಳಿದುಕೊಂಡುಬಿಡುತ್ತಾರೆ. ಎಲ್ಲದರಲ್ಲೂ ತಾವೇ ಅತಿ ಶ್ರೇಷ್ಠರು ಎಂಬ ಪ್ರತಿಷ್ಠೆ ಬೆಳೆಸಿಕೊಳ್ಳುತ್ತಾರೆ. ಸಾರ್ವಜನಿಕರಿಗೆ ಸೇವೆ ಸಲ್ಲಿಸುವ ವಿನಯಶೀಲತೆ ಹೋಗಿ ತೊಂದರೆ ಕೊಡುವ ಜಾಯಮಾನ ಇವರದಾಗುತ್ತಿರುವುದು ಶೋಚನೀಯ. ಇದಕ್ಕೆ ಹಲವು ಉದಾಹರಣೆಗಳ ಪಟ್ಟಿಯನ್ನೇ ನೀಡಬಹುದು. ಹೊತ್ತು ಮೀರಿ ಬಂದು ವಿಮಾನದ, ರೈಲಿನ, ಬಸ್ಸಿನ ಪ್ರಯಾಣಿಕರು ಕಾದು ಕುಳಿತಿರುವಂತೆ ಮಾಡುವುದು ಅವುಗಳಲ್ಲಿ ಒಂದು. ಸಾರ್ವಜನಿಕ ಸಮಾರಂಭಗಳು ನಡೆದಾಗ ಸಚಿವರುಗಳು, ಪ್ರತಿಷ್ಠಿತ ಚುನಾಯಿತ ಪ್ರತಿನಿಧಿಗಳು ಗಂಟೆಗಟ್ಟಳೆ ತಡವಾಗಿ ಬರುವುದು ರೂಢಿಯಾಗಿಬಿಟ್ಟಿದೆ. ಇದು ತಮ್ಮ ಪ್ರತಿಷ್ಠೆ ತೋರಲು ಸಮಯಪ್ರಜ್ಞೆಯನ್ನು ಗಾಳಿಗೆ ತೂರುವ ಪ್ರವೃತ್ತಿಯಾಗಿದೆ. ಹೆದ್ದಾರಿಗಳಲ್ಲಿ, ನಗರದ ಪ್ರಮುಖ ರಸ್ತೆಗಳಲ್ಲಿ ಸಚಿವರ ವಾಹನಗಳು ಸುಗಮವಾಗಿ ಸಾಗಲು ಇತರ ವಾಹನಗಳನ್ನು ನಿಲ್ಲಿಸುವುದು ಮಾಮೂಲು. ಇದೊಂದು ನಿತ್ಯಗೋಳು. ಇನ್ನು ವಿಮಾನ ಸಂಚಾರ ಮಾಡುವಾಗ ಈ ಪ್ರತಿಷ್ಠಿತರ ಅಸಭ್ಯ ವರ್ತನೆ ಹೇಳತೀರದು. ಇತ್ತೀಚೆಗೆ ನಡೆದ ಪ್ರಕರಣವೊಂದರಲ್ಲಿ ಭಾಜಪದ ಪಾಲುದಾರ ಪಕ್ಷ ಶಿವಸೇನೆಯ ಪಾರ್ಲಿಮೆಂಟ್ ಸದಸ್ಯ ಗಾಯಕವಾಡ್ ಏರ್ ವಿಮಾನ ಸಂಸ್ಥೆಯ ಮ್ಯಾನೇಜರ್ ಮೇಲೆ ನಡೆಸಿದ ಹಲ್ಲೆ ಅಕ್ಷಮ್ಯ. ಇದರ ವಿರುದ್ಧವಾಗಿ ದೇಶದ ಎಲ್ಲ ವಿಮಾನ ಸಂಸ್ಥೆಗಳೂ ನಡೆಸಿದ ಪ್ರತಿಭಟನೆ, ಎಂ.ಪಿ.ಗೆ ಟಿಕೆಟ್ ನಿರಾಕರಣೆ ಸ್ತುತ್ಯಾರ್ಹ. ತನ್ನ ವರ್ತನೆಯನ್ನು ಪಾರ್ಲಿಮೆಂಟಿನಲ್ಲಿ ಈತ ಸಮರ್ಥಿಸಿಕೊಂಡ ರೀತಿ

(೬ನೇ ಪುಟಕ್ಕೆ)






ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ–೧೮ ಸಂಚಿಕೆ–೧೦ ಮೇ ೨೦೧೭





■ **ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**
೨೩೮/೧೦, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು – ೫೬೦ ೦೧೦

■ **ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೨೨೧೬೧೯೧೧, ೨೨೧೬೧೯೧೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**


# ಸಂಪಾದಕೀಯ

## ಫ್ಯಾಸಿಸಂ ಎಂದರೆ : ಶೋಷಕರ ಪರವಾಗಿ ಶೋಷಿತರನ್ನು ಸಿದ್ಧಪಡಿಸುವುದು

ಶಿಕಾಗೋದಲ್ಲಿನ ಕಾರ್ಮಿಕ ಚಳುವಳಿ, ದುಡಿವ ವರ್ಗದ ಹಕ್ಕುಗಳಿಗಾಗಿ ಸಮರಶೀಲ ಹೋರಾಟ ನಡೆದು ೧೩೦ ವರ್ಷ ಕಳೆದಿವೆ. ಊಳಿಗಮಾನ್ಯ ವ್ಯವಸ್ಥೆಯನ್ನು ನಿರ್ನಾಮ ಮಾಡಿದ ಕೈಗಾರಿಕಾ ಕ್ರಾಂತಿ ಬಂಡವಾಳಶಾಹಿಗಳನ್ನೂ ಕೈಗಾರಿಕಾ ಕಾರ್ಮಿಕ ವರ್ಗವನ್ನೂ ಏಕಕಾಲಕ್ಕೆ ಬೆಳೆಸಿತು. ಕಾರ್ಮಿಕ ವರ್ಗದ ಶೋಷಣೆಯಿಂದಲೇ ಲಾಭ, ಹೆಚ್ಚು ಲಾಭ, ಅತಿ ಹೆಚ್ಚು ಲಾಭ ಪಡೆವ ಬಂಡವಾಳಗಾರ ವರ್ಗ ಕಾರ್ಮಿಕ ವರ್ಗದ ಪ್ರತಿರೋಧವನ್ನು ದಮನಿಸುತ್ತಲೇ ಬಂದಿತು. ೧೮೮೬ ಮೇ ೧ರಂದು ಅಮೆರಿಕದ ಶಿಕಾಗೋದಲ್ಲಿ ಮೂಲಭೂತ ಹಕ್ಕುಗಳಿಗಾಗಿ ನಡೆದ ಕಾರ್ಮಿಕರ ಸಂಘಟಿತ ಹೋರಾಟ, ತ್ಯಾಗ ಬಲಿದಾನದ ಸ್ಮರಣೆ ಇಂದು ಮೇ ದಿನಾಚರಣೆಯಾಗಿದೆ. ಬಂಡವಾಳಶಾಹಿ ವರ್ಗ ಇಂದು ವಿಶ್ವದಾದ್ಯಂತ ಪ್ರಭುತ್ವಗಳನ್ನು ನಿಯಂತ್ರಿಸುವುದರ ಮೂಲಕ ಸಾಮ್ರಾಜ್ಯಶಾಹಿ ಶಕ್ತಿಯಾಗಿ ಬೆಳೆದಿದೆ. ವಿಶ್ವದ ಬಹುತೇಕ ಪ್ರಭುತ್ವಗಳು ಕಾರ್ಪೊರೇಟ್ ಕಂಪನಿಗಳ ಹಿತಾಸಕ್ತಿಗಾಗಿ ಕೆಲಸ ಮಾಡುತ್ತಿರುವ ಇಂದಿನ ಸಂದರ್ಭದಲ್ಲಿ ಕಾರ್ಮಿಕ ವರ್ಗದ ಜವಾಬ್ದಾರಿ ಹೆಚ್ಚಿದೆ. ಕೇವಲ ತ್ಯಾಗ ಬಲಿದಾನಗಳನ್ನು ಸ್ಮರಿಸಿ ಕುಳಿತುಕೊಳ್ಳುವ ಸಮಯ ಇದಲ್ಲ. ದುಡಿವ ವರ್ಗದ ಪ್ರಭುತ್ವ ಸ್ಥಾಪಿಸಿದ ಸೋವಿಯತ್ ಯೂನಿಯನ್ ಮತ್ತು ಸಮಾಜವಾದಿ ದೇಶಗಳ ಪತನದ ನಂತರ ದುಡಿವ ವರ್ಗದ ಹಕ್ಕುಗಳನ್ನು ಉಳಿಸಿಕೊಳ್ಳಲು ವಿಶ್ವದ ಕಾರ್ಮಿಕ ವರ್ಗ ಸಮರಶೀಲ ಹೋರಾಟಗಳನ್ನು ನಡೆಸಿದೆ. ಆದರೆ ನಿರೀಕ್ಷಿತ ಫಲಿತಾಂಶ ದೊರಕಿಲ್ಲ. ಸಮಾಜವಾದಿ ದೇಶಗಳಿದ್ದಾಗ ವಿಶ್ವ ಕಾರ್ಮಿಕ ಸಂಘಟನೆಯ ವೇದಿಕೆ ವಿವಿಧ ದೇಶಗಳ ಪ್ರಭುತ್ವಗಳಿಗೆ ಕಾರ್ಮಿಕ ಪರವಾದ ನೀತಿಗಳ ಜಾರಿಗಾಗಿ ನಿರ್ದೇಶನ ಕೊಡುವಂಥ ಶಕ್ತಿ ಪಡೆದಿತ್ತು. ಆದರೆ ಇಂದು ಪ್ರಭುತ್ವಗಳು ಕಾರ್ಪೊರೇಟ್ ಕಂಪನಿಗಳ ಗುಲಾಮರಾಗಿರುವಾಗ ವಿಶ್ವದ ಕಾರ್ಮಿಕ ವರ್ಗ ಹಕ್ಕುಗಳನ್ನು ಮಾತ್ರವಲ್ಲ, ಸಂಘಟನೆಯ ಅಸ್ತಿತ್ವವನ್ನು ಉಳಿಸಿಕೊಳ್ಳುವುದೇ ದುಸ್ತರವಾಗಿದೆ.

ಅಮೆರಿಕದ ನೂತನ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಮೆಕ್ಸಿಕೊ ದೇಶದ ಕಾರ್ಮಿಕರ ವಲಸೆ ತಡೆಯಲು ಅಮೆರಿಕ ಮತ್ತು ಮೆಕ್ಸಿಕೊ ಗಡಿಯಲ್ಲಿ ಗೋಡೆ ಕಟ್ಟುವ ಮಾತನಾಡುತ್ತಾರೆ. ವಿವಿಧ ದೇಶಗಳ ಕೆಲಸಗಾರರು ಅಮೆರಿಕ ಪ್ರವೇಶಿಸದಂತೆ ವೀಸಾ ನೀತಿ ಬದಲಿಸುತ್ತಿದ್ದಾರೆ. ಆದರೆ ಅದೇ ಅಮೆರಿಕ ತನ್ನ ದೇಶದ ಕಾರ್ಪೊರೇಟ್ ಕಂಪನಿಗಳ ಉತ್ಪನ್ನಗಳನ್ನು ಜಗತ್ತಿನ ಎಲ್ಲ ದೇಶಗಳ ಮಾರುಕಟ್ಟೆಗಳಲ್ಲಿ ಸುರಿಯುತ್ತಿದೆ. ಇದು ಬಂಡವಾಳದ ಜಾಗತೀಕರಣ. ಕಾರ್ಪೊರೇಟ್ ಕಂಪನಿಗಳ ಹಿತಾಸಕ್ತಿ ಕಾಪಾಡಲು ಬದ್ಧರಾಗಿರುವ ಇಂಥ ಪ್ರಭುತ್ವಗಳು ಶ್ರಮದ ಜಾಗತೀಕರಣವನ್ನು ನಿರಾಕರಿಸುತ್ತವೆ. ಇಂದು ಪ್ರಭುತ್ವಗಳ ಮುಖ್ಯ ಗುರಿಯೇ ಕಾರ್ಮಿಕ ಸಂಘಟನೆಗಳನ್ನು ನಿರ್ನಾಮ ಮಾಡಿ ಕಂಪನಿಗಳಿಗೆ ಅನುಕೂಲ ಮಾಡಿಕೊಡುವುದು. ಇಂದಿನ ಪ್ರಭುತ್ವಗಳು ಕಲ್ಯಾಣ ರಾಜ್ಯದ ಪರಿಕಲ್ಪನೆಯನ್ನು ತೊಡೆದುಹಾಕಿ ಕಂಪನಿ ರಾಜ್ಯಗಳಾಗಿವೆ. ಇದನ್ನು ತಡೆದು ಕಾರ್ಮಿಕ ವರ್ಗ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತಲೇ, ಹಕ್ಕುಗಳಿಗಾಗಿ ಹೋರಾಡುತ್ತಲೇ ಪ್ರಭುತ್ವವನ್ನೇ ವಶಪಡಿಸಿಕೊಳ್ಳುವ ದಾರಿಯತ್ತ ಮುನ್ನಡೆಯಬೇಕಿದೆ. ಇದನ್ನೇ ಮಾರ್ಕ್ಸ್ ಮತ್ತು ಎಂಗೆಲ್ಸ್ ಕಮ್ಯುನಿಸ್ಟ್ ಪಾರ್ಟಿ ಪ್ರಣಾಳಿಕೆಯಲ್ಲಿ ಪ್ರತಿಪಾದಿಸಿರುವುದು.

ಭಾರತದ ಕಾರ್ಮಿಕ ವರ್ಗ ತೀವ್ರವಾದ ಸಂಕಷ್ಟದಲ್ಲಿದೆ. ದೇಶದಲ್ಲಿನ ಒಟ್ಟು ದುಡಿವ ವರ್ಗದಲ್ಲಿ ಪ್ರತಿಶತ ೯೦ರಷ್ಟು ಅಸಂಘಟಿತ ಕಾರ್ಮಿಕರಿದ್ದಾರೆ. ಇವರಿಗೆ ಕೆಲಸದ ಭದ್ರತೆ ಮತ್ತಿತರ ಸೌಲಭ್ಯಗಳಿಲ್ಲ. ಸಂಘಟಿತ ವಲಯ ಪ್ರತಿಶತ ಕೇವಲ ೧೦ ಮಾತ್ರ. ಸಂಘಟಿತ ವಲಯದ ಹಕ್ಕುಗಳನ್ನು ಮೊಟಕುಮಾಡಲು ಇಂದಿನ ಕೇಂದ್ರ ಸರಕಾರ ಕಾನೂನು ಸುಧಾರಣೆಯ ಹೆಸರಿನಲ್ಲಿ ಕಾರ್ಮಿಕರ ಹಕ್ಕುಗಳನ್ನು ಮಾತ್ರವಲ್ಲ, ಸಂಘಟನೆ ಮಾಡುವ ಹಕ್ಕುಗಳನ್ನೇ ದಮನ ಮಾಡಲು ಹೊರಟಿದೆ. ಭಾರತದ ಕಾರ್ಮಿಕ ಸಂಘಟನೆಗಳು ಐಕ್ಯ ವೇದಿಕೆ (ಜೆ.ಸಿ.ಟಿ.ಯು)ಯಡಿ ಸರಕಾರದ ನೀತಿಗಳ ವಿರುದ್ಧ ಪ್ರತಿಭಟಿಸಿವೆ. ಆದರೆ ಇಂದು ದೇಶದ ಕಾರ್ಮಿಕ ವರ್ಗ ತನ್ನ ವರ್ಗ ಪ್ರಜ್ಞೆಯನ್ನು ಬೆಳೆಸಿಕೊಂಡಿದೆಯೇ ಎಂದು ನೋಡಿದಾಗ ನಿರಾಶೆಯಾಗುತ್ತದೆ. ಕೋಟ್ಯಂತರ ಕಾರ್ಮಿಕರು ಸೇರುವ ಈ ಪ್ರತಿಭಟನೆಗಳು ರಾಜಕೀಯ ಪ್ರತಿರೋಧವಾಗಿ ಪರಿವರ್ತನೆಯಾಗದೇ ಇರುವುದು ಸ್ಪಷ್ಟವಾಗಿ ಗೋಚರವಾಗುತ್ತಿದೆ.

ಭಾರತದ ಪ್ರಭುತ್ವ ಇಂದು ಫ್ಯಾಸಿಸ್ಟ್ ಶಕ್ತಿಗಳ ಕೈಯ್ಯಲ್ಲಿದೆ. ಫ್ಯಾಸಿಸಂ ಎನ್ನುವುದು ಉದ್ಯಮವಲಯ ಉಪಯೋಗಿಸುವ ಒಂದು ಅಸ್ತ್ರ ಎನ್ನುವುದು ಎರಡನೇ ಜಾಗತಿಕ ಯುದ್ಧದ ಸಂದರ್ಭದಲ್ಲಿ ಜರ್ಮನಿ, ಇಟಲಿ, ಸ್ಪೇನ್ ದೇಶಗಳ ಸರ್ವಾಧಿಕಾರಿಗಳು ನಡೆಸಿದ ದಮನಕಾರಿ ನೀತಿಗಳಿಂದ ಅನುಭವವಾಗಿದೆ. ಇಂದು ನಮ್ಮ ಕೇಂದ್ರ ಸರಕಾರ ಫ್ಯಾಸಿಸ್ಟ್‌ರು ಅನುಸರಿಸಿದ ಎಲ್ಲ ನೀತಿಗಳನ್ನು ಅನುಸರಿಸುತ್ತಿದೆ. ರಾಷ್ಟ್ರದ ನೈಸರ್ಗಿಕ ಸಂಪನ್ಮೂಲವನ್ನು ಲೂಟಿಕೋರ ಕಾರ್ಪೊರೇಟ್‌ವಲಯಕ್ಕೆ ಕೊಡುವುದು, ಆಡಳಿತ ಯಂತ್ರವನ್ನು ಕಾನೂನು,

ನೀತಿ–ನಿಯಮಗಳನ್ನು ಅದಕ್ಕೆ ಪೂರಕವಾಗಿ ರೂಪಿಸುವುದು, ಇದಕ್ಕೆ ಬರುವ ಅಡೆತಡೆಗಳನ್ನು ಪ್ರಭುತ್ವದ ಪೊಲೀಸ್, ಮಿಲಿಟರಿ ಪಡೆಯಿಂದ ದಮನಿಸುವುದು, ಅದರ ಕಾರ್ಯತಂತ್ರವಾಗಿರುತ್ತದೆ. ಇದೆಲ್ಲಕ್ಕಿಂತ ಮುಖ್ಯವಾಗಿ ಶೋಷಿತರನ್ನು ಶೋಷಕರ ಪರವಾದ ಸೇನೆಯನ್ನಾಗಿ, ಬೆಂಬಲಿಗರನ್ನಾಗಿ, ಮತದಾರರನ್ನಾಗಿ ರೂಪಾಂತರಗೊಳಿಸುವುದು ಫ್ಯಾಸಿಸಂನ ಮುಖ್ಯ ಲಕ್ಷಣ. ಈ ಲಕ್ಷಣ ಈಗಾಗಲೇ ಜಾರಿಯಲ್ಲಿದೆ. ಕೈಗಾರಿಕೆಗಳಲ್ಲಿ, ಟ್ರೇಡ್ ಯೂನಿಯನ್ ಹೋರಾಟಗಳಲ್ಲಿ ಆಳುವ ಪಕ್ಷಗಳಿಗೆ ಧಿಕ್ಕಾರ ಹೇಳುವ ಕಾರ್ಮಿಕ ವರ್ಗ, ರಾಜಕೀಯವಾಗಿ ನಿರ್ಣಾಯಕ ಸಂದರ್ಭ ಬಂದಾಗ ಅದೇ ಆಳುವ ಪಕ್ಷಗಳಿಗೆ ಬೆಂಬಲವಾಗಿರುತ್ತವೆ. ಇಲ್ಲವಾದರೆ ಸಂಘಟಿತ, ಅಸಂಘಟಿತ ವಲಯ ಸೇರಿ ೪೫ ಕೋಟಿಗಿಂತಲೂ ಹೆಚ್ಚಿನ ಕಾರ್ಮಿಕ ವರ್ಗವಿರುವ ನಮ್ಮ ದೇಶದಲ್ಲಿ ಕಾರ್ಮಿಕ ಹಕ್ಕುಗಳನ್ನೇ ನಾಶಮಾಡುವ ಪಕ್ಷ ಬಹುಮತದಿಂದ ಆಯ್ಕೆಯಾಗಲು ಹೇಗೆ ಸಾಧ್ಯ?

ಬ್ರಿಟಿಷ್ ಆಧಿಪತ್ಯದ ವಿರುದ್ಧ ಹೋರಾಟದೊಂದಿಗೆ ೧೯೨೦ರಲ್ಲಿ ಆರಂಭವಾದ ದೇಶದ ಸಂಘಟಿತ ಟ್ರೇಡ್ ಯೂನಿಯನ್ ಚಳಿವಳಿ ಅಲ್ಲಿಂದ ಇಲ್ಲಿಯವರೆಗೆ ಹಕ್ಕುಗಳ ಕೇಳಿಕೆಗಾಗಿ ಹೋರಾಡಿದೆ. ಆದರೆ ಇಂದು ಟ್ರೇಡ್ ಯೂನಿಯನ್‌ಗಳ ಅಸ್ತಿತ್ವಕ್ಕಾಗಿಯೇ ಹೋರಾಡುವ ಅವಶ್ಯಕತೆ ಬಂದಿದೆ. ಈಗ ಚಾಲ್ತಿಯಲ್ಲಿರುವ ಗುತ್ತಿಗೆ, ಹೊರಗುತ್ತಿಗೆ, ತಾತ್ಕಾಲಿಕ, ಸಾಂದರ್ಭಿಕ ಮುಂತಾದ ಕೆಲಸದ ವಿಧಾನಗಳಲ್ಲಿ ಈ ರೀತಿಯ ಕ್ಷೇತ್ರಗಳಲ್ಲಿ ಕಾರ್ಮಿಕ ಸಂಘಟನೆಗಳೇ ಇಲ್ಲ ಎನ್ನುವುದನ್ನು ಗಮನಿಸಬೇಕು. ಹೊಸ ಉದ್ಯೋಗಗಳ ಸೃಷ್ಟಿ ಸ್ಥಗಿತಗೊಂಡಿದೆ. ದೇಶದಲ್ಲಿ ಒಂದು ಕೋಟಿ ಉದ್ಯೋಗ ದೊರಕಿಸಬೇಕಾದ ಅಗತ್ಯ ಇರುವಲ್ಲಿ ೨೦೧೬ರಲ್ಲಿ ಕೇವಲ ಒಂದೂವರೆ ಲಕ್ಷ ಉದ್ಯೋಗ ಸೃಷ್ಟಿಯಾಗಿದೆ. ನಿರುದ್ಯೋಗ, ಹಸಿವು, ಬಡತನ, ನಿರ್ವಸತಿ, ಅನಾರೋಗ್ಯ ಇವೆಲ್ಲ ತಾಂಡವ ವಾಡುತ್ತಿರುವಾಗ ಅವುಗಳನ್ನು ನಿವಾರಣೆ ಮಾಡಲು ಮುಂದಾದರೆ ಕಾರ್ಪೊರೇಟ್ ಹಿತಾಸಕ್ತಿಗೆ ಅಡ್ಡಿಯಾಗುತ್ತದೆ. ಅದಕ್ಕಾಗಿ ಫ್ಯಾಸಿಸ್ಟ್ ಸರಕಾರ ಧರ್ಮ, ಜಾತಿ, ಹುಸಿ ಸಂಸ್ಕೃತಿ, ಹುಸಿ ದೇಶಪ್ರೇಮದ ಹೆಸರಿನಲ್ಲಿ ಜನರನ್ನು ದಿಕ್ಕು ತಪ್ಪಿಸುತ್ತದೆ. ಕಾರ್ಮಿಕ ವರ್ಗವೂ ಇದಕ್ಕೆ ಹೊರತಲ್ಲ. ದೇಶದಲ್ಲಿರುವ ೪೫ ಕೋಟಿಗಿಂತ ಹೆಚ್ಚಿರುವ ಶ್ರಮಿಕ ವರ್ಗಕ್ಕೆ ಬೇಕಾಗಿರುವುದು ಉದ್ಯೋಗ, ಅನ್ನ, ಬಟ್ಟೆ, ವಸತಿ, ಆರೋಗ್ಯ ಇಂಥ ಮೂಲಭೂತ ಸೌಕರ್ಯಗಳು. ಅವುಗಳಿಗಾಗಿ ಹೋರಾಟ ಮಾಡದಂತೆ ಫ್ಯಾಸಿಸ್ಟರು ರೂಪಿಸಿದ ಹುನ್ನಾರಗಳನ್ನು ಶ್ರಮಿಕ ವರ್ಗಕ್ಕೆ ತಿಳಿಸಿ, ಅವರಲ್ಲಿ ಶ್ರಮಿಕ ಪ್ರಜ್ಞೆ, ವರ್ಗ ಪ್ರಜ್ಞೆ ತನ್ಮೂಲಕ ರಾಜಕೀಯ ಪ್ರಜ್ಞೆ ರೂಪಿಸುವುದು ಇಂದಿನ ಕಾರ್ಮಿಕ ಸಂಘಟನೆಗಳ ಪ್ರಮುಖ ಜವಾಬ್ದಾರಿ. ಕಾರ್ಮಿಕ ಸಂಘಟನೆಗಳು ಈ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸಿದರೆ ಸಹಜವಾಗಿ ಸಣ್ಣ, ಮಧ್ಯಮ ರೈತರು, ಪುಟ್ಟ ಬಂಡವಾಳಗಾರರು, ಮಧ್ಯಮ ವರ್ಗ ಶ್ರಮಿಕ ವರ್ಗದ ಜೊತೆಗಿರುತ್ತಾರೆ. ಆಗ ಮಾತ್ರ ಹುಸಿ ಪ್ರಜಾಪ್ರಭುತ್ವವನ್ನು ಕೊನೆಗಾಣಿಸಿ ನೈಜ ಪ್ರಜಾಪ್ರಭುತ್ವವನ್ನು ಜಾರಿಗೆ ತರಲು ಸಾಧ್ಯ. ತನ್ಮೂಲಕ ಮಾರ್ಕ್ಸ್, ಎಂಗೆಲ್ಸ್ ಆಶಿಸಿದ, ಲೆನಿನ್ ಸಾಧಿಸಿದ ಸಮಸಮಾಜದ ಕನಸುಗಳನ್ನು ನನಸಾಗಿಸಲು ಸಾಧ್ಯ.

ವಿಶ್ವದ ಶ್ರಮಜೀವಿಗಳಿಗೆ 'ಹೊಸತು' ಬಳಗದ ಶುಭಾಶಯಗಳು.

## ವಿಕೋಪಕ್ಕೆ ತಲುಪಿರುವ ಭಾರತ – ಪಾಕ್ ಸಂಬಂಧ

**ಮೋ**ದಿ ಸರಕಾರ ಅಸ್ತಿತ್ವಕ್ಕೆ ಬಂದ ಮೂರೂವರೆ ವರ್ಷಗಳಲ್ಲಿ ನಿರೀಕ್ಷೆಗಳೆಲ್ಲ ಒಂದೊಂದಾಗಿ ಹುಸಿಯಾಗಿದೆ. ಅಭಿವೃದ್ಧಿ ಮಂತ್ರ ಜಪವಾಗಿ ಉಳಿದಿದೆಯೇ ಹೊರತು ಪ್ರಗತಿ ಮಾತ್ರ ಕುಂಠಿತವಾಗೇ ಇದೆ. ಪೂರ್ವಸಿದ್ಧತೆ ಇಲ್ಲದ ನಿರ್ಧಾರಗಳಿಂದ ಆರ್ಥಿಕ ಕ್ಷೇತ್ರದಲ್ಲಿ ಅಭದ್ರತೆ ತಲೆದೋರಿದೆ. ಉದ್ಯೋಗಸೃಷ್ಟಿಯ ಬದಲಾಗಿ ನಿರುದ್ಯೋಗ ಹೆಚ್ಚಿದೆ. ಭಾಜಪ ನಾಯಕರ ಬೇಜವಾಬ್ದಾರಿ ಹೇಳಿಕೆಗಳಿಂದ ದೇಶಾದ್ಯಂತ ಅಸಹಿಷ್ಣುತೆ, ಅರಾಜಕತೆ ಹೆಚ್ಚಿದೆ. ಇವೆಲ್ಲ ಆಂತರಿಕ ನೀತಿಗಳಿಗೆ ಸಂಬಂಧಿಸಿದ್ದಾದರೆ ವಿದೇಶಾಂಗ ನೀತಿಯ ಕ್ಷೇತ್ರದಲ್ಲೂ ಹಿನ್ನಡೆಯಾಗಿದೆ. ಅಧಿಕಾರ ವಹಿಸಿಕೊಂಡಾಗ ನೆರೆರಾಷ್ಟ್ರಗಳ ಜೊತೆ ಸಂಬಂಧಗಳ ಸುಧಾರಣೆಯ ಸಂಭ್ರಮ ಇದ್ದುದು ಈಗ ಭ್ರಮೆಯಾಗಿ ಪರಿಣಮಿಸಿದೆ. ಭಾರತ–ಪಾಕಿಸ್ತಾನ ಸಂಬಂಧಗಳು, ಚೀಣಾ ಹಾಗೂ ಇತರ ದೇಶಗಳೊಂದಿಗೆ ಸಂಬಂಧಗಳು ಬಿಗಡಾಯಿಸಿವೆ. ಪ್ರಧಾನಿ ಮೋದಿಯ ವಿದೇಶ ಪ್ರವಾಸ ವಿಜೃಂಭಣೆಯಿಂದ ಸಾಗಿದ್ದೇ ಸಾಧನೆ.

ಪಾಕಿಸ್ತಾನದೊಂದಿಗೆ ಸಂಬಂಧ ತೀರಾ ಹದಗೆಟ್ಟಿದೆ. ಪಾಕಿಸ್ತಾನದ ಮಿಲಿಟರಿ ಕೋರ್ಟ್ ಭಾರತದ ನಾಗರಿಕ ಕುಲಭೂಷಣ್ ಜಾಧವ್ ಮೇಲೆ ಗೂಢಚರ್ಯೆ ಆರೋಪ ಹೊರಿಸಿ ಮರಣದಂಡನೆ ವಿಧಿಸಿದ ನಂತರ ಎರಡೂ ದೇಶಗಳ ಸಂಬಂಧಗಳು ಇನ್ನಷ್ಟು ಕುಸಿದು ಸಂಘರ್ಷದ ಹಾದಿ ತಲುಪಿದೆ. ಲೋಕಸಭೆಯಲ್ಲಿ, ರಾಜ್ಯಸಭೆಯಲ್ಲಿ ಒಮ್ಮತದಿಂದ ಪಾಕಿಸ್ತಾನದ ಕ್ರಮವನ್ನು ಖಂಡಿಸಿ, ಸರಕಾರ ಜಾಧವ್‌ನನ್ನು ಬಂಧಮುಕ್ತನನ್ನಾಗಿಸಿ ವಾಪಸು ತರಲು ಕೈಗೊಳ್ಳುವ ಎಲ್ಲ ಕ್ರಮಗಳಿಗೂ ಬೆಂಬಲ ಸೂಚಿಸಲಾಗಿದೆ. ಪಕ್ಷಭೇದವಿಲ್ಲದೆ ಪಾಕಿಸ್ತಾನದ ಇಂಥ ಪ್ರಚೋದನೆ ಇದೇ ಮೊದಲಬಾರಿಯಲ್ಲ. ನಾಲ್ಕು ಬಾರಿ ಯುದ್ಧ ಸಂಬಂಧಿಸಿದ್ದಾಗ್ಯೂ ಸಮಸ್ಯೆಗಳು ಮಾತ್ರ ಬಗೆಹರಿಯಲಿಲ್ಲ. ಪ್ರತಿಸಲ ಮಾತುಕತೆ ಜರುಗಿದಾಗಲೂ ಏನಾದರೊಂದು ಪ್ರಕರಣ ಜರುಗಿ ಪರಸ್ಪರ ಅಪನಂಬಿಕೆ ಹೆಚ್ಚಾಗಿದೆಯೇ ಹೊರತು ಕಮ್ಮಿಯಾಗಲಿಲ್ಲ. ಇದಕ್ಕೆ ಕಾರಣ ಯಾರು ಎಂದು ಖಚಿತವಾಗಿ ಹೇಳಲು ಬರುವುದಿಲ್ಲ. ಅಧಿಕವಾಗಿ ಪಾಕಿಸ್ತಾನದ ನಾಗರಿಕ ಸರಕಾರ ಹಾಗೂ ಸೇನೆ ನಾಯಕತ್ವದ ಮಧ್ಯೆ ಹೊಂದಾಣಿಕೆ ಇಲ್ಲದಿರುವುದು ಎದ್ದುಕಾಣುತ್ತದೆ. ಪ್ರತಿಸಲ ಮಾತುಕತೆ ಮುರಿದುಬಿದ್ದಿರುವುದಕ್ಕೆ ಮೂಲ ಕಾಶ್ಮೀರದ ಪ್ರಶ್ನೆ. ಹಾಗೆಯೇ ಭಾರತ–ಪಾಕಿಸ್ತಾನಗಳ ಮಧ್ಯೆ ಮನಸ್ತಾಪ ವಿಪರೀತಕ್ಕೆ ಹೋದಾಗಲೆಲ್ಲ ಕಾಶ್ಮೀರದಲ್ಲೂ ಪ್ರತ್ಯೇಕವಾದಿಗಳ


ತಿಂಗಳ ಪತ್ರಿಕೆ
**ಹೊಸತು**
ನಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦–೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦–೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪–೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪–೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧–೨೪೨೪೦೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨–೨೨೪೩೦೨

ಆರ್ಭಟವೂ, ಭಯೋತ್ಪಾದಕತೆಯೂ ವರ್ಧಿಸುವುದನ್ನು ನಾವು ಕಾಣುತ್ತೇವೆ. ಈ ಪ್ರಶ್ನೆ ಬಗೆಹರಿಯದೆ ಸಂಬಂಧಗಳೂ ಸುಧಾರಿಸದು ಎನ್ನುವುದು ಸ್ಪಷ್ಟವಾಗಿದೆ. ಇದಕ್ಕೆ ಎರಡೂ ದೇಶಗಳು ಮುತ್ಸದ್ದಿತನ ಪ್ರದರ್ಶಿಸಿ ಹೊಸತನ ತೋರಿ ಪರಿಹಾರ ಕಂಡುಕೊಳ್ಳಬೇಕಾಗಿದೆ. ಯುದ್ಧೋನ್ಮಾದದಿಂದ, ಯುದ್ಧದಿಂದ ಎಂದಿಗೂ ಸಮಸ್ಯೆ ಬಗೆಹರಿಯದು.

ಲಾಹೋರ್‌ಗೂ ಭಾಜಪ ಪ್ರಧಾನಿಗಳ ಭೇಟಿಗೂ ಏನೋ ಆಗಿಬರುತ್ತಿಲ್ಲ. ಈ ಹಿಂದೆ ವಾಜಪೇಯಿ ಅಧಿಕಾರದಲ್ಲಿದ್ದಾಗ ಲಾಹೋರ್‌ಗೆ ಭೇಟಿ ನೀಡಿದ್ದರು. ಒಂದು ಮೂಲದ ಪ್ರಕಾರ ಆಗ ಅಧಿಕಾರದಲ್ಲಿದ್ದ ಜನರಲ್ ಮುಷರಫ್ ಜೊತೆ ನಡೆದ ಮಾತುಕತೆಗಳಲ್ಲಿ ಕಾಶ್ಮೀರದ ವಿಚಾರದಲ್ಲೂ ಒಪ್ಪಂದವಾಗುವ ಸೂಚನೆ ಇತ್ತು. ಆದರೆ ಆದದ್ದು ಬೇರೆಯೆ. ಈ ಭೇಟಿಯ ಬೆನ್ನಲ್ಲೇ ಕಾರ್ಗಿಲ್ ಯುದ್ಧ ಬಂತು. ಮೋದಿ ಅಧಿಕಾರಕ್ಕೆ ಬಂದಾಗ ಪಾಕಿಸ್ತಾನದ ಪ್ರಧಾನಿ ನವಾಜ್ ಷರೀಫ್ ಪ್ರಮಾಣವಚನ ಸಮಾರಂಭದಲ್ಲಿ ಭಾಗವಹಿಸಿದ್ದು ನಿರೀಕ್ಷೆಗಳನ್ನು ಮುಗಿಲಿಗೇರಿಸಿ ತ್ತು. ಮತ್ತೆ ೨೦೧೫ರಲ್ಲಿ ಪ್ರಧಾನಿ ಮೋದಿ ದಿಢೀರ್ ಎಂದು ಲಾಹೋರ್‌ಗೆ ಭೇಟಿ ನೀಡಿ ಪಾಕ್ ಪ್ರಧಾನಿ ಷರೀಫರ ಮೊಮ್ಮಗಳ ವಿವಾಹದಲ್ಲಿ ಭಾಗಿಯಾಗಿದ್ದು ರಾಯಭಾರಿ ವಲಯದಲ್ಲಿ ಹುಬ್ಬೇರಿಸಿತು. ಆದರೆ ಇನ್ನೇನೂ ಮಾತುಕತೆಗಳಿಗೆ ಪ್ರಾರಂಭವಾಗಬೇಕು ಎನ್ನುವಷ್ಟರಲ್ಲಿ ಪಠಾನ್ ಕೋಟೆ ದಾಳಿ ಸಂಭವಿಸಿತು. ನಂತರದ ದಿನಗಳಲ್ಲಿ ಪರಸ್ಪರ ವೈಮನಸ್ಯ ಮತ್ತೆ ಬೆಳೆಯ ತೊಡಗಿತು. ಸಾರ್ಕ್ ಸಮಾವೇಶ ಇನ್ನೆಂದಿಗೂ ಜರುಗದ ಸ್ಥಿತಿ ತಲುಪಿದೆ. ಸಾರ್ಕ್ ಒಂದು ರೀತಿಯಲ್ಲಿ ಸಂಬಂಧಗಳ ಸುಧಾರಣೆಗೆ ಅವಕಾಶ ಒದಗಿಸುತ್ತಿತ್ತು.

ಮರಣದಂಡನೆ ಶಿಕ್ಷೆಗೆ ಗುರಿಯಾಗಿರುವ ಜಾಧವ್‌ನನ್ನು ಬಂಧಿಸಿದ್ದು ಮಾರ್ಚ್ ೨೦೧೬ರಲ್ಲಿ. ಆತ ಹುಸೇನ್ ಮುಬಾರಕ್ ಪಟೇಲ್ ಎನ್ನುವ ಹೆಸರಿನಲ್ಲಿ ಬಲುಚಿಸ್ತಾನದಲ್ಲಿ ವಿಧ್ವಂಸ ಕೃತ್ಯಗಳಿಗೆ ಪ್ರಚೋದನೆ ನೀಡುತ್ತಿದ್ದ ಎನ್ನುವುದು ಆರೋಪ. ಈ ಬಂಧನ ಕೂಡ ಮೋದಿ ಬಲುಚಿಸ್ತಾನದ ಸ್ವಾತಂತ್ರ್ಯ ಹೋರಾಟಗಾರರಿಗೆ ಬೆಂಬಲ ಸೂಚಿಸಿದ ಮೇಲೆಯೆ ಎಂಬುದನ್ನು ಗಮನಿಸಬೇಕು. ಆರೋಪಿಯ ತಪ್ಪೊಪ್ಪಿಗೆ ಪಡೆಯಲಾಗಿದೆ ಎನ್ನುವುದು ಪಾಕಿಸ್ತಾನದ ಅಂಬೋಣ. ಇಂಥ ಪ್ರಕರಣಗಳಲ್ಲಿ ಅದು ಸಹಜ ಹುರುಳಿಲ್ಲದ್ದು. ತರಾತುರಿಯಲ್ಲಿ ಮಿಲಿಟರಿ ಕೋರ್ಟ್ ಮರಣದಂಡನೆ ವಿಧಿಸಿರುವುದೂ ಕೂಡ ನಿರಾಧಾರವಾದುದು. ಆರೋಪಿಯ ವಾದಿಸಲು ಯಾವ ವ್ಯವಸ್ಥೆಯೂ ಇರಲಿಲ್ಲ. ಆತನಿಗೆ ರಾಯಭಾರಿ ಕಚೇರಿಯನ್ನು ಸಂಪರ್ಕಿಸಲು ಅವಕಾಶ ನೀಡಲಿಲ್ಲ. ಸತ್ಯ ಎಂದೂ ಹೊರಬಾರದೇ ಹೋಗಬಹುದು. ಇಂಥ ಸನ್ನಿವೇಶಗಳಲ್ಲಿ ಇದು ಪಾಕಿಸ್ತಾನದ ಪ್ರಚೋದನಕಾರಿ ಕೃತ್ಯ ಎನ್ನುವುದರಲ್ಲಿ ಸಂಶಯವಿಲ್ಲ. ಇಂಥ ಸಂದರ್ಭದಲ್ಲಿ ಆವೇಶದ, ಉನ್ಮಾದದ ಪ್ರತಿಕ್ರಿಯೆ ಸಲ್ಲದು. ಎಲ್ಲ ಬಗೆಯ ಪ್ರಯತ್ನಗಳನ್ನು ಮಾಡಿ ಜಾಧವ್‌ನ ಪ್ರಾಣ ಉಳಿಸಿ, ವಾಪಸು ತರುವುದಕ್ಕೆ ಸರಕಾರದ ಕರ್ತವ್ಯ. ಅದಕ್ಕೆ ಭಾರತದ ಎಲ್ಲ ಜನತೆಯ ಬೆಂಬಲವೂ ಇದೆ. ಯಾವುದೇ ಕಾರಣಕ್ಕೂ ಉನ್ಮಾದಕ್ಕೆ ಬಲಿಯಾಗದೆ ಸರಕಾರ ಸಂಯಮದಿಂದ ನಡೆದುಕೊಳ್ಳಬೇಕು.

---

*(ಈ ತಿಂಗಳು 3ನೇ ಪುಟದಿಂದ)*

ನಿಜಕ್ಕೂ ಖಂಡನೀಯ. ತೇಪೆಹಾಕುವ ಕೆಲಸ ಮಾಡಿ, ಕ್ಷಮೆ ಕೋರಲು ನಿರಾಕರಿಸಿದ ಎಂ.ಪಿ.ಯನ್ನು ಭಾಜಪ ಸಚಿವರುಗಳು ಬಚಾವು ಮಾಡಿದ ರೀತಿ ನಾಚಿಕೆಗೇಡು. ಇನ್ನೂ ಈ ಎಂ.ಪಿ. ವಿಮಾನದಲ್ಲಿ ಪ್ರಯಾಣಿಸುವ ಸಾಹಸ ಮಾಡಿಲ್ಲ, ಈ ಪ್ರಕರಣದ ಹಿಂದೆಯೇ ತೃಣಮೂಲ ಕಾಂಗ್ರೆಸ್ ಎಂ.ಪಿ.ಯೊಬ್ಬರು ಒಂದು ಗಂಟೆ ತಡವಾಗಿ ಬಂದು ಪ್ರಯಾಣಿಕರನ್ನು ಕಾಯಿಸಿದ ಪ್ರಕರಣ ವರದಿಯಾಯಿತು. ಅಂತೂ ಈ ಚುನಾಯಿತ ಪ್ರಭುಗಳ ಕಾಟ ಸಾರ್ವಜನಿಕರಿಗೆ ತಪ್ಪಿದ್ದಲ್ಲ.

ಏರ್‌ಲೈನ್‌ಗಳು ಅಸಭ್ಯವಾಗಿ ವರ್ತಿಸುವ ಪ್ರಯಾಣಿಕರ ಮೇಲೆ ಭಾರೀ ಮೊತ್ತದ ದಂಡ ವಿಧಿಸಲು ಚಿಂತಿಸುತ್ತಿವೆ. ಅದು ಎಲ್ಲರಿಗೂ ಅನ್ವಯವಾಗುವುದೇ?

✶ ✶ ✶

ಕೇಂದ್ರದಲ್ಲಿ ಮೋದಿ ಸರಕಾರ ಅಧಿಕಾರಕ್ಕೆ ಬಂದಮೇಲೆ ಭಾಜಪ ಎಂ.ಪಿ.ಗಳು, ಚಿಲ್ಲರೆ ನಾಯಕರುಗಳು ಹದ್ದುಮೀರಿ ಬಾಯಿಗೆ ಬಂದಹಾಗೆ ಮಾತಾಡುವುದು ದಿನೇ ದಿನೇ ಹೆಚ್ಚಾಗುತ್ತಿದೆ. ಉತ್ತರ ಪ್ರದೇಶ, ಉತ್ತರಾಖಂಡಗಳಲ್ಲಿ ಭಾಜಪ ವಿಜಯ ಪತಾಕೆ ಹಾರಿಸಿದ ನಂತರ ಅದು ಇನ್ನಷ್ಟು ಹೆಚ್ಚಾಗಿದೆ. ದೇಶದಲ್ಲಿ ಅಸಹಿಷ್ಣುತೆ ಹೆಚ್ಚಲು, ಹಿಂದೂ ಧರ್ಮದ ಸ್ವಯಂಘೋಷಿತ ಸ್ವಯಂಸೇವಕರು ನಡೆಸುವ ಹಲ್ಲೆಗಳು ವರ್ಧಿಸಲು ಕಾರಣವಾಗಿದೆ. 'ವಿಜಿಲಾಂಟೆ ಗ್ರೂಪ್ಸ್'ನ ಪುಂಡಾಟಿಕೆ ವಿಪರೀತದ ಪ್ರಮಾಣ ಮುಟ್ಟುತ್ತಿದೆ. ಬೇಜವಾಬ್ದಾರಿ ಹೇಳಿಕೆಗಳಿಗೆ ಕಡಿವಾಣ ಹಾಕಲು ಸಿದ್ಧವಿಲ್ಲದ ಮೋದಿ-ಅಮಿತ್ ಷಾ ಜೋಡಿ ಮೌನ ಸಮ್ಮತಿಗೆ ಸೂಚಕವಾಗಿಬಿಟ್ಟಿದೆ. ಉತ್ತರ ಪ್ರದೇಶದ ನೂತನ ಮುಖ್ಯಮಂತ್ರಿಯಂತೂ ಬಹಿರಂಗವಾಗಿಯೇ ಹಿಂದುತ್ವದ ಪ್ರತಿಪಾದನೆ ಮಾಡಹೊರಟಿದ್ದಾರೆ, 'ಗೋರಕ್ಷಣೆ' ಎನ್ನುವುದು ಪುಂಡಾಟಿಕೆಗೆ ಇನ್ನೊಂದು ಹೆಸರಾಗಿಬಿಟ್ಟಿದೆ. ಈಚೆಗೆ ರಾಜಾಸ್ತಾನದಲ್ಲಿ ಆದ ಪ್ರಕರಣವನ್ನಾಗಲಿ, ಉತ್ತರ ಪ್ರದೇಶದ ಕಸಾಯಿಖಾನೆಗಳ ಮೇಲೆ ದಾಳಿಯನ್ನು ಧಿಕ್ಕರಿಸಿ ವ್ಯಾಪಾರಿಗಳು ನಡೆಸಿದ ಮುಷ್ಕರವನ್ನಾಗಲಿ ಮರೆಯದಿರೋಣ. ಅಯೋಧ್ಯೆಯ ಬಾಬರಿ ಮಸೀದಿ ಜಾಗದಲ್ಲಿ ರಾಮಮಂದಿರ ಕಟ್ಟುವ ಕನಸು ಕಾಣುತ್ತಿರುವ ಹಿಂದುತ್ವವಾದಿಗಳು ಅಲ್ಪಸಂಖ್ಯಾತರಿಗೆ ಎಚ್ಚರಿಕೆ ನೀಡಿ, ಒತ್ತಡ ತರುತ್ತಿದ್ದಾರೆ. ಮುಂದಿನ ಮೂರು ವರ್ಷಗಳಲ್ಲಿ ಮಂದಿರ ನಿರ್ಮಾಣ ಶತಸಿದ್ಧ ಎಂದು ವಿಎಚ್‌ಪಿ ನಾಯಕರು ಪ್ರಚಾರ ಮಾಡತೊಡಗಿದ್ದಾರೆ. ಭಾಜಪದ ನಾಯಕನೊಬ್ಬ ಗೋಹತ್ಯೆ ಮಾಡಿದವರ ತಲೆ ಕಡಿಯುವುದಾಗಿ ಬಹಿರಂಗವಾಗಿ ಹೇಳಿಕೊಂಡು ತಿರುಗುತ್ತಿದ್ದಾನೆ. ಮಾಜಿ ಸಂಸದ, ಆರೆಸ್ಸೆಸ್ ಮುಖವಾಣಿ 'ಪಾಂಚಜನ್ಯ' ಪತ್ರಿಕೆಯ ಸಂಪಾದಕ ತರುಣ್ ವಿಜಯ್ ಎಂಬಾತ ದಕ್ಷಿಣ ಭಾರತದ ಜನರ ವಿರುದ್ಧ ವರ್ಣಭೇದದ ಟೀಕೆ ಮಾಡಿದ್ದು ಸಾರ್ವತ್ರಿಕ ಖಂಡನೆಗೆ ಗುರಿಯಾಯಿತು. ಉತ್ತರ ಭಾರತದವರ ಶ್ರೇಷ್ಠತೆಯನ್ನು ಎತ್ತಿಹಿಡಿದು ದಕ್ಷಿಣದವರನ್ನು ಸಹಿಸುತ್ತಿರುವುದಾಗಿ ಆತ ಹೇಳಿದ್ದಕ್ಕೆ ಕ್ಷಮೆ ಕೋರಿದಾಗ್ಯೂ, ಆತನ ಕೆಟ್ಟ ಮನೋಧರ್ಮವನ್ನು ಎತ್ತಿ ತೋರಿಸುತ್ತದೆ. ಇದು ಈತನೊಬ್ಬನ ವಿಚಾರವಲ್ಲ, ಉತ್ತರ ಭಾರತದ ಅನೇಕರಲ್ಲಿ, ಅದರಲ್ಲೂ ಆರೆಸ್ಸೆಸ್, ಭಾಜಪ ಕಾರ್ಯಕರ್ತರಲ್ಲಿ ಬೇರೂರಿದೆ. 'ಮದರಾಸಿ' ಎಂದು ಕರೆಯುವ ದಕ್ಷಿಣ ಭಾರತೀಯರನ್ನು ಕೀಳಾಗಿ ಕಾಣುವ ಪ್ರವೃತ್ತಿ ಹಿಂದಿನಿಂದ ಬಂದದ್ದು, ಪ್ರಾಯಶಃ ಪುರಾಣಗಳ ಕಾಲದಿಂದಲೇ ಬಂದದ್ದು ಇರಬೇಕು. ಭಾಜಪ ನಾಯಕರ ಇಂಥ ಹೇಳಿಕೆಗಳನ್ನು ಜನ ತಿರಸ್ಕರಿಸಬೇಕು. 'ದೇಶಪ್ರೇಮ'ದ ಹೆಸರೆತ್ತುವ, ಮಾತೆತ್ತಿದ್ದರೆ 'ವಂದೇ ಮಾತರಂ' ಎಂದು ಜಪಿಸುವ ಹಿಂದುತ್ವವಾದಿಗಳ ಆಂತರ್ಯದಲ್ಲಿ ಏನಿದೆ ? ಇತ್ತೀಚೆಗೆ ಆಫ್ರಿಕನ್ ವಿದ್ಯಾರ್ಥಿಗಳ ಮೇಲೆ ನಡೆಯುತ್ತಿರುವ ಹಲ್ಲೆಗಳು ಬೆಳೆಯುತ್ತಿರುವ ಅಸಹಿಷ್ಣುತೆಗೆ ಸಾಕ್ಷಿಯಾಗಿವೆ.

✶ ✶ ✶

ಜನತಾ ಸರಕಾರ ಅಧಿಕಾರದಲ್ಲಿದ್ದಾಗ ಜನಸಂಘದವರ ಆರೆಸ್ಸೆಸ್ ಮೂಲದ ಪ್ರಶ್ನೆ ಸರಕಾರದ ಅಸ್ತಿತ್ವಕ್ಕೇ ಮುಳುವಾಯಿತು. ಕಾಂಗ್ರೆಸ್ಸನ್ನು ವಿರೋಧಿಸಿದ ಎಲ್ಲ ಪಕ್ಷಗಳೂ ಆಗ ಅಸ್ಮಿತೆಯನ್ನು ಕಳೆದುಕೊಂಡು ಒಂದಾಗಿದ್ದವು. ಈಗ ಭಾಜಪ ಮತ್ತು ಮಾತೃ ಸಂಸ್ಥೆ ಆರೆಸ್ಸೆಸ್‌ನ ಮಧ್ಯೆ ವ್ಯತ್ಯಾಸವೇನಿಲ್ಲ. ಷಾ-ಮೋದಿ ಅಧಿಕಾರಕ್ಕೆ ಬಂದಮೇಲೆ ಆರೆಸ್ಸೆಸ್ ಪ್ರಮುಖರು ಭಾಜಪದ ಉನ್ನತ ಹುದ್ದೆ ಅಲಂಕರಿಸಿದ್ದಾರೆ. ಆರೆಸ್ಸೆಸ್ ನಾಯಕರು, ಸರಸಂಘ ಚಾಲಕ ಮೋಹನ ಭಾಗವತ್‌ರವರು ಬಹಿರಂಗವಾಗಿಯೇ ಸರಕಾರಕ್ಕೆ ಆದೇಶಗಳನ್ನು ನೀಡುತ್ತಿದ್ದಾರೆ. ಈಚೆಗೆ ಈ ಭಾಗವತ ಗೋಹತ್ಯೆ ನಿಷೇಧಕ್ಕೆ ಕೇಂದ್ರ ಸರಕಾರವೇ ದೇಶವ್ಯಾಪಿ ಕಾಯಿದೆ ರೂಪವನ್ನೂ ಕೊಡಬೇಕೆಂದು ಆಗ್ರಹಿಸಿದ್ದಾರೆ. 'ನಮ್ಮ ಸ್ವಯಂಸೇವಕರು ಆಡಳಿತದಲ್ಲಿರುವ ರಾಜ್ಯಗಳು ಅಂಥ ಕಾನೂನು ರಚಿಸಿವೆ' ಎಂದೂ ಹೇಳಿದ್ದಾರೆ. ಕೇಂದ್ರದಲ್ಲಿ ಆಡಳಿತಾರೂಢವಾಗಿರುವವರೂ ಕೂಡ ಸ್ವಯಂಸೇವಕರೇ ಎಂದು ಭಾಗವತರೇ ಒಪ್ಪಿಕೊಂಡಿದ್ದಾರೆ ಎಂದಾಯಿತು. ಸಾಂಸ್ಕೃತಿಕ ಸಂಘಟನೆ ಎಂದು ಬಣ್ಣಿಸಿಕೊಳ್ಳುವ ಆರೆಸ್ಸೆಸ್ ನಿಜವಾದ ಬಣ್ಣ ಬಯಲಾಗಿದೆ. ಆರೆಸ್ಸೆಸ್ ಕೈವಾಡವನ್ನು ಭಾಜಪ ಇನ್ನು ಮರೆಮಾಚುವಂತಿಲ್ಲ.

✶ ✶ ✶

ಕಾಂಗ್ರೆಸ್‌ನ ಹಳೆಯ ತಲೆಗಳು ಜೀರ್ಣೋದ್ಧಾರ ಮಾಡಿಕೊಳ್ಳುವ ತಯಾರಿ ನಡೆಸುವುದಕ್ಕೆ ಹಲವು ಮಾದರಿಗಳಿವೆ. ಒಂದು ಶ್ರೀ. ಎಸ್. ಎಂ. ಕೃಷ್ಣ ಅನುಸರಿಸಿರುವ ನೇರ ಮಾರ್ಗ. ತಮ್ಮ ಹಿಂದಿನ ಸಂಸ್ಕಾರಗಳನ್ನೆಲ್ಲಾ ತೆಗಳಿ ಹೊಸ ಪರ್ವದ ಆರಂಭ

ಮಾಡಿಕೊಳ್ಳುವುದು ಒಂದು ವಿಧಾನ. ಎರಡನೆಯದು ಜಾಫರ್ ಷರೀಫ್ ಅವರ ನಡೆ. ಕೃಷ್ಣ ಅವರು ಅಮಿತ್ ಷಾ ಅವರನ್ನು ಓಲೈಸಿ ಅವರ ಪಕ್ಷವನ್ನು ಪ್ರವೇಶಿಸಿದರು. ಷರೀಫ್ ಅವರು ಆರೆಸ್ಸೆಸ್‌ನ ಮುಖ್ಯಸ್ಥರಾದ ಶ್ರೀ. ಮೋಹನ್ ಭಾಗವತ್ ಅವರಿಗೆ ರಾಷ್ಟ್ರಾಧ್ಯಕ್ಷ ಪದವಿ ಕೊಡಬೇಕೆಂದು ಆಗ್ರಹಿಸಿ ತಾವು ಬೆಳಕಿಗೆ ಬರಲು ಯತ್ನಿಸಿದ್ದಾರೆ. ಅವರ ಮಾತನ್ನು ಪುರಸ್ಕರಿಸಬೇಕೆಂಬ ಕಾಳಜಿ ಅವರಲ್ಲಿ ಯಾವ ಮಟ್ಟದಲ್ಲಿದೆಯೋ ತಿಳಿಯದು. ಸ್ವತಃ ಭಾಗವತ್ ರಾಷ್ಟ್ರಾಧ್ಯಕ್ಷರಾಗಲು ತವಕದಿಂದ ಕಾಯುತ್ತಿಲ್ಲವೆಂಬುದು ಲೋಕಕ್ಕೆಲ್ಲಾ ತಿಳಿಸಿದೆ. ಅಧ್ಯಕ್ಷರಾಗದೆಯೇ ದೇಶದ ಹಾದಿಯನ್ನು ನಿಷ್ಕರ್ಷಿಸಿ ನಿರ್ದೇಶಿಸುವ ಸ್ಥಾನ ಅವರದು. "ಅವನಿಲ್ಲದೆ ಒಂದು ಹುಲ್ಲುಕಡ್ಡಿಯೂ ಅಲುಗದು" ಎಂದು ಪರಮಾತ್ಮನ ಬಗ್ಗೆ ಹೇಳುತ್ತಿದ್ದುದುಂಟು. ಭಾರತೀಯ ಜನತಾ ಪಕ್ಷದ ಆಳ್ವಿಕೆಯಲ್ಲಿ ಭಾಗವತ್ ಅವರಿಗೆ ಪರಮಾತ್ಮನ ಸ್ಥಾನವಲ್ಲದಿದ್ದರೂ ಅವನ ಪೌರುಷ ಅವರ ಬೆನ್ನಿಗಿದೆ. ಅಂಥವರನ್ನು ರಾಷ್ಟ್ರಾಧ್ಯಕ್ಷರನ್ನಾಗಿಸಲು ಷರೀಫರಂತಹ ಹುಲ್ಲುಕಡ್ಡಿಗಳ ಸಂಧಾನವಾಗಲಿ, ಬೆಂಬಲವಾಗಿ ಬೇಕಿಲ್ಲ. ಹಾಗಿದ್ದರೆ ಈ "ಸನ್ಮಾನ್ಯರು" ಮೂಗುತೂರಿಸಿರುವುದೇಕೆ ? ಅವರಿಗೆ ಪಾರ್ಲಿಮೆಂಟ್ ಚುನಾವಣೆಯಲ್ಲಿ ಟಿಕೆಟ್ ದೊರೆತಿರಲಿಲ್ಲ. ಆ ಮುನಿಸು ಅವರಲ್ಲಿ ಜೀವಂತವಾಗಿದೆ. ಅವರ ಮಗನೋ ಮೊಮ್ಮಗನೋ ಶಾಸನಸಭೆಗೆ ಸ್ಪರ್ಧಿಸಲು ಕಾಂಗ್ರೆಸ್ ಅವಕಾಶ ಕೊಟ್ಟಿತ್ತು. ಈ ಕಾಂಗ್ರೆಸ್ ಮುದುಕರ ರಾಜಕೀಯ ಪ್ರಜ್ಞೆ ವಿಚಿತ್ರವಾದ್ದು : "ನಮಗೆ ನಾಯಕತ್ವ ನೀಡಲಾಗಿಲ್ಲ ಎಂಬ ಕೊರಗು ! ಇವರಿಗೆ ಯಾರೇನು ನಾಯಕತ್ವ ಕರುಣಿಸಬೇಕು, ಯಾವುದಾದರೂ ಸಿದ್ಧಾಂತ, ನಿಷ್ಠೆ, ಜನಪರ ಕಾಳಜಿ ಇದ್ದಲ್ಲಿ ನೇರವಾಗಿ ರಾಜಕೀಯ ರಂಗದಲ್ಲಿ ತಾವೇ ಜನರನ್ನು ಸಂಘಟಿಸಬಹುದಲ್ಲವೆ ? ಎಂದಾದರೂ ಈ ಮಂದಿ ಜನಸಮುದಾಯದ ಅಗತ್ಯಗಳನ್ನು ಈಡೇರಿಸುವ ಸಲುವಾಗಿ ಜನತೆಯ ಜೊತೆ ಬೀದಿಗಳಲ್ಲಿ ಹೆಜ್ಜೆ ಹಾಕಿರುವುದುಂಟೆ ? ಅವರಿಗೆ ಪ್ರತಿಷ್ಠಿತ ಅಧಿಕಾರ ಸ್ಥಾನಗಳು ಬೇಕು. ಏನು ಮಾಡುವುದಕ್ಕೆ ಅಧಿಕಾರ ಎಂಬ ಪ್ರಶ್ನೆ ಅವರನ್ನು ಬಾಧಿಸುವುದಿಲ್ಲ. ಕೆಂಪುದೀಪದ ವಾಹನ, ಹಾರ-ತುರಾಯಿ ಹರಿದುಬರುವ ಸ್ಥಾನ, ಒಂದಷ್ಟು ಹಣ ಮತ್ತು ಭೂಮಿಯನ್ನು ಹೇಗೋ ಹೆಚ್ಚಿಸಿಕೊಳ್ಳುವ ಅವಕಾಶ, ಇವಿಷ್ಟಿದ್ದರೆ ಸಾಕು. ದೇಶದಲ್ಲಿ ಅಲ್ಪಸಂಖ್ಯಾತರ ಮೇಲೆ ಹಲ್ಲೆಗಳು ನಡೆದಾಗ ಷರೀಫರ ನಾಲಿಗೆ ಏಕೆ ಸೇದುಹೋಗಿತ್ತು ? ಕಾವೇರಿ ನೀರಿನ ತಕರಾರು ಭೀಕರವಾಗಿದ್ದಾಗ ಭೀಷ್ಮಾಚಾರ್ಯ ಸೋಮನಹಳ್ಳಿ ಕೃಷ್ಣ ಅವರೇಕೆ ರೈತರೊಡನೆ ರಸ್ತೆಗಳಲ್ಲಿ ಕಾಣಿಸಿಕೊಳ್ಳಲಿಲ್ಲ ? ಅಲ್ಲಿ ನಾಯಕಸ್ಥಾನ ಖಾಲಿ ಇರಲಿಲ್ಲವೆ ? ಹೋಗಲಿ, ಭದ್ರಾವತಿ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಯನ್ನು ಮೋದಿ ಸರ್ಕಾರ ಮಾರಾಟಕ್ಕಿಟ್ಟಿದೆ, ಬಹಳ ಕನಿಷ್ಠ ಮೊಬಲಗಿಗೆ ಅದು ಯಾವನೋ ಧೂರ್ತ ಬಂಡವಳಿಗನಿಗೆ ಸೇರಿಬಿಡುತ್ತದೆ. ಅದೆಷ್ಟು ವಿಸ್ತೀರ್ಣವಾದ ಭೂಮಿ, ಅದೆಷ್ಟು ಕಟ್ಟಡಗಳ ರಾಶಿ, ಎಲ್ಲವೂ ಬಂಡವಳಿಗ ಭಿಕಾರಿಗಳಿಗೆ ಕಿಲುಬುಕಾಸಿಗೆ ದೊರೆತುಬಿಡುತ್ತದೆ. ಹಿಂದೆ ಬೆಂಗಳೂರಿನ ಅಶೋಕ ಹೋಟೇಲನ್ನು ಕೇಂದ್ರ ಸಚಿವ ಶ್ರೀ. ಅನಂತಕುಮಾರ್ ಮಾರಿ ಶ್ರೇಯಸ್ಸು, ಲಕ್ಷ್ಮೀಕಟಾಕ್ಷ, ಪಡೆದರಲ್ಲಾ ಹಾಗೆ. ಷರೀಫ್ ಆಗ ಸೊಲ್ಲೆತ್ತಲು ಮುಂದೆ ಬರಲಿಲ್ಲ, ಈಗ ಶ್ರೀ. ಮೋಹನ ಭಾಗವತರಿಗೆ ರಾಷ್ಟ್ರಾಧ್ಯಕ್ಷ ಪದವಿ ಕೊಡಿಸಬೇಕೆಂದು ತವಕಿಸುತ್ತಾರೆ. ತಮ್ಮ ಮೇಲೇನಾದರೂ ತನಿಖೆಗಳ ಸಾಧ್ಯತೆ ಇದ್ದರೆ ಅದರಿಂದ ಪಾರಾಗಲು ಇದೂ ಒಂದು ಮಾರ್ಗ. ಮಾನ್ಯ ಕೃಷ್ಣ ಅವರಿಗೆ ಅಂತಹ ಒತ್ತಡವಿತ್ತೆಂದು ಸದಾಶಿವನಗರದಲ್ಲಿ ಅನೇಕ ಹಿರಿಯರು ಮಾತನಾಡಿಕೊಳ್ಳುತ್ತಿದ್ದಾರೆ. ಷರೀಫರಿಗೆ ಅದಕ್ಕಿಂತಲೂ ಗಹನವಾದ ಬೇರೇನು ತುರ್ತು ಇದೆಯೋ ತಿಳಿಯದು." "ಮಾನ್ಯ ಮೋಹನ ಭಾಗವತರೆ, ನೀವು ಅಧ್ಯಕ್ಷರಾಗಿ ದಯವಿಟ್ಟು ಅಲ್ಪಸಂಖ್ಯಾತರ ಮೇಲಿನ ಹಲ್ಲೆಗಳಿಗೆ ಕಡಿವಾಣ ಹಾಕಿ" ಎಂದು ಬೇಕಾದರೂ ಷರೀಫರು ಹೇಳಬಹುದಿತ್ತು. ಯಾವುದೂ ಇಲ್ಲ, ಮೋಜು ಮತ್ತು ಮೇಜವಾನಿ ಸಾಕು ಅವರಿಗೆ. ಇಂತಹ ರಾಜಕಾರಣ ಮಾಡುವ ಕಾಂಗ್ರೆಸ್‌ಗೆ ಇನ್ನೆಂತಹ ಅದ್ಭುತ ಭವಿಷ್ಯವಿದ್ದೀತು ! ಅಂತಹ ಪಕ್ಷವು ರಾಷ್ಟ್ರದಲ್ಲಿ ಮಾನ್ಯ ಮೋದಿಯವರ ಪಕ್ಷದ ವಿರುದ್ಧ ಮಹಾನ್ ಸಂಯುಕ್ತ ರಾಜಕೀಯ ರಂಗವನ್ನು ಬೆಸೆಯಲು ಮುಂದಾಗ ಬೇಕೆಂಬ ಬಿಹಾರ ಮುಖ್ಯಮಂತ್ರಿ ಶ್ರೀ. ನಿತೀಶ್ ಕುಮಾರರ ಆಶಯವನ್ನು ಪೂರೈಸಲು ಶಕ್ತವಾಗಿದೆಯೆ? ಇನ್ನೇನೂ ಮಾಡಲು ಸಾಧ್ಯವಿಲ್ಲದಿದ್ದರೆ ರಾಹುಲ್ ಗಾಂಧಿ ಕೂಡಲೆ ಶ್ರೀ. ಮಲ್ಲಿಕಾರ್ಜುನ ಖರ್ಗೆಯವರಿಗೆ ಕಾಂಗ್ರೆಸ್ ಅಧ್ಯಕ್ಷ ಪದವಿ ಕೊಡಿಸಿ ಅವರಿಂದ ರಾಜಕೀಯದ ಅ-ಆ-ಇ-ಈ ಕಲಿಯಬಹುದಲ್ಲ !

*  *  *

ದೇಶದ ಹಲವೆಡೆ ನಡೆಯುತ್ತಿರುವಂತೆ ರಾಜಸ್ತಾನದಲ್ಲೂ ನಡೆಯಿತು, ಆದರೆ ಒಂದೆರಡು ಪಟ್ಟು ಜಾಸ್ತಿ, ಅಷ್ಟೆ. ಬೇರೆಡೆಗಳಲ್ಲಿ (ಮಂಗಳೂರು, ದಾದ್ರಿ, ಗುಜರಾತಿನ ಹಳ್ಳಿ, ಇತ್ಯಾದಿ) ಸಾಮಾನ್ಯವಾಗಿ ಹಲ್ಲೆ, ಪೆಟ್ಟು, ಸುಳ್ಳು ಆಪಾದನೆ ಮತ್ತು ದೂರು ಇರುತ್ತಿತ್ತು (ಉದಾಹರಣೆ : ತುಮಕೂರು). ರಾಜರ ಆಸ್ಥಾನಗಳಿಂದ ತುಂಬಿದ ಶ್ರೀಮತಿ. ವಸುಂಧರಾ ಅವರ ರಾಜ್ಯದಲ್ಲಿ ಕೇವಲ ಪೆಟ್ಟಾದರೆ ಅದು ಸುದ್ದಿಯಲ್ಲ; ಆದ್ದರಿಂದ ಒಬ್ಬ ವ್ಯಕ್ತಿಯ ಕೊಲೆ ನಡೆದುಹೋಯಿತು. ಅದೂ ರಾಜ್ಯದ ಒಂದು ಹೆದ್ದಾರಿಯಲ್ಲಿ ಮತ್ತು ನೂರಾರು ಮಂದಿ ಸಾರ್ವಜನಿಕರೆದುರು. "ಹಸುಗಳನ್ನು ಕದ್ದೊಯ್ದು ಕೊಲ್ಲುತ್ತಾರೆ" ಎಂಬ ಸುಳ್ಳು ವದಂತಿ ಹಬ್ಬಿಸಿ, ಕೆಲವು ಅಲ್ಪಸಂಖ್ಯಾತರನ್ನು ಚೆನ್ನಾಗಿ ಥಳಿಸಿ, ಒಬ್ಬನನ್ನು ಸೂರ್ಯನ ಪ್ರಕಾಶದಡಿ ಕೊಚ್ಚಿಹಾಕಲಾಯಿತು. ಭಾರತೀಯ ಸಂಸ್ಕೃತಿಯ ಸಂರಕ್ಷಕರು ತಾವೆಂದು ಹೇಳಿಕೊಳ್ಳುವ ಶುದ್ಧ ಅಸಂಸ್ಕೃತರ ಬರ್ಬರ ಕೃತ್ಯ ಇದು. ದನ ಕೊಂಡೊಯ್ಯುತ್ತಿದ್ದವರ ಬಳಿ ಎಲ್ಲ ದಾಖಲೆಗಳೂ ಇದ್ದವು, ಅದನ್ನವರು ಹೇಳಿದರು ಮತ್ತು ತೋರಿಸಿದರು. ಆದರೂ ಹಾಡುಹಗಲೇ ಕೊಲೆಯಾಯಿತು. ಕೊಲೆಗಡುಕರ ಚಿತ್ರಗಳು ಇಡೀ ದೇಶದ ಮುಂದೆ ಪ್ರಚಾರಗೊಂಡಿವೆ, ಆದರೆ ರಾಜಸ್ತಾನದ ಪೊಲೀಸರು ಹಲ್ಲೆಕೋರರ "ಶೋಧ" ನಡೆಸುತ್ತಿದ್ದಾರೆ ! ಭಾರತೀಯ ಜನತಾ ಪಕ್ಷದ ವಕ್ತಾರರಾದ ಒಬ್ಬ ಮಹಿಳೆ ಹೇಳುತ್ತಾರೆ, "ಕಾನೂನುಕ್ರಮ ತನ್ನದೇ ಜಾಡಿನಲ್ಲಿ ನಡೆದುಬರುತ್ತದೆ" ಎಂದು. ಅಂದರೆ, "ಕೊಲೆ ಮಾಡಿದ್ದಕ್ಕೆ ಸ್ವೀಕಾರಾರ್ಹವಾದ ಸಾಕ್ಷಿಗಳು ದೊರೆಯಲಿಲ್ಲ" ಎಂದು ಹೇಳುವುದಿರಬೇಕು. ರಾಜಸ್ತಾನದ ಒಬ್ಬ ಹಿರಿಯ ಸಚಿವರು ಕೊಲೆಯನ್ನು ಕೊಲೆಯೆಂದು ಮಾನ್ಯಮಾಡಲು ಸಿದ್ಧರಿಲ್ಲ, ಹಲ್ಲೆಗೆ "ಏನೋ ಒಳ್ಳೆಯ ಕಾರಣ ಇರಬೇಕು" ಎಂದವರು ಉದ್ಗರಿಸಿದ್ದಾರೆ. ತುರ್ತು ಪರಿಸ್ಥಿತಿಯಲ್ಲಿ ನಾಗರಿಕ ಹಕ್ಕುಗಳನ್ನು ದಮನ ಮಾಡಲಾಯಿತೆಂದು ಹೇಳುವ ಬಿಜೆಪಿ ಈ ಕೊಲೆಯನ್ನು ಸಮರ್ಥಿಸಿಕೊಂಡರೆ ಅದೊಂದು ವಿಕೃತ ವ್ಯಂಗ್ಯವಾಗುತ್ತದೆ. "ಪರವಾನಗಿ ಇಲ್ಲದ" ಕಸಾಯಿಖಾನೆಗಳನ್ನು ಮುಚ್ಚಲಾಗುತ್ತದೆ ಎಂದು ಹೇಳುತ್ತಾ ಅಧಿಕೃತ ಪರವಾನಗಿ ಇರುವ ಘಟಕಗಳನ್ನೂ ಮುಚ್ಚಿಸಿರುವುದು ಉತ್ತರ ಪ್ರದೇಶದ ಮುಖ್ಯಮಂತ್ರಿ ಆದಿತ್ಯನಾಥರ ಪ್ರತಾಪ. ಯಾವ ಕಾನೂನು, ಯಾರಿಗೆ ಶಿಕ್ಷೆ, ಯಾರಿಗೆ ರಕ್ಷಣೆ, ಯಾವ ಸಂಸ್ಕೃತಿ, ಎಂತಹ ಮತಿಭ್ರಷ್ಟತೆ, ಎಂದು ದೇಶವು ಅವಾಕ್ಕಾಗಿದೆ. ಅದನ್ನು ಖಂಡಿಸಿ ಕಾಂಗ್ರೆಸ್ ಪಕ್ಷವು ರಾಜಸ್ತಾನದಲ್ಲಿ ಹತ್ತು ಜನಗಳ ಪ್ರತಿಭಟನಾ ಮೆರವಣಿಗೆ ಸಹ ನಡೆಸುವುದಿಲ್ಲ ! ಅದೆಂತಹ ರಾಜಕೀಯ ಪಕ್ಷವೆಂದು ಅಚ್ಚರಿಯಾಗುತ್ತದೆ. ಇಂತಹ ದುರುಳ ಪಟಾಲಂಗಳು ದೇಶದೆಲ್ಲೆಡೆ ಅಧ್ವಾನದ ಅಧ್ವರ್ಯುಗಳಾಗಿದ್ದರೂ ಅವುಗಳ ವಿರುದ್ಧ ಐಕ್ಯ ರಾಜಕೀಯ ಹೋರಾಟವನ್ನು ರೂಪಿಸಲಾಗುತ್ತಿಲ್ಲ ಎನ್ನುವುದು ನಮ್ಮ ದುರಂತ. ಒಂದು ಹೇಳಿಕೆ, ಒಂದು ಫೇಸ್‌ಬುಕ್ ಸಂದೇಶ, ಒಂದು ಟಿ.ವಿ. ಚಾನಲ್ಲಿನಲ್ಲಿ ಘೋರ ಚರ್ಚೆ, ಅಲ್ಲಿಗೆ ಮುಗಿಯಿತು. ತುರ್ತುಪರಿಸ್ಥಿತಿಯ ಹಲ್ಲೆಗಳನ್ನು ಹತ್ತು ಪಟ್ಟು, ನೂರು ಪಟ್ಟು, ಮೀರಿರುವ ಸನ್ನಿವೇಶ ನಮ್ಮದು. ನ್ಯಾಯಾಂಗವು ಮೌನದಿಂದ ತನ್ನದೇ ಧ್ಯಾನದಲ್ಲಿ ಮುಳುಗಿಹೋಗಿದೆಯೆ?

ಫ್ಯಾಸಿಸಂ ಅಂದರೇನು ಎಂಬ ವ್ಯಾಖ್ಯಾನವು ಪಠ್ಯಪುಸ್ತಕಗಳಿಂದ ತಿಳಿಯಬೇಕಾಗಿಲ್ಲ. ಈಗ ಎರಡು ವರ್ಷಗಳಲ್ಲಿ ದೇಶದ ಜನತೆ ಅದನ್ನು ಪ್ರತ್ಯಕ್ಷವಾಗಿ ಕಾಣುತ್ತಾ ಬಂದಿದೆ. ಉತ್ತರ ಪ್ರದೇಶದ ಚುನಾವಣಾ ಫಲಿತಾಂಶ ಬಂದಮೇಲೂ ಕಾಂಗ್ರೆಸ್, ಎಸ್.ಪಿ., ಬಿ.ಎಸ್.ಪಿ., ಜನತಾ ಪಕ್ಷ, ಕಮ್ಯುನಿಸ್ಟ್ ಪಕ್ಷಗಳು, ಕಲೆತು ಚರ್ಚೆ ಮಾಡಲು ಉತ್ಸಾಹ ತೋರಿಲ್ಲದಿರುವುದು ಆತಂಕಕಾರಿಯಾಗಿದೆ. ಇನ್ನೆಷ್ಟು ಕೊಲೆಗಳ ನಂತರ ನಾವು ಎಚ್ಚೆತ್ತುಕೊಳ್ಳುತ್ತೇವೆಂದು ಜ್ಯೋತಿಷ್ಯ ಕೇಳಬೇಕೇನು ? ಗುಜರಾತಿನ ಒಬ್ಬ "ಪ್ರಜ್ಞಾವಂತ" ಸಚಿವರು ಹೇಳಿದರಂತೆ, "ಯಾರಾದರೂ ಗೋವುಗಳನ್ನು ದುರುಗುಟ್ಟಿ ನೋಡಿದರೆ ಅವರನ್ನು ಶಿಕ್ಷಿಸಲಾಗುತ್ತದೆ" ಎಂದು. ಸೌಜನ್ಯಮೂರ್ತಿ ಗೋವಿಗೆ ದುರುಗುಟ್ಟುವಿಕೆ ಎಂಬುದು ತಿಳಿಯುತ್ತದೆಯೆ ? ಸೌಮ್ಯವಾದ ಗೋವಿಗೆ ಗೌರವ ತೋರುವುದೆಂದರೆ ಇಂತಹ ಬಾಲಿಶ ಹೇಳಿಕೆಗಳನ್ನು ನೀಡುವುದೇ ಏನು? ಒಟ್ಟಿನಲ್ಲಿ ನೈಜ ಭಾರತೀಯ ಸಂಸ್ಕೃತಿಯು ಪೇಚಿಗೆ ಸಿಲುಕುತ್ತಿದೆ. ಐದು ಸಾವಿರ ವರ್ಷಗಳ ಇತಿಹಾಸ ಇರುವ ನಮ್ಮ ದೇಶದಲ್ಲಿ ಇದಾಗಕೂಡದು. ☐




✉ ಏಪ್ರಿಲ್ ೨೦೧೭ರ 'ಹೊಸತು' ಸಂಚಿಕೆ ಪುಟ ೬೦ರಲ್ಲಿ 'ಮಕ್ಕಳ ಗ್ರಾಮಸಭೆ' ಕುರಿತು ಒಂದು ಸಲ್ಲದ ವ್ಯಂಗ್ಯ ಚಿತ್ರದ ಬಗ್ಗೆ ನನ್ನ ಅನಿಸಿಕೆ. ಅದನ್ನು ಬರೆದಿರುವ ಶ್ರೀ ಗೋಪಿಯವರಿಗೆ 'ಮಕ್ಕಳ ಹಕ್ಕುಗಳ ಗ್ರಾಮಸಭೆ' ಕುರಿತು ಸ್ಪಷ್ಟ ಅರಿವಿಲ್ಲವೆಂದು ಭಾವಿಸುತ್ತೇನೆ. ವಾಸ್ತವವಾಗಿ, ಈ ಗ್ರಾಮಸಭೆಯಲ್ಲಿ ಸಾಕಷ್ಟು ಗದ್ದಲವಾಗುತ್ತದೆ, ಜಗಳವೂ ಆಗುತ್ತದೆ, ಗಲಾಟೆ ಖಂಡಿತ ಆಗುತ್ತದೆ. ಪರಿಹಾರಗಳಿಗೆ ಮಕ್ಕಳು ಮತ್ತು ಸಂಬಂಧಿಸಿದವರೆಲ್ಲರೂ ಒತ್ತಾಯಿಸುತ್ತಾರೆ. ಇದೆಲ್ಲವೂ ಮಕ್ಕಳ ಹಿತದೃಷ್ಟಿಯಿಂದ ಪ್ರಸ್ತಾಪಿಸಲಾಗುವ ವಿಚಾರಗಳ ಹಿನ್ನೆಲೆಯಲ್ಲಿ ಅನಿವಾರ್ಯವಾಗುತ್ತದೆ.

ಬಹಳಷ್ಟು ಕಡೆ ಶಾಲೆ, ಅಂಗನವಾಡಿ, ಆಟದ ಮೈದಾನ ಇತ್ಯಾದಿಗಳನ್ನು ಯಾರೋ ಬಲಾಢ್ಯರು ದಕ್ಕು ಹಾಕಿಕೊಂಡಿರುತ್ತಾರೆ. ಈ ವಿಚಾರವನ್ನು ಮಕ್ಕಳೋ, ಹಿರಿಯರೋ, ಶಿಕ್ಷಕರೋ ಎತ್ತಿದಾಗ ಗದ್ದಲ ಸಾಮಾನ್ಯ. ಶಾಲೆಗಳ ಆವರಣವನ್ನು ಕಿಡಿಗೇಡಿಗಳು ತಮ್ಮ ಸಮಾಜ ಸಮ್ಮತವಲ್ಲದ ಚಟುವಟಿಕೆಗಳಿಗೆ ಬಳಸುತ್ತಿರುವುದನ್ನು ಹೇಳಿದರೆ, ಹೆಣ್ಣುಮಕ್ಕಳು ಶಾಲೆಗೆ ಹೋಗಿಬರುವಾಗ ಇಲ್ಲವೇ ಶೌಚಕ್ಕೆ ಹೋಗಿಬರುವಾಗ ಕಿಡಿಗೇಡಿಗಳು ನಡೆಸುವ ಅಸಭ್ಯ ವರ್ತನೆಗಳನ್ನು ಸಭೆಯಲ್ಲಿ ಹೇಳಿದಾಗ 'ಮಕ್ಕಳ ಹಕ್ಕುಗಳ ಗ್ರಾಮಸಭೆ'ಯಲ್ಲಿ ಕಸಿವಿಸಿ ಉಂಟಾಗುತ್ತದೆ. ಸ್ಥಳೀಯ ಆರೋಗ್ಯಕೇಂದ್ರದಲ್ಲಿ ಮಕ್ಕಳಿಂದಲೂ ಶುಲ್ಕ / ಲಂಚ ಕೊಡಲೇಬೇಕೆಂದು ಕೇಳುತ್ತಾರೆ ಎಂದು ದೂರು ಬರುತ್ತದೆ. ಜಾತಿ, ಧರ್ಮದ ತಾರತಮ್ಯದಿಂದಾಗಿ ಒಂದಷ್ಟು ಮಕ್ಕಳಿಗೆ ಯಾವುದಾದರೂ ನಿರ್ದಿಷ್ಟ ಸೇವೆ, ಸೌಲಭ್ಯ ಸಿಗುತ್ತಿಲ್ಲವೆಂದು ಬಹಿರಂಗಪಡಿಸಿದಾಗ ಸಂಚಲನ ಉಂಟಾಗುತ್ತದೆ. ಬಾಲ ಕಾರ್ಮಿಕರಿರುವುದು, ಮಕ್ಕಳ ಸಾಗಣೆಯಾಗುತ್ತಿರುವುದು, ಮಕ್ಕಳ ಮದುವೆ ಯಾಗುವುದು, ೧೮ ವರ್ಷದೊಳಗಿನವರು ಗರ್ಭಿಣಿ ಆಗುತ್ತಿರುವುದು, ತಾಯಂದಿರ ಮರಣ, ಮಕ್ಕಳ ಅಂಗವಿಕಲತೆಯ ವಿಚಾರಗಳು, ಶಾಲೆಗಳು, ಅಂಗನವಾಡಿಗಳು ಸಮರ್ಪಕವಾಗಿ ನಡೆಯ ದಿರುವುದು... ಇವೆಲ್ಲವೂ 'ಮಕ್ಕಳ ಹಕ್ಕುಗಳ ಗ್ರಾಮಸಭೆ'ಯಲ್ಲಿ ಸಾಕಷ್ಟು ಬಿಸಿಬಿಸಿ ಚರ್ಚೆಗೆ ಕಾರಣ ವಾಗುತ್ತದೆ. ತಮ್ಮ ಸುತ್ತಮುತ್ತಲ ಬೆಳವಣಿಗೆಗಳನ್ನು ಮಕ್ಕಳೂ ಅರಿತುಕೊಳ್ಳಲು ಮತ್ತು ಜಾಗೃತರಾಗಲು ಸಾಕಷ್ಟು ಅವಕಾಶಗಳು ಇಲ್ಲಿ ಸಿಗುತ್ತಿವೆ. ತಳಮಟ್ಟದ ಜನಪ್ರತಿನಿಧಿಗಳೂ ಕೂಡ ಗ್ರಾಮಪಂಚಾಯಿತಿಯ ಕೆಲಸವೆಂದರೆ ಕೇವಲ ಕಾಮಗಾರಿಗಳು ಎನ್ನುವ ಭಾವನೆಯಿಂದ ಹೊರಬರುತ್ತಿದ್ದಾರೆ. ಗ್ರಾಮ ಪಂಚಾಯಿತಿಗಳ ಸದಸ್ಯರ ತರಬೇತಿಯಲ್ಲಿ ಈಗ ಮಕ್ಕಳ ಹಕ್ಕುಗಳ ವಿಚಾರ ಪ್ರವೇಶವಾಗಿದೆ.

*ಬೆಂಗಳೂರು* ***ಎನ್. ವಿ. ವಾಸುದೇವ ಶರ್ಮ***

## ಅಂತರಂಗದ ಅನಿಸಿಕೆಗಳು

✉ 'ಹೊಸತು' ಏಪ್ರಿಲ್ ಸಂಚಿಕೆ ಅರ್ಥವತ್ತಾಗಿ ಮೂಡಿಬಂದಿದೆ ಎನ್ನಲು ಹೆಮ್ಮೆಪಡುತ್ತೇನೆ. ಅಕ್ಷರ ಮಾಧ್ಯಮದಲ್ಲಿ ಈ ಪತ್ರಿಕೆಗೆ ಒಂದು ವಿಶಿಷ್ಟತೆ ಇದೆ ಎಂದರೆ ಅಲ್ಲಗಳೆಯುವ ಎದೆಗಾರಿಕೆ ಯಾರಲ್ಲಿಯೂ ಇರದು. ಅಂದರೆ ಇದು ಇತರ ಪತ್ರಿಕೆಗಳಂತೆ ಜಾಹೀರಾತುಗಳ ಬೆನ್ನು ಹತ್ತಿಹೋಗಿಲ್ಲ.




ಈ ತಿಂಗಳು ವಿಭಾಗ, ಸಂಪಾದಕೀಯ, ಬರಹಗಳು ಚೆನ್ನಾಗಿವೆ. ಅಂಬೇಡ್ಕರ್ ವಿಶೇಷ ಸಂಚಿಕೆ ಎಂಬ ನಾಮಕರಣ ಹೊಂದಿದ ಈ ಸಂಚಿಕೆಯ ಹೆಚ್ಚಿನ ಪುಟಗಳಲ್ಲಿ ದಲಿತರ ಕುರಿತಾಗಿ ಹಲವಾರು ವಿವರಣೆಗಳು ನೀಡಲ್ಪಟ್ಟಿವೆ. ಜಾತಿ ಎಂಬುದು ಕೊಲೆ, ಮಾನಸಿಕ ಗೋಡೆ, ಈ ಗೋಡೆ ಎನ್ನುವುದು ಭಾರತದ ಪೀಡೆ. ಹೌದೇ ಎಂದು ನೀವು ಕೇಳಿದ್ದಲ್ಲಿ ನಿಜಕ್ಕೂ ಹೌದು ಎಂದು ನೀವು ನಾವು ಒಟ್ಟಾಗಿ ಹೇಳಬೇಕಾಗಿದೆ. ಜಿ. ರಾಮಕೃಷ್ಣರು 'ಖೋತಿ ವಿರುದ್ಧದ ಹೋರಾಟ' ಅದನ್ನು ವಿವರಿಸಿದೆ. ಯರ್ರಿಸ್ವಾಮಿ ಅವರ ಜಾತಿ ಮತ್ತು ಲಿಂಗ ಸಮ್ಮಿಲನ, ದು. ಸರಸ್ವತಿಯವರ ಮಹಿಳೆಯರ ಸಹಭಾಗಿತ್ವವಿಲ್ಲದೆ ಯಾವ ಚಳುವಳಿಯೂ ಅಪೂರ್ಣ ಎನ್ನುವ ದೃಢಸಂಕಲ್ಪದ ಬರಹ, ಚೆನ್ನಾಗಿವೆ. ಇವೆಲ್ಲವಕ್ಕೂ ಒಪ್ಪ ಕೊಟ್ಟ ಹಾಗೆ ಡಾ॥ ಎನ್. ಚಿನ್ನಸ್ವಾಮಿ ಸೋಸಲೆ ಅವರು ಬರೆದ ಪುಸ್ತಕವನ್ನು ವಿಮರ್ಶಿಸಿ ವಿಷದೀಕರಿಸಿದವರು ಡಾ॥ ಎಚ್. ಎಸ್. ಗೋಪಾಲ ರಾವ್‌ರವರು ಎನ್ನುವ ವಿಮರ್ಶಕರು. ಇದನ್ನೋದಿದರೆ ಕರ್ನಾಟಕದ ಸಮಗ್ರ ದಲಿತ ಚರಿತ್ರೆ ಸಕಾಲಿಕ ಅಧ್ಯಯನ ಮಾಡಿದಂತೆ.

ಡಾ॥ ಎನ್. ಗಾಯತ್ರಿ ಮಹಾಡ್ ಡಾ॥ ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಕರ್ಮಭೂಮಿ ಎನ್ನುವ ಬರಹದಡಿ ಈ ಮಹಿಮನ ಹುಟ್ಟೂರಿನ ಗುಟ್ಟು ತಿಳಿಸಿದ್ದಾರೆ. ಸದಾಶಿವ ಮರ್ಜಿ ಎನ್ನುವವರು ಡಾ॥ ಅಂಬೇಡ್ಕರ್ ಮತ್ತು ಧಾರವಾಡ ಎಂಬ ಬರಹದಡಿ ಇವರ ಜನ್ಮದಾತೆ ರಮಾ ಬಾಯಿಯವರೊಂದಿಗಿನ ಚಿತ್ರದೊಂದಿಗೆ ವಿವರಿಸಿ ಕೊಟ್ಟರೆ ಸದಾಶಿವ ಮರ್ಜಿ ಅವರಿಂದ ಅಂಬೇಡ್ಕರರ ಭಾಷಣವೊಂದು ಘೋಷಿಸಲ್ಪಟ್ಟಿದೆ. ಡಾ॥ ಅನಸೂಯ ಕಾಂಬಳೆ ಅವರಿಂದ ನಿರೂಪಿಸಲ್ಪಟ್ಟ ಅಂಬೇಡ್ಕರ್ ಅವರ ಮೂಲಕ ಸೂಚಿಸಿ ಜಾರಿಗೊಳಿಸಲ್ಪಟ್ಟ ಹಿಂದೂ ಕೋಡ್‌ಬಿಲ್ ಎನ್ನುವ ಮುಖ್ಯ ಕಾನೂನಿನತ್ತ ನಮ್ಮ ಗಮನ ಚಲಿಸುತ್ತಿದೆ. ಇದು ಬಾಬಾ ಸಾಹೇಬರು ನಡೆದು ಬಂದ ಹಾದಿ ಎನ್ನುವ ಸನತ್ ಕುಮಾರ್ ಬೆಳಗಲಿ ಹಾಗೂ ಸಿ. ಆರ್. ಕೆ. ಅವರ ಟ್ರಂಪ್ ನೀತಿಯಿಂದ ಪ್ಯಾಲೆಸ್ತೀನಿಯನ್ನರಿಗೆ ದ್ರೋಹ ಎಂಬ ಬರಹಗಳು ಮಾರ್ಮಿಕವಾಗಿವೆ.

*ಕಾಸರಗೋಡು* ***ಕೀರಿಕ್ಕಾಡು ವನಮಾಲಾ ಕೇಶವ ಭಟ್ಟ***

೨೦೧೭ರ ಏಪ್ರಿಲ್ ತಿಂಗಳ 'ಹೊಸತು' ಪತ್ರಿಕೆಯಲ್ಲಿ ಡಾ॥ ಬಿ. ಆರ್. ಅಂಬೇಡ್ಕರ್‌ರವರ ಜನ್ಮದಿನೋತ್ಸವ ಈ ತಿಂಗಳು ೧೪ನೇ ದಿನಾಂಕದಂದು ಆಚರಣೆ ಪ್ರಯುಕ್ತ 'ಅಂಬೇಡ್ಕರ್ ವಿಶೇಷ ಸಂಚಿಕೆ' ಪ್ರಕಟಣೆಯಾಗಿ ಓದುಗರಿಗೆ ಆಕರ್ಷಣೆಯ ಮುದ ನೀಡಿದೆ. ಮುಖಪುಟದ ವರ್ಣರಂಜಿತ ಚಿತ್ರ ಓದುಗನಿಗೆ ಮನ ಕಲಕಿ ತಲ್ಲಣಗೊಳಿಸಿದೆ. ಅಸ್ಪೃಶ್ಯತೆ ಸಾಮಾಜಿಕ ಪಿಡುಗು ! ಪ್ರಾಚೀನ ಕಾಲದಿಂದ ಅಸ್ಪೃಶ್ಯರು ಶೋಷಣೆ, ಬಹಿಷ್ಕಾರ ನಿರ್ಲಕ್ಷ್ಯಕ್ಕೆ ಒಳಗಾಗಿ ಮನನೊಂದು ನರಕಯಾತನೆ ಅನುಭವಿಸು ತ್ತಿದ್ದಾರೆ. ಇದರ ಪರಿಹಾರಕ್ಕಾಗಿ ಡಾ॥ ಅಂಬೇಡ್ಕರ್ ಹೋರಾಡಿ ಅಮರರಾಗಿದ್ದಾರೆ.

ಈ ತಿಂಗಳ ಶೀರ್ಷಿಕೆಯಲ್ಲಿ ಉತ್ತಮ ಲೇಖನಗಳು ಮೂಡಿಬಂದಿವೆ. ಡಾ॥ ಅಂಬೇಡ್ಕರವರ ಅಪಹರಣ ಮತ್ತು ಖಾಸಗೀಕರಣವೆಂಬ ಸಂಪಾದಕೀಯ ಲೇಖನ ಅರ್ಥಗರ್ಭಿತ ವಾಸ್ತವ ಮೂಡಿಬಂದು ಜನರನ್ನು ಎಚ್ಚರಗೊಳಿಸಿದೆ. ಜಾತಿ ಮತ್ತು ಲಿಂಗ ಸಮ್ಮಿಲನ ಶೋಷಣೆ ತೆರೆದಿಟ್ಟ ಶರ್ಮಿಳಾ ರೇಗೆ, ಅವರ ಬರಹ ಮತ್ತು ಸ್ತ್ರೀವಾದದ ಚಿಂತನೆಗಳು ಸಾಮಾನ್ಯ ಜನತೆಗೆ 'ಅರಿವು' ಮೂಡಿಸಿವೆ. ಮಹಿಳೆಯರ ಸಹಭಾಗಿತ್ವವಿಲ್ಲದೆ ನಡೆಯುವ ಚಳುವಳಿಗಳು ಯಶಸ್ಸಾಗಲಾರದು ಎನ್ನುವುದು ಹೋರಾಟಗಾರರಿಗೆ ಮನದಟ್ಟಾಗಿದೆ. ದಲಿತರ ಬದುಕು ಸಾಹಿತ್ಯದ ವಿವಿಧ ಪ್ರಕಾರಗಳು, ಅವರನ್ನು ಕುರಿತ ಕಥೆಗಳಂತೂ ವಾಸ್ತವ ಸತ್ಯ ಅಭಿವ್ಯಕ್ತಗೊಂಡಿದ್ದರಿಂದ ಓದುಗರ ಮನಕ್ಕೆ ಅಭಿರುಚಿಯಾಗಿದೆ. ಮಹಾರಾಷ್ಟ್ರದ

'ಮಹಾಡ್ ನಗರದಲ್ಲಿ' ಅಂಬೇಡ್ಕರ್‌ರವರ ಕರ್ಮಭೂಮಿ ಮತ್ತು ಕೆರೆ ಸ್ಮಾರಕವಾಗಿ ಉಳಿಸಿಕೊಂಡಿರುವುದು ಜಾತಿನಾಶದ ಕುರುಹು ! ದಲಿತರ ಏಳ್ಗೆಗಾಗಿ ಮತ್ತು ಅವರ ಸ್ವರಾಜ್ಯ ಬೇಡಿಕೆಯ ಬಗ್ಗೆ ಧಾರವಾಡದಲ್ಲಿ ಅಂಬೇಡ್ಕರ್‌ರು ಮಾಡಿದ ಭಾಷಣ ಅರ್ಥಗರ್ಭಿತವಾಗಿದೆ. ಎಲ್ಲಾ ಲೇಖನಗಳು ಅರ್ಥಗರ್ಭಿತ.

*ಚೌಡಾಪುರ* **ಚೌಡಾಪುರ ಮರಿದೇವರ ಸಿದ್ದಪ್ಪ ಮೇಷ್ಟ್ರು**

✉ 'ಹೊಸತು' ತಪ್ಪದೆ ತಲುಪುತ್ತಿದೆ; ತನ್ನ ಸಮಚಿತ್ತದ ಗುಣಮಟ್ಟವನ್ನು ಕಾಯ್ದುಕೊಳ್ಳುತ್ತ ಮಾನವತೆಯ ಮನೋಧರ್ಮಕ್ಕೆ ತಪ್ಪದೆ ಕೊಡುಗೆ ಸಲ್ಲಿಸುತ್ತಿದೆ. ಧನ್ಯವಾದಗಳು.

*ಕಾರ್ಕಳ* **ಜ್ಯೋತಿ ಗುರುಪ್ರಸಾದ್**

## ಮಹಿಳಾ ಸಮಸ್ಯೆಯ ವಿಶ್ವರೂಪ

✉ ಆಧುನಿಕ ಯುಗದಲ್ಲೂ ಪುರುಷಪ್ರಧಾನವೇ ಆಗಿರುವ ಸಮಾಜದಲ್ಲಿ ಹೆಣ್ಣು ಜನನದಿಂದ ಮರಣದ ವರೆಗೂ ವಿವಿಧ ಸಮಸ್ಯೆಗಳನ್ನು ಎದುರಿಸುತ್ತಿದ್ದಾಳೆ. ಮಾನವ ವೈಜ್ಞಾನಿಕವಾಗಿ ಬೆಳೆದರೂ, ಉನ್ನತ ಶಿಕ್ಷಣ ಪಡೆದರೂ, ವರದಕ್ಷಿಣೆ, ಬಾಲ್ಯವಿವಾಹ, ಲೈಂಗಿಕ ಕಿರುಕುಳ, ವಿಧವಾ ವಿವಾಹ, ಉದ್ಯೋಗ, ಆರೋಗ್ಯ ಸಂಬಂಧಿ ಸಮಸ್ಯೆಗಳು ಹೊಸ ರೂಪ ಪಡೆದು ಪಾರಮ್ಯ ಮೆರೆಯುತ್ತಿವೆ. ಮಹಿಳೆ ಆರ್ಥಿಕವಾಗಿ ಎಷ್ಟೇ ಬಲಾಢ್ಯಳಾದರೂ, ಉನ್ನತ ಹುದ್ದೆ ಅಲಂಕರಿಸಿದರೂ ಇಂಥ ಸಮಸ್ಯೆಗಳಿಂದ ಆಕೆಗೆ ಈಗಲೂ ಮುಕ್ತಿ ದೊರೆಯುತ್ತಿಲ್ಲ. ಆದಾಗ್ಯೂ ಮಹಿಳೆಯರ ಸಮಸ್ಯೆಗಳನ್ನು ಸರ್ವೇಸಾಮಾನ್ಯ ಎಂಬಂತೆ ನೋಡುವ ದೃಷ್ಟಿಕೋನ ಬದಲಾಗದಿರುವುದು ವಿಪರ್ಯಾಸ.

ಕಾಲ ಎಷ್ಟೇ ಬದಲಾದರೂ ಸಾಮಾಜಿಕ ಸಾಂಸ್ಕೃತಿಕ ಮತ್ತು ಧಾರ್ಮಿಕ ಕಟ್ಟಳೆಗಳು ಅಸ್ತಿತ್ವ ಉಳಿಸಿಕೊಂಡಿದ್ದು ಮಹಿಳೆಯರ ಮೇಲೆ ಪಾರಮ್ಯ ಮೆರೆಯುತ್ತಿವೆ. ಉನ್ನತ ಶಿಕ್ಷಣ ಪಡೆದರೂ ವೈಚಾರಿಕ ಮನೋಭಾವ ಮೂಡದಿರುವುದು ಇದಕ್ಕೆ ಪ್ರಮುಖ ಕಾರಣ. ವಿಧವೆಯರಿಗೆ ಹಿಂದಿದ್ದ ನಿರ್ಬಂಧಗಳು ಸಡಿಲವಾಗಿದ್ದರೂ ಸಂಪೂರ್ಣ ಬದಲಾಗಿಲ್ಲ. ಉನ್ನತ ಶಿಕ್ಷಣ ಪಡೆದು ಉನ್ನತ ಹುದ್ದೆಯಲ್ಲಿರುವ ಮಹಿಳೆಗೆ ಸ್ವಲ್ಪಮಟ್ಟಿಗೆ ಸ್ವಾತಂತ್ರ್ಯ ದೊರೆತರೂ ಸಾಮಾನ್ಯ ಮಹಿಳೆಯರಿಗೆ ಇದರ ಬಿಸಿ ಇನ್ನೂ ತಟ್ಟುತ್ತಲೇ ಇದೆ.

ಇಂದಿನ ಸಮಾಜ ಆಧುನಿಕತೆಯ ತುತ್ತತುದಿಯಲ್ಲಿದ್ದರೂ ಲಿಂಗ ಸಂಬಂಧಿ ಪೂರ್ವಗ್ರಹಗಳಿಂದ ಮಹಿಳೆ ಈಗಲೂ ದೌರ್ಜನ್ಯ ಮತ್ತು ಕಿರುಕುಳಕ್ಕೊಳಗಾಗುತ್ತಿರುವುದು ನಿಜಕ್ಕೂ ನಾಗರಿಕ ಸಮಾಜ ತಲೆತಗ್ಗಿಸುವಂಥದ್ದು.

*ಶಂಕರಘಟ್ಟ* **ಬಲಭೀಮ**

## ಸೆಲೆಬ್ರೆಟಿಗಳ ಜಾಹೀರಾತುಗಳಿಂದ ಅಪಾಯ

✉ ಸಾರ್ವಜನಿಕವಾಗಿ ಕೋಲಾದಂತಹ ಮೃದು ಪಾನೀಯಗಳಿಗೆ ಜಾಹೀರಾತು ನೀಡಲು ನಿರಾಕರಿಸಿದ ಏಕೈಕ ಹೆಸರುವಾಸಿ ಆಟಗಾರ ಗೋಪಿಚಂದ್. ಈ ಮೃದುಪಾನೀಯಗಳು ಆರೋಗ್ಯಕ್ಕೆ ಒಳ್ಳೆಯದಲ್ಲ, ಆಟಗಾರರಿಗಂತೂ ಖಂಡಿತವಾಗಿ ಒಳ್ಳೆಯದಲ್ಲ ಎಂದು ಸ್ಪಷ್ಟಪಡಿಸಿದವರು ಗೋಪಿಚಂದ್. ಹಾಗಾಗಿ, ಎಂತಹದೇ ಹಣದ ಆಮಿಷ ಒಡ್ಡಿದರೂ ಅವರು ಇಂತಹ ಪಾನೀಯಗಳ ಪರವಾಗಿ ಜಾಹೀರಾತು ನೀಡುವುದಿಲ್ಲ. ಇದು ಬಹಳ ಮುಖ್ಯವಾದ ವಿಚಾರ. ಯಾಕೆಂದರೆ, ಈ ಮೃದುಪಾನೀಯಗಳು ನಿಜವಾಗಿಯೂ ಜಂಕ್ ಆಹಾರ; ಯಾವುದೇ ಪೋಷಕಾಂಶವಿಲ್ಲದ ಸಕ್ಕರೆಯನ್ನು ಇವು ಶರೀರಕ್ಕೆ ಒದಗಿಸುತ್ತವೆ. ಬೊಜ್ಜಿಗೆ ಇವು ಕಾರಣವೆಂದು ಇಂದು ಜಗತ್ತಿನಲ್ಲೆಲ್ಲ ಈ ಮೃದುಪಾನೀಯಗಳನ್ನು ದೂಷಿಸಲಾಗುತ್ತಿದೆ. ಆದರೆ, ನಮ್ಮ ಇತರ ಆಟಗಾರರು ಮತ್ತು ಚಿತ್ರನಟರು (ಮಹೇಂದ್ರ ಸಿಂಗ್ ಧೋನಿಯಿಂದ ತೊಡಗಿ ಶಾರುಕ್ ಖಾನ್‌ವರೆಗೆ) ಆರೋಗ್ಯಕ್ಕೆ ಹಾನಿಕರವಾದ ಇಂತಹ ಉತ್ಪನ್ನಗಳನ್ನು ಜಾಹೀರಾತು ನೀಡಿ ಹಣ ಗಳಿಸಲು ಖುಷಿಪಡುತ್ತಾರೆ.

ಇವರು ಹೀಗೆ ಮಾಡಲು ಬಿಡಬೇಕೇ ? ಭಾರತ ಸರಕಾರ ಇದನ್ನು ನಿಯಂತ್ರಿಸಲು ಹೊರಟಿದೆ. ಜಾಹೀರಾತಿನಲ್ಲಿ ತಪ್ಪು ಮತ್ತು ದಾರಿ ತಪ್ಪಿಸುವ ಹೇಳಿಕೆ ನೀಡುವ ಸೆಲೆಬ್ರೆಟಿಗಳಿಗೆ ಐದು ವರ್ಷಗಳ ಜೈಲು ಶಿಕ್ಷೆ ಅಥವಾ ರೂ. ೫೦ ಲಕ್ಷ ದಂಡ ವಿಧಿಸಲಿಕ್ಕಾಗಿ "ಬಳಕೆದಾರರ ರಕ್ಷಣಾ ಕಾಯಿದೆ"ಗೆ ತಿದ್ದುಪಡಿ ತರಲು ಉದ್ದೇಶಿಸಿದೆ. ಇದೇ ತಿದ್ದುಪಡಿಯಲ್ಲಿ ಇನ್ನೊಂದು ಬೇಸರದ ವಿಷಯವೂ ಇದೆ : ಒಂದು ಉತ್ಪನ್ನಕ್ಕೆ ಜಾಹೀರಾತು ನೀಡುವ ಮುನ್ನ, ಮುಂಜಾಗ್ರತೆ ತೆಗೆದುಕೊಂಡಿದ್ದರೆ ಮತ್ತು ಪೂರ್ವಾಪರ ವಿಚಾರಿಸಿದ್ದರೆ, ಅಂತಹ ಜಾಹೀರಾತಿನಲ್ಲಿ ಹೇಳಿಕೆ ನೀಡುವ ಸೆಲೆಬ್ರೆಟಿಗಳು ಜವಾಬ್ದಾರರಲ್ಲ. ಇದರರ್ಥ, ಈ ಕಾಯಿದೆ ತಿದ್ದುಪಡಿಯಿಂದ ಯಾವ ಪ್ರಯೋಜನವೂ ಇಲ್ಲ. ಆದರೂ ಜಾಹೀರಾತಿನಲ್ಲಿ ಮಿಂಚುವ ಸೆಲೆಬ್ರೆಟಿಗಳು ತಮ್ಮನ್ನು ಹೊಣೆಗಾರರನ್ನಾಗಿ ಮಾಡುವುದನ್ನು ವಿರೋಧಿಸುತ್ತಿದ್ದಾರೆ. ದೊಡ್ಡ ಕಂಪೆನಿಗಳಿಗೆ ತಲೆಬಾಗುವ ಸರಕಾರವು, ತಿದ್ದುಪಡಿಯ ಮರುಪರಿಶೀಲನೆಗೆ ಒಪ್ಪಿದೆ. ನಮಗೇನು ಬೇಕಾಗಿದೆ ? ಜಂಕ್ ಆಹಾರ ಮತ್ತು ಆರೋಗ್ಯಕ್ಕೆ ಹಾನಿಕರವಾದ ಆಹಾರಗಳ ಜಾಹೀರಾತುಗಳಲ್ಲಿ ಸೆಲೆಬ್ರೆಟಿಗಳು ಅವನ್ನು ಅನುಮೋದಿಸುವುದರ ವಿರುದ್ಧ ಸ್ಪಷ್ಟ ನಿಯಮಗಳು ಬೇಕಾಗಿವೆ. ನ್ಯೂಯಾರ್ಕ್ ವಿಶ್ವವಿದ್ಯಾಲಯದ ಪ್ರಾಧ್ಯಾಪಿಕೆ ಮರಿಯೋನ್ ನೆಸ್ಲೆ ಅವರ ಇತ್ತೀಚೆಗಿನ ಪುಸ್ತಕ "ಸೋಡಾ ಪಾಲಿಟಿಕ್ಸ್" ನಮ್ಮ ಕಣ್ಣು ತೆರೆಸಬೇಕು. ಇದರಲ್ಲಿ, ಭರ್ಜರಿ ಸಕ್ಕರೆ ತುಂಬಿರುವ ನೀರನ್ನೇ "ಸಂತೋಷ, ಮಜಾ ಮತ್ತು ಸಂಭ್ರಮದ ಸಂಕೇತ"ಗಳನ್ನಾಗಿ ಮಾರ್ಪಡಿಸುವುದರಲ್ಲಿ ಮಾರ್ಕೆಟಿಂಗ್‌ನ ಪ್ರಭಾವವನ್ನು ಅವರು ವಿವರಿಸಿದ್ದಾರೆ.

ಜಂಕ್ ಮತ್ತು ಆರೋಗ್ಯಕ್ಕೆ ಹಾನಿಕರವಾದ ಉತ್ಪನ್ನಗಳ ಮಾರಾಟ ಹೆಚ್ಚಿಸಲು ದೊಡ್ಡ ಕಂಪೆನಿಗಳು ಅನುಸರಿಸುವ ಕಾರ್ಯತಂತ್ರದಲ್ಲಿ ಎರಡು ವಿಧಗಳಿವೆ. ಒಂದನೆಯದು, ಸರಕಾರದ ಧೋರಣೆಯನ್ನೇ ಬದಲಾಯಿಸಿ, ಕೋಲಾಗಳಿಗೆ ಸಂಬಂಧಿಸಿದ ಆಹಾರ ಕಾಯಿದೆ / ನಿಯಮಗಳನ್ನು ಅರ್ಥಶೂನ್ಯವಾಗಿಸುವುದು. ಎರಡನೆಯದು ಕೋಲಾಗಳು ಕೇವಲ ಪಾನೀಯಗಳಲ್ಲ, ಅವು ಜೀವನಶೈಲಿಯ ಆಯ್ಕೆಗಳು ಎಂದು ಸಿಲೆಬ್ರೆಟಿ ಜಾಹೀರಾತುಗಳ ಮೂಲಕ ಬಿಂಬಿಸಿ, ಮಾರಾಟ ಹೆಚ್ಚಿಸಿಕೊಳ್ಳುವುದು. ಆಳವಾದ ಸಂಶೋಧನೆ ಮಾಡಿ ಬರೆದಿರುವ ತಮ್ಮ ಪುಸ್ತಕದಲ್ಲಿ ಮರಿಯೋನ್ ಇವನ್ನು ವಿವರಿಸುತ್ತಾರೆ. ೧೯೫೪ಕ್ಕೆ ಹೋಲಿಸಿದಾಗ, ೧೯೯೭ರಲ್ಲಿ ಮೃದುಪಾನೀಯಗಳ ಸೇವನೆ ಶೇಕಡ ೨೦೦ರಷ್ಟು ಜಾಸ್ತಿಯಾಗಿತ್ತು. ಇದರಿಂದಾಗಿ, ಅನಾರೋಗ್ಯ ಮತ್ತು ಬೊಜ್ಜುತನವೂ ಹೆಚ್ಚಾಗಿದೆ ಎಂಬುದನ್ನು ಯುಎಸ್ ಕೌನ್ಸಿಲ್ ಆನ್ ಫುಡ್ ಆಂಡ್ ನ್ಯುಟ್ರಿಷನ್ ಗಮನಿಸಿತು.

ಆದರೆ ಬೊಜ್ಜುತನ ನಿಜಕ್ಕೂ ಆರೋಗ್ಯ ಸಮಸ್ಯೆಯಾಗಿದೆ ಎಂದು ಸ್ಪಷ್ಟವಾದಾಗ, ಕಂಪೆನಿಗಳು ತಮ್ಮ ಕಾರ್ಯತಂತ್ರ ಬದಲಾಯಿಸುತ್ತವೆ. ತಮ್ಮನ್ನು ತಾವೇ ನಿಯಂತ್ರಿಸುವ (ಸೆಲ್ಫ್-ರೆಗ್ಯುಲೇಷನ್) ರಾಗ ಎತ್ತಿ, ಪುನಃ ದಾರಿ ತಪ್ಪಿಸುತ್ತವೆ. ಯೇಲ್ ರುಡ್ ಸೆಂಟರಿನ ೨೦೧೧ ಮತ್ತು ೨೦೧೪ರ ವರದಿಗಳನ್ನು ಮರಿಯೋನ್ ತಮ್ಮ ಪುಸ್ತಕದಲ್ಲಿ ಉಲ್ಲೇಖಿಸುತ್ತಾರೆ. ಮಕ್ಕಳಿಗೆ ಮಾರ್ಕೆಟಿಂಗ್ ಮಾಡೋದನ್ನು ನಿರ್ಬಂಧಿಸಲು ಕೋಲಾ ಕಂಪೆನಿಗಳು ಸ್ವ-ಇಚ್ಛೆಯ ನಿಯಮಗಳನ್ನು ರೂಪಿಸಿದ್ದವು. ಆದರೆ ೨೦೧೪ರಲ್ಲಿ, ಎರಡು ಬೃಹತ್ ಕೋಲಾ ಕಂಪೆನಿಗಳಾದ ಕೋಕಾ ಕೋಲಾ ಮತ್ತು ಪೆಪ್ಸಿ ಕೋಲಾ, ಆರೋಗ್ಯಕ್ಕೆ ಹಾನಿಕರವಾದ ಪಾನೀಯಗಳ ಜಾಹೀರಾತಿಗಾಗಿ ಅಮೆರಿಕಾದಲ್ಲಿ ವೆಚ್ಚ ಮಾಡಿದ್ದು ೮೬೬ ಮಿಲಿಯ ಡಾಲರು. ಇದು ಆರೋಗ್ಯಕ್ಕೆ ಹಾನಿಕರವಲ್ಲದ ಪಾನೀಯಗಳ ಜಾಹೀರಾತು ವೆಚ್ಚದ ನಾಲ್ಕು ಪಟ್ಟು. ಇದರ ಶೇ. ೩೦-೪೦ ಮಕ್ಕಳನ್ನು ಉದ್ದೇಶಿಸಿದ ಜಾಹೀರಾತುಗಳ ವೆಚ್ಚ! ಈ ಕಂಪೆನಿಗಳು ತಮ್ಮ "ಹೊಣೆಗಾರಿಕೆ" ಜಾರಿಯನ್ನು ನಿರ್ವಹಿಸುವುದು ಹೀಗೆ !

ನಿಧಾನವಾಗಿ ಸರಕಾರಗಳಿಗೆ ಅರ್ಥವಾಗುತ್ತಿದೆ : ಅದೆಂದರೆ ಕಂಪೆನಿಗಳ ಸ್ವನಿಯಂತ್ರಣ ಒಂದು ಮೋಸದಾಟ ಎಂಬುದು. ಅದಕ್ಕಾಗಿಯೇ ನ್ಯೂಜಿಲೆಂಡ್ ಸರಕಾರ ಜಾರಿ ಮಾಡಿರುವ "ಆಹಾರಗಳ ಜಾಹೀರಾತಿಗೆ ಮಕ್ಕಳ ನಿಯಮಗಳು" ಹೀಗೆನ್ನುತ್ತವೆ : "ಆರೋಗ್ಯದಾಯಕ ಆಹಾರವನ್ನು ತಿರಸ್ಕರಿಸುವ ರೀತಿಯಲ್ಲಿ ಮಾರಾಟದ ಆಹಾರದ ಜಾಹೀರಾತಿಗಾಗಿ ಮಕ್ಕಳಿಗೆ ಚೆನ್ನಾಗಿ ತಿಳಿದಿರುವ ವ್ಯಕ್ತಿಗಳನ್ನು ಅಥವಾ ಪಾತ್ರಗಳನ್ನು ಬಳಸಬಾರದು."

ನಮ್ಮ ದೇಶದಲ್ಲಿ ಇಂತಹ ಸ್ಪಷ್ಟ ನಿಯಮಗಳು ಜಾರಿಯಾಗದಂತೆ ದೈತ್ಯಕಂಪೆನಿಗಳ ಲಾಬಿಗಳು ಕೆಲಸ ಮಾಡುತ್ತಿವೆ. ಯಾಕೆಂದರೆ ಲಾಭದ ಕೊಳ್ಳೆ ಆ ಕಂಪೆನಿಗಳ ಉದ್ದೇಶವೇ ವಿನಾ ನಮ್ಮ ಆರೋಗ್ಯದ ಸುಧಾರಣೆಯಲ್ಲ. ಈ ಹಿನ್ನೆಲೆಯಲ್ಲಿ ಗೋಪಿಚಂದರಂತಹ ಹೆಸರುವಾಸಿ ಆಟಗಾರರು ಮುಖ್ಯರಾಗುತ್ತಾರೆ. ಅಂಥವರ ಸಂಖ್ಯೆ ಹೆಚ್ಚಾಗಲಿ.

*ಮಂಗಳೂರು* **ಅಡ್ಡೂರು ಕೃಷ್ಣ ರಾವ್**




# ಒಂದು ಮೃಗ !

ಪ್ರಾಣಿಯನ್ನು ಬಡಪಾಯಿ
ಮೃಗವನ್ನು ಕ್ರೂರ
ಎಂಬ ಪರಿಭಾಷೆಯಲ್ಲಿ ಗ್ರಹಿಸುವುದಾದಲ್ಲಿ
ಇದು ಒಂದು ಮೃಗ !

ಮೊದಲೇ ಹೇಳಬಿಡುತ್ತೇನೆ...
ಈ ಮೃಗವನ್ನು ದೂರವಿಡಿ !
ಇದರಿಂದಾಗುವ ಅಪಾಯವನ್ನು
ತಿಳಿದರೆ ನೀವು ಕಂಗೆಟ್ಟು ಕಂಗಾಲಾಗುವಿರಿ

ಇದರ ಪಕ್ಕೆಲುಬುಗಳಾಗಲೀ
ಮೈಯ ಮುಳ್ಳ ಮೊನೆಯಾಗಲೀ
ಹಲ್ಲುಗುರುಗಳಾಗಲೀ
ಸೋಕಿದರೆ ನಂಜೇರಿ
ಕೊಳೆತು...ಕೊಳೆತು...
ಕಾಲಿಗಂಟಿದ ಇಸುಬಿನಂತೆ
ಕ್ಷಯಿಸತೊಡಗುವುದು

ಇದರ ಶ್ವಾಸ ಸೋಕಿದರೂ
ತೊಗಲಿನ ಲೋಳೆ ತಗುಲಿದರೂ
ರೋಮವಾದರೂ ನಿಮ್ಮ ಉಸಿರಲ್ಲಿ ಬೆರೆತು
ದೇಹ ಸೇರಿದರೂ
ಕಣ್ಣ ಪಿಸುರು, ಬೆವರು, ಕೀವು ತಾಕಿದರೂ
ವಿಷವೇರುತ್ತ... ನೆತ್ತರು ಒಳಗೊಳಗೇ
ಹೆಪ್ಪುಗಟ್ಟುತ್ತ
ಕಾಯ ನೀಲಿಗಟ್ಟತೊಡಗುವುದು

ಅಕಸ್ಮಾತ್ ಇದರ ನಾಲಗೆ
ಸುರಿಸುವ ಜೊಲ್ಲೇನಾದರೂ
ನಿಮ್ಮಡಿಗಳಿಗೆ ಸೋಕಿದರೂ ಸಾಕು
ಹುಚ್ಚುನಾಯಿಯ ಹುಚ್ಚಿಗಿಂತಲೂ
ಭೀಕರವಾದ ಮಾರಕ ರೋಗವಂಟಿ
ದಿನೇ ದಿನೇ ಉಲ್ಬಣಿಸುತ್ತ
ಸ್ವಾಸ್ಥ್ಯದ ಸ್ವಾಧೀನ ತಪ್ಪುವುದು

ಈ ಮೃಗವು ಹರಿದಾಡಿದ ಹಾದಿಯಲ್ಲಾದರೂ
ನೀವು ಸುಳಿದಾಡಬೇಡಿರಿ

ಹೇಗೆ ಈ ಮೃಗವು ಒಂದು ದಿಕ್ಕಿನಲ್ಲಿ
ಹರಿಯತೊಡಗಿತೆಂದರೆ ಸಾಕು
ಬೆಂಕಿಯೋಪಾದಿಯಲ್ಲಿ ಹರಿವು ಪಡೆಯುತ್ತ
ಮೇಲೆ ಕೆಳಗೆ, ಮುಂದೆ ಹಿಂದೆ
ಎಡ ಬಲ, ಆಳ ಅಗಲ ಆವರಿಸಿ ಸರ್ವವನ್ನೂ
ಆಪೋಶನ ತೆಗೆದುಕೊಳ್ಳುವುದೋ
ಅದೇ ರೀತಿಯಾಗಿ
ಅದು ಹಾದುಹೋದ ದಿಕ್ಕಿನಲ್ಲಿ ನೀವು ನಡೆದರೂ
ಅದರ ನೆರಳಾದರೂ ನಿಮಗೆ ಸೋಕಿದರೂ
ನಿಮ್ಮ ಮುಖ, ಮೈಗಳು
ನೆತ್ತರೊಣಗಿದ ಹಸಿ ಬಾಣಂತಿಯಂತೆ
ಊದಿ ಹಳದಿಗಟ್ಟುವುವು
ಆಕ್ಟೋಪಸ್ಸನ್ನು
ಹೋಲುವ ಈ ಮೃಗಕ್ಕೆ
ನಾಲ್ಕು ಸಾವಿರದಿನ್ನೂರು ಕಾಲುಗಳು
ಕಾಲಿನ ರೋಮ ರೋಮಕ್ಕೂ ಲಕ್ಷಾಂತರ ಕಣ್ಣು,
ನೆತ್ತರು ಹೀರುವ ಬಾಯಿ,
ಬಾಯೊಳಗೆ ಕಚ್ಚಿ ಹಿಸಿದೆಳೆವ ಕೋರೆ ಹಲ್ಲು,
ಅಸಹ್ಯಕರ ಜೊಲ್ಲು ಸುರುಕ ನಾಲಗೆ
ತಲೆಯ ಮೇಲೆ ಎರಡು ದೊಡ್ಡ ಕೊಂಬುಗಳು
ಬೆನ್ನ ಹುರಿಯ ಉದ್ದಕ್ಕೂ ಗಗನ ಸೀಳುವ
ಏಳು ದೊಡ್ಡ ಮೊನಚು ಕೋಡುಗಳು

ಹೇಸಗೆಯೂ ಹೇಸಬಹುದಾಗ
ಇಂಥ ಬೀಭತ್ಸ್ಯಕರ ಮೃಗ
ಕೆಂಗೆಂಡಗಣ್ಣು ಬಿಟ್ಟಾಗೆಲ್ಲ
ಕೆಂಗಿಡಿಗಳು ಸಿಡಿದು ಬೆಂಕಿ ಹತ್ತಿ
ಹೊತ್ತಿ ಧಗ್ಗನುರಿದು ಸರ್ವನಾಶವಾಗುವುದು
ಅದರ ಪಿಸುಗುಡುವಿಕೆಗೂ
ಮನುಷ್ಯನ ರಕ್ತಪಾತವಾಗಿ
ಕೋಡಿಗಳು ತುಂಬಿ ಹರಿಯುವವು
ಅದರ ಮನೋರಂಜನೆಯ ಸಲುವಾಗಿ
ರಣಕಣದಲ್ಲಿ ಜರುಗಿದ ಕದನ, ಕಾಳಗಗಳಲಿ
ನರನೆಂಬ ಜೀವಿ ನರನರ ನರಳಿ ಸತ್ತದ್ದಿದೆ
ಅದು ಅಬ್ಬರಿಸಿ ಬಾಲದಿಂದಪ್ಪಳಿಸಿದ ಗಳಿಗೆ
ಎರಡು ಮಹಾಯುದ್ಧಗಳೇ ಜರುಗಿ ಹೋದವು
ಬಾಳ ಬದುಕಿದ್ದ ಎಳೆಯ ಮಕ್ಕಳು ಸತ್ತವು.
ಸಾಯದೆ ಬದುಕುಳಿದವು
ಹೆಳವು ಕಾಯವೆಳೆಯುತ್ತ ಸತ್ತು ಸತ್ತು ಬದುಕುತ್ತಿವೆ
ಮತ್ತೀಗಲೂ ಅದು ಬೆಕ್ಕಿನಂತೆ ಹೊಂಚಿ
ಬಾಲವಲ್ಲಾಡಿಸುತ್ತಲೇ ಇದೆ

'ಆಹಾ... ಮಾಯಾವಿ ಮೃಗವೇ...
ಅದೇನು ಪರಿಮಳವ ಪೂಸುತ್ತೀ
ನಿನ್ನ ಆ ಹೊಲಸು ಮೈಯಿಗೆ ?
ಜಿಂಕೆ, ಚಿಗರೆಗಳಂತೆ ನವಿಲಂತೆ ಅದೇನು
ಚೆಲುವಾಗಿ ಕುಣಿಯುತ್ತೀ ನೀನು ?
ಅದೇನು ಮೋಹ ಕಾಂತದ ಬಿಗಿಯಪ್ಪುಗೆ ನಿನದು ?
ಅದಾವ ಚೆಲುವಿಕೆಯಿಂದ ಹೀಗೆ ಬಿರಿದರಳಿ
ಸೆಳೆಯುತ್ತೀಯೆ ನೀನು
ಕೊಳಲೇ ಇರಬೇಕು ಅಡಗಿ ನಿನ್ನ ಕಂಠದೊಳಗೆ...'
ಎಂದು ಜಗವು ಹಾಡು ಹಾಡುತ್ತ
ಉಘೇ ಉಘೇ... ಜಯಘೋಷ ಮಾಡುತ್ತ
ಆ ಮೃಗದ ತೆಕ್ಕೆಗೆ ಜಾರಿ ಕರಗಿ ಮೈಮರೆಯುವುದು

ಇಂಥ ಭಯಂಕರ ಮೃಗವು
ವಿಶ್ವದಲಿ ಒಂದುಂಟು
ದೇಶ ದೇಶಗಳಲೂ ಅದರ
ಕೋಟ್ಯಂತರ ಸಂತಾನವುಂಟು
ದೇಶ, ರಾಜ್ಯ, ಜಿಲ್ಲೆ ತಾಲ್ಲೂಕು
ಊರೂರು ಕೇರಿ ಕೇರಿಗಳಲೂ ಅದರ
ಮೊಟ್ಟೆ ಮರಿಗಳುಂಟು...
ಮತ್ತು ಅದು ನೇಮಿಸಿಕೊಂಡ
ನಾಯಿ ನಿಯತ್ತಿನ ನೌಕರ ಚಾಕರರುಂಟು

ಅಂದಹಾಗೆ
ಇದು ನನಗೆ
ಮೊದಲು ಕಂಡುಬಂದದ್ದು
ನನ್ನದೇ ಮೆದುಳಲ್ಲಿ... !



**ಕಾದಂಬಿನಿ** ನಾಯ್ಡು ಕಾಂಪ್ಲೆಕ್ಸ್, ಕೆಪಿಟಿಸಿಎಲ್ ಮೆಸ್ ಹತ್ತಿರ, ಹುಲಿಕಲ್, ಹೊಸನಗರ ತಾಲೂಕು, ಶಿವಮೊಗ್ಗ ಜಿಲ್ಲೆ



# ಭಗವದ್ಗೀತೆ : ಒಂದು ಅವಲೋಕನ

# ೮. ಬ್ರಹ್ಮಯಜ್ಞ ಮತ್ತು ಜ್ಞಾನಯೋಗ

ಜಿ. ರಾಮಕೃಷ್ಣ

**ಗೀತೆಯ ಎರಡನೆಯ ಅಧ್ಯಾಯದಲ್ಲಿ ಹೇಳಲಾದ ಸ್ಥಿತಪ್ರಜ್ಞನ ಲಕ್ಷಣಗಳನ್ನು ವಿವಿಧ ಪರಿಭಾಷೆಗಳಲ್ಲಿ ಮುಂದಿನ ಅಧ್ಯಾಯಗಳಲ್ಲಿ ಪುನರುಚ್ಚರಿಸಲಾಗಿದೆ. ಕುರುಕ್ಷೇತ್ರ ಯುದ್ಧದ ಹಿನ್ನೆಲೆಯನ್ನು ಬಿಟ್ಟುಕೊಡದೆ, ಅರ್ಜುನನಿಗೆ ಉಪದೇಶ ನೀಡುವ ಭಗವಾನನು ಪರಮ ಸೃಷ್ಟಿಕರ್ತನಲ್ಲದೆ ಬೇರಾರೂ ಅಲ್ಲವೆಂಬ ಮಾತನ್ನು ಹೇಳುತ್ತಾ ಗೀತೆಯ ಕರ್ತೃವು ತನ್ನ ಗ್ರಂಥಕ್ಕೆ ಅಧಿಕಾರವಾಣಿಯ ಲಕ್ಷಣವನ್ನು ತುಂಬಿದ್ದಾನೆ.**

ಅರ್ಜುನನಿಗೆ ಉಪದೇಶಾಮೃತವನ್ನು ನೀಡುತ್ತಿರುವ ಕೃಷ್ಣನು ಗೀತೆಯ ನಾಲ್ಕನೆಯ ಅಧ್ಯಾಯಕ್ಕೆ ಬರುವ ವೇಳೆಗೆ ತನ್ನ ವ್ಯಕ್ತಿತ್ವದ ವಿಸ್ತಾರ ಮತ್ತು ಮಹತ್ವವನ್ನು ಹೆಚ್ಚು ಹೆಚ್ಚಾಗಿ ಪ್ರಸ್ತಾಪಿಸುವುದು ಆಕಸ್ಮಿಕವಲ್ಲ. ಮೆಟ್ಟಿಲು ಮೆಟ್ಟಿಲಾಗಿ ಮೇಲೇರುತ್ತಾ ಗೀತೆಯ ಕರ್ತೃವು ಓದುಗನ ಮನಸ್ಸನ್ನು ತನ್ನ ಬಿಗಿಹಿಡಿತದಲ್ಲಿ ಇರಿಸಿಕೊಂಡು ತನ್ನ ತತ್ತ್ವಶಾಸ್ತ್ರ ಪ್ರಣಾಲಿಕೆಯು ಸ್ವತಃ ಮಹಾನ್ ಸೃಷ್ಟಿಕರ್ತನೇ ಪಾಮರ ಜನರಿಗೆ ನೀಡುತ್ತಿದ್ದಾನೆಂಬ ಧೋರಣೆಯನ್ನು ಬಿಂಬಿಸುತ್ತಾನೆ (ಕರ್ತೃವು ಮಹಿಳೆಯಂತೂ ಆಗಿದ್ದಿರಲು ಸಾಧ್ಯವಿಲ್ಲವೆಂಬುದು ಅಂದಿನ ಚಾರಿತ್ರಿಕ ಸನ್ನಿವೇಶವನ್ನು ತಿಳಿದವರಿಗೆ ಸುಲಭವಾಗಿ ವೇದ್ಯ; ಅಲ್ಲದೆ, ಮಹಿಳೆಯ ಬಗೆಗಿನ ಗೀತೆಯ ಧೋರಣೆ ಸಹ ಅದಕ್ಕೆ ಪುಷ್ಟಿ ನೀಡುತ್ತದೆಂಬುದನ್ನು ಮುಂದೆ ಪ್ರಸ್ತಾಪಿಸಲಾಗುತ್ತದೆ). ಮೂರನೆಯ ಅಧ್ಯಾಯದ ಕೊನೆಯಲ್ಲಿ "ಸ್ವ-ಧರ್ಮದಲ್ಲಿ" ನಿರತರಾಗಬೇಕೆಂಬ ಆದೇಶವು ಮೂಡಿಬಂದುದನ್ನು ನಾವು ಗಮನಿಸಿದ್ದೇವೆ (ಶ್ಲೋಕ ೩೫). ತನ್ನದಲ್ಲದ ಧರ್ಮವನ್ನು, ಅಂದರೆ ವರ್ಣನಿರ್ದಿಷ್ಟವಾದ 'ಕಾಯಕ'ವನ್ನು, ಚೆನ್ನಾಗಿ ಮಾಡುವುದಕ್ಕಿಂತಲೂ ತನ್ನದೇ 'ಧರ್ಮ'ವನ್ನು ಸ್ವಲ್ಪ ಕೆಟ್ಟದಾಗಿ ಮಾಡಿದರೂ ಅದು ಯೋಗ್ಯವೇ ಆಗಿರುತ್ತದೆ ಎಂಬುದು ಅದರ ಸಾರಾಂಶ. ಹಾಗಿದ್ದರೆ ಕಟ್ಟಳೆಯನ್ನು ಮೀರಿ ನಡತೆಯನ್ನು ರೂಢಿಸಿಕೊಳ್ಳುವ ಜನರಿದ್ದಾರಲ್ಲ, ಏಕೆ ? (ಶ್ಲೋಕ ೩೬). ರಜೋಗುಣವೆಂಬ ವೈರಿಯು ಅದಕ್ಕೆ ಕಾರಣ; ಆ ಗುಣವು ಕಾಮ-ಕ್ರೋಧ ರೂಪಗಳಲ್ಲಿ ವ್ಯಕ್ತವಾಗುತ್ತದೆ (ಶ್ಲೋಕ ೩೭). ಆ ಶತ್ರುವನ್ನು ಸೂಕ್ತ ತಿಳುವಳಿಕೆಯಿಂದ ಜಯಿಸಬೇಕು (ಶ್ಲೋಕ ೪೩).

ಅಂತಹ ತಿಳುವಳಿಕೆ ಯಾವುದು, ಅದನ್ನು ಮಾನವನಿಗೆ ನೀಡಿದ್ದಾದರೂ ಯಾರು, ಎಂಬುದು ನಾಲ್ಕನೆಯ ಅಧ್ಯಾಯಕ್ಕೆ ಪೀಠಿಕೆಯ ರೂಪದಲ್ಲಿದೆ. ಇಲ್ಲಿ ಕೃಷ್ಣ ಭಗವಾನನು ಪರಮ ಸೃಷ್ಟಿಕರ್ತನಾದ ವಾಸುದೇವನೇ ತಾನೆಂಬ 'ರಹಸ್ಯವನ್ನು' ಭಕ್ತನೂ ಸಖನೂ ಆದ ಅರ್ಜುನನಿಗೆ ತಿಳಿಸಿಬಿಡುತ್ತಾನೆ. ಅರ್ಜುನನ ಸ್ಥಾನದಲ್ಲಿರುವ ಗೀತೆಯ ಓದುಗರಿಗೆ 'ಇದು ಭಗವಂತನಿಂದಲೇ ಬಂದಿರುವ ಆದೇಶ' ಎಂಬ ಗಾಢವಾದ ಭಾವವು ಮೂಡಬೇಕು. "ಕಾಗದ ಬಂದಿದೆ ಪದುಮನಾಭನದು, ಅದನ್ನೋದಿಕೊಂಡು (ಅದರ ಆದೇಶದಂತೆ) ಕಾಲವ ಕಳೆಯಿರೋ" ಎಂದು ಪುರಂದರದಾಸರು ಹೇಳುತ್ತಾರಲ್ಲಾ, ಅದೇ ಇದು. ತಾವೇ ಸ್ವತಃ ಭಗವಂತರೆಂಬ ಅಹಮಿಕೆಯನ್ನು ಉಪದೇಶಕರು ಪ್ರದರ್ಶಿಸುವುದು ನಮ್ಮ ದೇಶದ ಪರಂಪರೆಯಲ್ಲಿದ್ದರೆ ಅದಕ್ಕೆ ಗೀತೆಯ ಕರ್ತೃವು ಜೀವತುಂಬಿದ್ದಾನೆಂದು ಹೇಳಿದರೆ ತಪ್ಪಾಗಲಾರದು. ಭಗವಾನನ ಉಪದೇಶವು ಹೊಸದಲ್ಲ, ಅದು ಪರಂಪರಾಗತವಾದ್ದು; ಆದರೆ ಕಾಲವು ಸರಿಯುತ್ತಿದ್ದಂತೆ ಉಪದೇಶದ ಸಾರವು ಕ್ಷೀಣಿಸಿಬಿಟ್ಟಿದೆ. ಆದ್ದರಿಂದ ಪುನರಪಿ ಅದನ್ನು ಉಚ್ಚರಿಸಿ ಮನಸುಗಳಲ್ಲಿ ಗಟ್ಟಿಗೊಳಿಸ ಬೇಕಾಗಿದೆ (೪.೨ : ಏವಂ ಪರಂಪರಾಪ್ರಾಪ್ತಂ ಇಮಂ ರಾಜರ್ಷಯೋ ವಿದುಃ। ಸ ಕಾಲೇನ ಮಹತಾ ಯೋಗೋ ನಷ್ಟಃ ಪರಂತಪ ॥). ಪರಂಪರೆಯನ್ನು ಅಧ್ಯಾಯದ ಮೊದಲ ಪದ್ಯದಲ್ಲಿ ಸೂಚಿಸಲಾಗಿದೆ : ಮೊದಲು ಅದನ್ನು ವಿವಸ್ವಾನ್‌ಗೆ ಬೋಧಿಸಲಾಗಿತ್ತು; ಅವನು ಮನುವಿಗೆ ತಿಳಿಸಿಕೊಟ್ಟ ಮತ್ತು ಮನುವು ತನ್ನ ಮಗ ಇಕ್ಷ್ವಾಕುವಿಗೆ ಹಸ್ತಾಂತರಿಸಿದ. ಒಟ್ಟಿನಲ್ಲಿ, ಮಾನವನು ತಿಳಿಯಬೇಕಾದ ಮತ್ತು ಅನುಸರಿಸ ಬೇಕಾದ ಜೀವನವಿವೇಕಕ್ಕೆ ಒಂದು ಚರಿತ್ರೆ ಇದೆ. ಯಾವುದನ್ನು ಶ್ರೇಷ್ಠ ತಿಳುವಳಿಕೆಯೆಂದು ಭಾವಿಸ ಲಾಗುತ್ತದೋ ಅದು ನಿರಾಳವಾಗಿ ಜೀವಂತವಾಗಿ ನಿಲ್ಲದಿರುವುದು ಮಾನವ ಜನಾಂಗದ ನಿಜೇತಿಹಾಸದ ಲಕ್ಷಣ ಮತ್ತು ತಿರುಳು. ಗೀತೆಯ ಕರ್ತೃವಿನ ದೃಷ್ಟಿಯಲ್ಲಿ ವರ್ಣ ವಿಭಜನೆ, ಸ್ವ-ಧರ್ಮದ ಬಗೆಗಿನ ನಿಷ್ಠೆ, ಇವೆಲ್ಲಾ ಆದಿಕಾಲದಿಂದಲೂ ಇರುವಂಥವೇ; ಆದರೆ ಕಾಲಕಾಲಕ್ಕೆ ಅದನ್ನು ಪ್ರಶ್ನಿಸಿ ತಳ್ಳಿಹಾಕಿಬಿಡುವ ಜನಸಮೂಹವೂ ಇರುತ್ತದೆ. ಅಂಥವರನ್ನು ನಿಯಂತ್ರಿಸ ಬೇಕಾಗುತ್ತದೆಯಾದ್ದರಿಂದ ಭಗವಾನನು ಮತ್ತೆ ಮತ್ತೆ ಧರೆಗೆ ಇಳಿದುಬರುತ್ತಾನೆ ಅಥವಾ ಅವತರಿಸುತ್ತಿರುತ್ತಾನೆ. ಇನ್ನು ಮುಂದೆ ಪರವಾಗಿಲ್ಲ, ಎಲ್ಲವನ್ನೂ ಸರಿ ಪಡಿಸಿದ್ದೇನೆ, ಸಮಾಜದ ರೀತಿನೀತಿಗಳು ಸ್ಥಿರವಾಗಿ ನಿಲ್ಲುತ್ತವೆ, ಎಂದು ಭ್ರಮಿಸುವ ಭಗವಾನನು ತೆರಳಿದ ನಂದರೆ ಮತ್ತೆ ಯಥಾಸ್ಥಿತಿ ! ಸಾಧುಗಳನ್ನು ಕಾಪಾಡಲು ಮತ್ತು ದುಷ್ಕೃತ್ಯಗಳನ್ನೆಸಗುವವರನ್ನು ನಾಶಮಾಡಲು ಭಗವಾನನು ಮತ್ತೆ ಅವತರಿಸಿ ಬರಬೇಕಾದ ಪ್ರಸಂಗ. ಅವನು ಧರ್ಮವನ್ನು ಸ್ಥಾಪಿಸಿ ಸಂತೃಪ್ತನಾಗುತ್ತಾನೆ, ಆದರೆ ಇತಿಹಾಸವನ್ನು ಪುನಾರಚಿಸಲು ಹಂಬಲಿಸುವ ಜನತೆ ಅದನ್ನು ಅಸ್ಥಿರಗೊಳಿಸಿ ಬೇರೊಂದು ಪ್ರಣಾಲಿಕೆಯನ್ನು ಮುಂದಿರಿಸುತ್ತದೆ. ಇದು ಇತಿಹಾಸದ ಗತಿ, ಆದರೆ ಗತಿ (ಚಲನೆ) ಇಲ್ಲದಂತೆ ಮಾಡುವ ತವಕ ಭಗವಾನನದು (ಅಥವಾ ಯಥಾಸ್ಥಿತಿವಾದಿಗಳದ್ದು). ತನಗೆ ಪೂರ್ತಿಯಾಗಿ ಮನದಟ್ಟಾಗಿಲ್ಲದಿದ್ದರೂ ಗೀತೆಯ ಕರ್ತೃವು ಮಾನವ ಇತಿಹಾಸದ ಬಗೆಗೆ ಮಹತ್ವದ ಒಂದು ವಿಶ್ಲೇಷಣೆಯನ್ನು ನೀಡಿದ್ದಾನೆ. ಸಮಾಜದ ಪ್ರತಿಷ್ಠಿತ ವರ್ಗವು ಯಾವುದನ್ನು ಶಾಶ್ವತವಾದ ಧರ್ಮ ಅಥವಾ ಸಾಮಾಜಿಕ ನಡವಳಿಕೆ ಎಂದು ವೈಭವೀಕರಿಸುತ್ತದೋ ಅದು ನಶ್ವರ, ಅದನ್ನು ಕಿತ್ತೊಗೆದು ಬೇರೊಂದು ಸಾಮಾಜಿಕ ಮೌಲ್ಯವನ್ನು ಪುಷ್ಟೀಕರಿಸುವ ಜನವಿಭಾಗವಿರುತ್ತದೆ. ತಮ್ಮನ್ನು ತಾವು 'ಪ್ರತಿಷ್ಠಿತ ಜ್ಞಾನಿಗಳು' ಎಂದು ತಿಳಿದಿರುವ ಧರ್ಮಶಾಸ್ತ್ರಕಾರರು ನಿಬಂಧಿಸಿದ್ದನ್ನು ಪ್ರಶ್ನಿಸಿ ಪರ್ಯಾಯವೊಂದರತ್ತ ಮುನ್ನುಗ್ಗುವುದು ಸಮಾಜದ ಲಕ್ಷಣ. ಅದು ಸಮಾಜದ ಚಲನಶೀಲತೆ; ಸಮಾಜವನ್ನು ನಿಂತನೀರಾಗಿ ಉಳಿಸಲು ಜನತೆಯು ಒಡಂಬಡುವುದಿಲ್ಲ. ಆದರೆ ಗೀತೆಯ ಕರ್ತೃವು ಸ್ಥಗಿತತೆಯ ಸಮರ್ಥಕ, ಅದನ್ನು ಸ್ಥಿರಗೊಳಿಸಲು ಸಾಧ್ಯವೆಂದು ಬೌದ್ಧಿಕವಾಗಿ ಶ್ರಮಿಸಲು ಹಿಂತೆಗೆಯುವುದಿಲ್ಲ. ಮಾನವ ಸಮಾಜದ ಇತಿಹಾಸವು ಗೀತೆಯ ಆಶಯವನ್ನು ಕ್ರಿಯಾತ್ಮಕವಾಗಿ ಪ್ರಶ್ನಿಸುತ್ತಲೇ ಬಂದಿದೆ.

ಗೀತೆಯ ಎರಡು ಶ್ಲೋಕಗಳು ಬಹುಪ್ರಸಿದ್ಧ. ಅವನ್ನು ರಾಗರಾಗವಾಗಿ ಉಚ್ಚರಿಸುತ್ತಾ ಪರಮಾತ್ಮನ ವೈಭವವನ್ನು ಪುಲಕದಿಂದ ಹೊಗಳುವ ಉಪದೇಶಕರ ಬೃಹತ್ ಸೈನ್ಯ ನಮ್ಮಲ್ಲಿ ಬಹುಕಾಲದಿಂದ ಕಾರ್ಯ ನಿರತವಾಗಿದೆ. ಎಲ್ಲ ಕಲಾಪ್ರಕಾರಗಳಲ್ಲೂ ಅದಕ್ಕೆ ವಿಶಿಷ್ಟ ಸ್ಥಾನವಿದೆ : ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ। ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ॥ ಪರಿತ್ರಾಣಾಯ

ಸಾಧೂನಾಂ ವಿನಾಶಾಯ ಚ ದುಷ್ಕೃತಾಂ। ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ॥ (೪.೭–೮). ಭಗವಾನನೇ ಸ್ಥಾಪಿಸಿದ್ದು ಮತ್ತೆ ಶಿಥಿಲಗೊಳ್ಳುವುದಾದರೆ ಆ ಭಗವಾನನ ಮಹತ್ವವು ಪ್ರಶ್ನಾರ್ಹವಾಗುತ್ತದಲ್ಲವೆ ಎಂಬ ಪ್ರಶ್ನೆ ಹಾಕಿಕೊಳ್ಳಲು ನಾವು ಹಿಂಜರಿದಿದ್ದೇವೆ. ಅವನು ಧರ್ಮದ ಸ್ಥಾಪನೆ ಮಾಡಲು ಮತ್ತೆ ಮತ್ತೆ ಅವತರಿಸುವುದು ಧರ್ಮಕ್ಕೆ ಗ್ಲಾನಿಯು ಮುಸುಕಿದಾಗ, 'ಗ್ಲಾನಿ' ಎಂದರೆ ಆಯಾಸ, ಬಳಲಿಕೆ, ದೌರ್ಬಲ್ಯ, ಶರೀರದ ಕ್ಷೀಣತೆ. ಈ ಬಾಧೆಗಳಿಂದ 'ಧರ್ಮವು' (ಅಥವಾ ಸ್ವ–ಧರ್ಮವು) ವಿಚಲತೆಗೆ ಗುರಿಯಾಗ ಬಾರದೆಂಬುದು ಭಗವಾನನ ಸಂಕಲ್ಪ; ಆದರೆ ಭಗವಾನನ ಸಂಕಲ್ಪ ಸಹ ಸಮಾಜದ ಚಲನ ಶೀಲತೆ ಎಂಬ ಬಿರುಗಾಳಿಗೆ ಸಿಲುಕಿಬಿಡುತ್ತದೆ. ಗೀತೆಯ ಮೊದಲ ಅಧ್ಯಾಯದಲ್ಲಿ "ಶಾಶ್ವತ ಧರ್ಮವು" ನಶಿಸಿಹೋಗುತ್ತದಲ್ಲಾ ಎಂದು ಬಿಸುಸುಯ್ಯುವುದನ್ನು ಕಂಡೆವಲ್ಲಾ, ಅದು ಗೀತೆಯಲ್ಲಿ ಹತ್ತಾರು ಬಾರಿ ಪುನರಾವರ್ತನೆಗೊಂಡಿದೆ. ಗ್ಲಾನಿಗೆ ಕಾರಣವನ್ನು ಭಗವಾನನು ಕಂಡುಕೊಂಡಿಲ್ಲ, ಸಮಾಜದ ನಾವು ಸಹ ಅದರಲ್ಲಿ ಸೋಲುತ್ತಲೇ ಬಂದಿದ್ದೇವೆ; ಆದ್ದರಿಂದ ಸಮಾಜದ ಚಲನಶೀಲತೆಯು ನಿರಂತರವಾಗಿ ಉಳಿದಿದೆ, ಉಳಿಯುತ್ತದೆ. ಧರ್ಮದ ಗ್ಲಾನಿಯೆಂದರೆ 'ಅ–ಧರ್ಮ'ವೆಂದೇನೂ ನಾವು ಹತಾಶರಾಗಬೇಕಾಗಿಲ್ಲ; ಏಕೆಂದರೆ, ಗ್ಲಾನಿಯಿಂದ ಚೇತರಿಸಿಕೊಂಡಾಗ ಬೇರೊಂದು ಧರ್ಮವು, ಅಂದರೆ ಸ್ವ–ಧರ್ಮಕ್ಕೆ ಜೋತುಬಿದ್ದು ಕಂಗಾಲಾಗದ ಧರ್ಮವು, ನೆಲೆಸುತ್ತದೆಯೇ ವಿನಾ ಅ–ಧರ್ಮಕ್ಕೆ ಹಾದಿ ಮಾಡಿಕೊಡುವುದಿಲ್ಲ. ತಾತ್ಪರ್ಯ ರೂಪದಲ್ಲಿ ಹೇಳುವುದಾದರೆ, ಗೀತೆಯು ಸಮಾಜದಲ್ಲಿ ಅನಿವಾರ್ಯವಾಗಿ ಸಂಭವಿಸುವ ಬದಲಾವಣೆಗಳನ್ನು ಗಮನಿಸುತ್ತದೆ, ಆದರೆ ಹಾಗಾಗಬಾರದೆಂದು ಆಶಿಸುತ್ತದೆ. ಇದನ್ನು ವರ್ಣ–ಪರವಾದ ಮತ್ತು ವರ್ಗ–ಪರವಾದ ನಿಲುವೆಂದು ತರ್ಕಿಸಿದರೆ ಯಾರೂ ಅಸಮಾಧಾನದ ಕಿಡಿಯನ್ನು ಹಾರಿಸುವ ಅಗತ್ಯವಿಲ್ಲ. ವರ್ತಮಾನವು ಶಾಶ್ವತವಲ್ಲವೆಂಬುದು ಇತಿಹಾಸದ ಗತಿಯ ಮೊದಲ ಸೂತ್ರ. ಇತಿಹಾಸವನ್ನು ಒಬ್ಬ ಧೀಮಂತ, ಬಲಶಾಲಿ, ಪ್ರಭಾವಿ ನಾಯಕ (ಹೀರೊ) ರೂಪಿಸಿಬಿಡಬಲ್ಲನೆಂದು ಪ್ರತಿಪಾದಿಸಿದವರಲ್ಲಿ ಥಾಮಸ್ ಕಾರ್ಲೈಲ್ ಒಬ್ಬ. ಗೀತೆಯ ಭಗವಾನನು ಅಂತಹ ನಾಯಕ ಅಥವಾ 'ಹೀರೊ.' ಆದರೆ ಅವನು ಜನಸಮುದಾಯದ ಸಂಘರ್ಷಣಾತ್ಮಕ ಕ್ರಿಯಾಶೀಲತೆಯ ಮುಂದೆ ಸೋತು ಹತಾಶನಾಗಬೇಕಾಗುತ್ತದೆ. ಆದ್ದರಿಂದಲೇ ಹೀರೋಗಳು ಪದೇಪದೇ ನಮ್ಮ ಮಧ್ಯೆ ಅವತರಿಸಿ, ಕೆಲಕಾಲ ವಿಜೃಂಭಿಸಿ, ಕಡೆಗೆ ನಿತ್ರಾಣದಿಂದ ಕಮರಿಹೋಗುತ್ತಾರೆ.



ಉಳಿದಂತೆ, ಗೀತೆಯ ನಾಲ್ಕನೆಯ ಅಧ್ಯಾಯವು ದೇವಯಜನ ಮತ್ತು ಬ್ರಹ್ಮಯಜ್ಞ, ಇವುಗಳ ನಡುವಿನ ವ್ಯತ್ಯಾಸವನ್ನು ಗುರುತಿಸುತ್ತದೆ. ತಾನು ಇತರರಂತೆ ಜನ್ಮ ತಾಳಿರುವವನಲ್ಲ (ಅಜ), ಎಲ್ಲಕ್ಕೂ ಒಡೆಯ; ಆದಾಗ್ಯೂ ತನ್ನಿಂದ ತಾನೆ ಅವತರಿಸಬಲ್ಲವನು, ಎಂದು ಭಗವಾನ್ ತಿಳಿಸುತ್ತಾನೆ (೪.೬ : ... ಸಂಭವಾಮಿ ಆತ್ಮಮಾಯಯಾ). ಇತರರಿಗೆ ಪುನರ್ಜನ್ಮವಿದೆ, ಆದರೆ ಅವನದು ಅಂತಹ ಪ್ರಕ್ರಿಯೆಗೆ ಹೊರತಾದ್ದು. ಸಾಮಾನ್ಯರು ಸಹ ಪುನರ್ಜನ್ಮದ ಚಕ್ರದಿಂದ ಮುಕ್ತರಾಗಬಲ್ಲರು; ಅದಕ್ಕೆ ಭಗವಾನನ ದಿವ್ಯತ್ವದ ಅರಿವನ್ನು ಪಡೆಯಬೇಕು (೪.೯). ಇದನ್ನು ಮುಂದೆ ಭಕ್ತಿಯೋಗವೆಂದು ಗೀತೆಯು ವ್ಯಾಖ್ಯಾನಿಸುತ್ತದೆ. ಅದರ ಛಾಯೆಯು ನಾಲ್ಕನೆಯ ಅಧ್ಯಾಯದಲ್ಲಿ ಕಾಣಬರುತ್ತದೆ. ವಿಶಿಷ್ಟಾದ್ವೈತದ ಪ್ರಣಾಲಿಕೆಯಲ್ಲಿ ಸಾಯುಜ್ಯ, ಸಾಮೀಪ್ಯ, ಪ್ರಪತ್ತಿ, ಮುಂತಾದ ಪರಿಕಲ್ಪನೆಗಳಿವೆ. ಅದರ ಅಂಕುರವು ಜ್ಞಾನಯೋಗದ ಭಾಗವಾಗಿ ಇಲ್ಲಿ ಕಾಣಿಸಿಕೊಂಡಿದೆ. ಸಂಪೂರ್ಣ ಶರಣಾಗತಿಯು ಅದರ ಮೂಲಸಾರ; ತನ್ಮೂಲಕ ಭಗವಂತನನ್ನು ಸೇರಿಕೊಳ್ಳುತ್ತಾರೆ; ಅಂಥವರಿಗೆ ಪುನರ್ಜನ್ಮವಿಲ್ಲ (೪.೯). ಭಗವಂತನೆಂದರೆ ಜುಂಜಪ್ಪನೂ ಆಗಬಹುದು, ಮಂಟೇಸ್ವಾಮಿಯೂ ಆಗಬಹುದು; ಯಾವ ರೂಪದಲ್ಲಿ ಬೇಕಾದರೂ ಆ ಪರಾ ತತ್ವವನ್ನು ಕಲ್ಪಿಸಿಕೊಳ್ಳಲು ಅಡ್ಡಿಯಿಲ್ಲ (೪.೧೧ : ಯೇ ಯಥಾ ಮಾಂ ಪ್ರಪದ್ಯಂತೇ ತಾನ್ ತಥೈವ ಭಜಾಮ್ಯಹಂ). ಇದನ್ನು ಭಕ್ತ್ಯುಪೇತ ಜ್ಞಾನಮಾರ್ಗವೆನ್ನಬಹುದು.

ಇನ್ನೊಂದು ಮಾರ್ಗವಿದೆ : ಅದು ದೇವಯಜನ. ಅಂದರೆ, ದೇವತೆಗಳನ್ನುದ್ದೇಶಿಸಿ ಇಷ್ಟಾರ್ಥ ಸಾಧನೆಗೆ ಯಜ್ಞ ಮಾಡುವುದು (೪.೧೨ : ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ). ಅದರಿಂದ ಶೀಘ್ರವಾಗಿ ಫಲ ಲಭಿಸುತ್ತದಂತೆ, ಆದರೆ ಅದಕ್ಕೊಂದು ಷರತ್ತಿದೆ. **ಫಲಸಿದ್ಧಿಯು ಯಜ್ಞ ಕರ್ತೃವಿನ ಕ್ರಿಯೆಯ ಪರಿಣಾಮವಾಗಿ ಸಹಜವಾಗಿ ದೊರೆಯುವುದಿಲ್ಲ. ಫಲವು ಆಯಾ ವರ್ಣದವರಿಗೆ ಅನುಗುಣವಾಗಿ ಲಭಿಸುತ್ತದೆ**. ಯಾವ ವರ್ಣದವರಿಗೆ ಎಷ್ಟು ಮತ್ತು ಎಂತಹ ಫಲವು ಶೀಘ್ರವಾಗಿ ದೊರೆಯುತ್ತದೆ ಎಂಬುದನ್ನು ಇಲ್ಲಿ ಹೇಳಿಲ್ಲ. "ಸಿದ್ಧಿರ್ಭವತಿ ಕರ್ಮಜಾ" ಎಂದಷ್ಟೇ ಹೇಳಲಾಗಿದೆ. ಗಮನಾರ್ಹವಾದ ಸಂಗತಿ ಏನೆಂದರೆ ಈ ಶ್ಲೋಕದ ಮುಂದಿನ ಶ್ಲೋಕವು ಅತ್ಯಂತ ಪ್ರಸಿದ್ಧವಾದ್ದು ಮತ್ತು ಅದರಲ್ಲಿ ನಾಲ್ಕು ವರ್ಣಗಳು ಗುಣ ಮತ್ತು ಕರ್ಮಗಳ ಆಧಾರದ ಮೇಲೆ ಸ್ವತಃ ಭಗವಾನನಿಂದಲೇ ಸೃಷ್ಟಿಸಲ್ಪಟ್ಟಿವೆ ಎಂಬ ಮಾತು ಬರುತ್ತದೆ. ಅವನು ಸಾಮಾನ್ಯತಃ ಕರ್ಮಾತೀತ, ಆದರೆ ವರ್ಣಗಳನ್ನು ಸೃಷ್ಟಿಸಿದ್ದು ಮಾತ್ರ ಅವನೇ (೪.೧೩ : ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ। ತಸ್ಯ ಕರ್ತಾರಮಪಿ ಮಾಂ ವಿದ್ಧಿ ಅಕರ್ತಾರಮವ್ಯಯಂ ॥). ಮುಂಚಿನ ಪದ್ಯದ "ಕರ್ಮಜಾ" ಎಂಬುದಕ್ಕೂ ಈ ಪದ್ಯದ "ಕರ್ಮ ವಿಭಾಗಶಃ" ಎಂಬುದಕ್ಕೂ ಸಂಬಂಧವಿದೆ. ವರ್ಣಗಳ ಶ್ರೇಷ್ಠತೆಗೆ ತಕ್ಕಂತೆ ಫಲ ಪ್ರಾಪ್ತಿಯಾಗುತ್ತದೆಯೆಂಬುದು ಗೀತೆಯ ಉಕ್ತಿ. ಚತುರನಾದ ಭಗವಾನನು ಕರ್ಮಕ್ಕೆ ತಕ್ಕಂತೆ ಫಲ ನೀಡುವುದರ ಬದಲು ವರ್ಣಕ್ಕೆ (ಅಥವಾ ವರ್ಗಕ್ಕೆ) ತಕ್ಕಂತೆ ಫಲ ಕರುಣಿಸುತ್ತಾನೆ. ಈ ಭಾವವನ್ನು ಅಭಿವ್ಯಕ್ತಿಸುವ ಉದ್ದೇಶವು ಸದರಿ ಶ್ಲೋಕಕ್ಕೆ ಇಲ್ಲವೆಂದು ವಾದಿಸಲಾಗದು; ಏಕೆಂದರೆ, ಹಾಗಿದ್ದರೆ ಇಲ್ಲಿ ಚಾತುರ್ವರ್ಣ್ಯದ ಪ್ರಸ್ತಾಪವೇ ಬರುತ್ತಿರಲಿಲ್ಲ; ಅದು ಅಸಂಗತವಾಗಿರುತ್ತಿತ್ತು. ಇನ್ನೊಂದಂಶವಿದೆ : ಕರ್ಮವಲ್ಲದೆ ಗುಣದ ಪ್ರಸ್ತಾಪವೂ ಇದೆ. ಇಲ್ಲಿ ಗುಣವು ನೈತಿಕತೆ, ಸರಳತೆ, ಇತ್ಯಾದಿಗಳನ್ನು ಸೂಚಿಸುವುದಿಲ್ಲ. ಗೀತೆಯು ಹತ್ತಾರು ಬಾರಿ ಹೇಳಿರುವಂತೆ ಗುಣಗಳು ಮೂರು : ಸತ್ವ, ರಜಸ್ ಮತ್ತು ತಮಸ್. ಇದನ್ನು ಗಮನಿಸಿಯೇ ಡಾ॥ ಅಂಬೇಡ್ಕರ್ ಹೇಳಿದ್ದು, ಭಗವಾನನು ಮೂರು ಗುಣಗಳಿಂದ ನಾಲ್ಕು ವರ್ಣಗಳನ್ನು ಹೇಗೆ ಸೃಷ್ಟಿಸಿದನೆಂಬುದು ಒಂದು ಚಮತ್ಕಾರ, ಎಂದು. ವೈಶ್ಯ ಮತ್ತು ಶೂದ್ರ ವರ್ಣದವರಲ್ಲಿ ತಾಮಸಿಕ ಗುಣವು ಹೆಚ್ಚಿನ ಮಟ್ಟದಲ್ಲಿರುತ್ತದೆಯೆಂದು ಗೀತೆಯು ಹೇಳುತ್ತದೆ. ಇದು ಎಂತಹ ವಿಚಿತ್ರವೆಂಬುದನ್ನು ನಾವಿಲ್ಲಿ ಗಮನಿಸಬೇಕು : ತಾಮಸಿಕ ಗುಣವು ನಮ್ಮನ್ನು ಅಲಸಿಗಳನ್ನಾಗಿಸುತ್ತದೆ, ಭಾನಸ ಪ್ರವೃತ್ತಿಯು ಹೆಚ್ಚುತ್ತದೆ, ಎಂಬುದು ಸ್ವೀಕೃತ ಗ್ರಹಿಕೆ. ಆದರೆ ತಾಮಸ ಗುಣವನ್ನು ದೊಡ್ಡ ಪ್ರಮಾಣದಲ್ಲಿ ಹೊಂದಿದ್ದಾರೆ ಎನ್ನಲಾದ ಶೂದ್ರರು ಬೇರೆಲ್ಲರಿಗಿಂತಲೂ ಹೆಚ್ಚು ಕೆಲಸ ಮಾಡುತ್ತಾರೆ, ಬಿಡುವೇ ಇಲ್ಲದಂತೆ ಶ್ರಮಿಸುತ್ತಾರೆ. ತಾಮಸ ಗುಣವು ದೈಹಿಕ ಶ್ರಮಕ್ಕೆ ಅಡ್ಡಿಯುಂಟು ಮಾಡುವುದಿಲ್ಲವೆಂದು ಭಾವಿಸಬೇಕು ! ಆದರೆ ಅದು ಅಸಂಗತ. ಇನ್ನೊಂದು ಅಸಾಂಗತ್ಯವನ್ನು ನೋಡಿ: ಭಗವಾನನು "ಅಕರ್ತಾರ" (ಶ್ಲೋಕ ೧೩), ಆದರೆ ಅವನು ವರ್ಣಗಳನ್ನು ಸೃಷ್ಟಿಸುತ್ತಾನೆ ! ಏನೂ ಮಾಡದವನು ವರ್ಣಗಳನ್ನು ನಾಲ್ಕು ವಿಭಾಗಗಳನ್ನಾಗಿ ಏಕೆ ಮಾಡಬೇಕಿತ್ತೋ ತಿಳಿಯದು. ನಾವು ಮೊದಲೇ ಗುರುತಿಸಿರುವಂತೆ ವರ್ಣ ವಿಭಜನೆಯು ಸಮಾಜದ ವಿಕಾಸದ ಹಾದಿಯಲ್ಲಿ ಘಟಿಸಿದೆ; ಅದನ್ನು ಯಾರೋ ನಿರ್ಮಿಸಿ ಸಮಾಜದ ಮಧ್ಯೆ ಸ್ಥಾಪಿಸಲಿಲ್ಲ. ಅದರಿಂದ ಒಂದು ವರ್ಗಕ್ಕೆ ಅನುಕೂಲವಿದ್ದಿತಾದ್ದರಿಂದ ಅದನ್ನು ಪೋಷಿಸಲಾಗಿದೆ, ಅಷ್ಟೇ.

ನಾಲ್ಕನೆಯ ಅಧ್ಯಾಯದ ಇನ್ನುಳಿದ ಭಾಗವು ಆತ್ಯಂತಿಕ ಜ್ಞಾನದ ಮಹತ್ವವನ್ನು ಸಾರಿಹೇಳುತ್ತದೆ

ಮತ್ತು ಪರಮಜ್ಞಾನಿಗೆ ಕರ್ಮಬಂಧನವು ಸುತರಾಂ ಇರುವುದಿಲ್ಲವೆಂದು ಪ್ರತಿಪಾದಿಸುತ್ತದೆ. ಆ ನಿಟ್ಟಿನಲ್ಲಿ ನೋಡಿದರೆ ಇದು ಸ್ಥಿತಪ್ರಜ್ಞ ಲಕ್ಷಣದ ಮುಂದುವರಿದ ಭಾಗವಾಗಿ ಕಾಣುತ್ತದೆ. ಜ್ಞಾನಿಯು ಕೇವಲಿಯಾಗಿ ಇದ್ದುಬಿಡಬಲ್ಲ, ಅವನಿಗೆ ಕರ್ಮಫಲ ತ್ಯಾಗವು ಸಹಜವಾದ್ದು. ಜ್ಞಾನಾಗ್ನಿಯು ಕರ್ಮಬಂಧನವನ್ನು ಕರುಕಲು ಮಾಡಿಬಿಡುತ್ತದೆ (೪.೧೯ : ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ। ಜ್ಞಾನಾಗ್ನಿದಗ್ಧ ಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥). ಸ್ಥಿತಪ್ರಜ್ಞನಂತೆ ಇವನು ಸದಾ ಸಂತುಷ್ಟನು, ದ್ವಂದ್ವಗಳಿಂದ ಬಾಧಿತನಾಗದವನು, ಮತ್ಸರಕ್ಕೆ ಕಿಂಚಿತ್ತೂ ಎಡೆಕೊಡದವನು (೨೨ : ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ). ಅವನು ನಿರತನಾಗುವುದು ಒಂದೇ ಜಿಜ್ಞಾಸೆಯಲ್ಲಿ; ಅದು ಬ್ರಹ್ಮಜಿಜ್ಞಾಸೆ. "ಬ್ರಹ್ಮನ್" ಅವನಿಗೆ ಸರ್ವಸ್ವವೂ ಆಗಿದೆ. ಬೇರೆಯವರು ಯಜ್ಞ ಮಾಡಿದರೆ ಹವಿಸ್ಸು, ಅಗ್ನಿ, ಹೋಮ, ಇತ್ಯಾದಿಗಳೆಲ್ಲ ಉಂಟು; ಆದರೆ ಪರಮಜ್ಞಾನಿಯ ಯಜ್ಞದಲ್ಲಿ ದೇವತೆ, ಹವಿಸ್ಸು, ಅಗ್ನಿ, ಹೋಮ, ಎಲ್ಲವೂ ಬ್ರಹ್ಮನ್ ಎಂಬುದೇ ಆಗಿರುತ್ತದೆ. ಆದ್ದರಿಂದ ಅವನದು ಬ್ರಹ್ಮಯಜ್ಞ ಎನ್ನಬಹುದು. (೨೪ : ಬ್ರಹ್ಮಾರ್ಪಣಂ ಬ್ರಹ್ಮ ಹವಿಃ ಬ್ರಹ್ಮಾಗ್ನೌ ಬ್ರಹ್ಮಣಾ ಹುತಂ। ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥). ಬೆಂಗಳೂರಿನ ಬಳಿ ಇರುವ ಒಂದು ಯೋಗಸಂಸ್ಥೆಯಲ್ಲಿ ಊಟ ಮಾಡುವಾಗ ಈ ಶ್ಲೋಕವನ್ನು ಪಠಿಸುತ್ತಾರೆ. ಏಕೆಂದು ಸ್ಪಷ್ಟವಾಗಿಲ್ಲ; ಬಹುಶಃ ಊಟವು ಸಹ ಬ್ರಹ್ಮನ್ ಸಾಕ್ಷಾತ್ಕಾರದ ಒಂದು ಅಂಗವೆಂಬ ಭಾವವಿದ್ದೀತು. ಜ್ಞಾನಿಗೆ ಬ್ರಹ್ಮಯಜ್ಞವೊಂದೇ ಯಜ್ಞವೆಂದು ಹೇಳಿದ್ದಕ್ಕಾಗಿ ಒಬ್ಬ ಕುಪಿತ (ಪ್ರಜಾವಾಣಿ ಪತ್ರಿಕೆಯ) ವಿಮರ್ಶಕರು 'ಅದು ಹಸಿಸುಳ್ಳು' ಎಂದು ಉದ್ವೇಗದಿಂದ ಬೈಗುಳ ಸುರಿಸಿ, ಕರ್ಮಯಜ್ಞ, ಜ್ಞಾನಯಜ್ಞ, ಮುಂತಾದವೂ ಇವೆಯೆಂದು ಉದ್ಗರಿಸಿದ್ದರು. ಕರ್ಮಯೋಗ – ಜ್ಞಾನಯೋಗಗಳೇ ಬೇರೆ, ಬ್ರಹ್ಮಯಜ್ಞವೇ ಬೇರೆ ಎಂಬುದು ಸಾಮಾನ್ಯ ತಿಳಿವಳಿಕೆ. ಜ್ಞಾನಿಗೆ ನೈಮಿತ್ತಿಕ (ಅಂದರೆ ಯಾವುದೋ ನಿಮಿತ್ತದಿಂದಾಗಿ) ಕರ್ಮ ಎಂಬುದೇನೂ ಇಲ್ಲವೆಂದಷ್ಟೇ ಇದರರ್ಥ. ಆದರೆ ತಪಸ್ಸು, ಧ್ಯಾನ, ಪ್ರಾಣಾಯಾಮ, ಮುಂತಾದುವೆಲ್ಲಾ ಅವನಿಗೆ ಬ್ರಹ್ಮಯಜ್ಞದ ಒಂದು ಭಾಗವೇ ಆಗಿರುತ್ತವೆ. ಗೀತೆಯು ಈ ಸಂದರ್ಭದಲ್ಲಿ ಪ್ರಾಸಂಗಿಕವಾಗಿ ಪ್ರಾಣಾಯಾಮ ಮುಂತಾದ ವಿಧಿಗಳನ್ನು ಸಂಕ್ಷಿಪ್ತವಾಗಿ ವಿವರಿಸುತ್ತದೆ. ಇಂದ್ರಿಯಗಳನ್ನು ಹರಿಯಬಿಡದೆ ಪ್ರಾಣದಲ್ಲಿ (ಅಂದರೆ, ಉಸಿರಾಟದಲ್ಲಿ) ಅವನ್ನು ಕೇಂದ್ರೀಕರಿಸುವುದು ಏಕಾಗ್ರತೆಗೆ, ತನ್ಮೂಲಕ ಧ್ಯಾನಕ್ಕೆ, ಒಂದು ಸಾಧನ. ಯುದ್ಧಭೂಮಿಯಲ್ಲಿ ನಿಂತು ಭಗವಾನ್ ಅರ್ಜುನನಿಗೆ ಪ್ರಾಣಾಯಾಮಾದಿ ಕ್ರಿಯೆಗಳನ್ನು ಬೋಧಿಸುತ್ತಾನೆ ಎಂಬುದು ಒಂದು ಸೋಜಿಗ. ಆರಂಭದಲ್ಲಿ ನಾವು ಗಮನಿಸಿದಂತೆ ಯುದ್ಧಭೂಮಿಯು ಸಮಕಾಲೀನ ಬೌದ್ಧಿಕ ಸಂಘರ್ಷಗಳ ಪ್ರತೀಕ. ಆದರೆ ಗೀತೆಯ ಕರ್ತೃವು ಯುದ್ಧಕ್ಕೆ ವಿಮುಖನಾಗಕೂಡದೆಂದು ಅರ್ಜುನನನ್ನು ಭಗವಾನ್ ಪ್ರೇರೇಪಿಸುತ್ತಾನೆಂಬುದನ್ನು ಮತ್ತೆ ಒತ್ತಿ ಹೇಳುತ್ತಾನೆ. ಸಂಶಯವು ಅರ್ಜುನನನ್ನು ಕಾಡುತ್ತಿದೆ, ಅದನ್ನವನು ಕತ್ತಿಯಿಂದ ಕತ್ತರಿಸಿ ಹಾಕಿ ಯುದ್ಧದಲ್ಲಿ ನಿರತಿಶಯ ಉತ್ಸಾಹದಿಂದ ಪಾಲ್ಗೊಳ್ಳಬೇಕು. (೪.೪೨ : ತಸ್ಮಾತ್ ಅಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ। ಛಿತ್ವಾ ಏನಂ ಸಂಶಯಂ ಯೋಗಮಾತಿಷ್ಠ ಉತ್ತಿಷ್ಠ ಭಾರತ ॥). ಜ್ಞಾನವೇ ಪರಾಕಾಷ್ಠೆ ಎಂಬುದು ನಾಲ್ಕನೆಯ ಅಧ್ಯಾಯದ ಸಾರಾಂಶವೆನ್ನಬಹುದು. ಯಾವುದರ ಜ್ಞಾನ ಎಂಬ ಪ್ರಶ್ನೆಗೆ 'ಬ್ರಹ್ಮಜ್ಞಾನ'ವೆಂಬ ಉತ್ತರ ನೀಡಲಡ್ಡಿಯಿಲ್ಲ. ಕೆಲವು ಉಪನಿಷತ್ತುಗಳ ಜಾಡನ್ನು ಹಿಡಿದು ಈ ಪ್ರತಿಪಾದನೆಯನ್ನು ಮಾಡಲಾಗಿದೆ.

ಸ್ಕಾಟ್ಲೆಂಡಿನ ಒಂದು ಹಳ್ಳಿಯಲ್ಲಿ ಕ್ರಿಸ್ತನ ನಿಷ್ಠಾವಂತ ಅನುಯಾಯಿ ಯುವಕನೊಬ್ಬನಿದ್ದನಂತೆ. ಗ್ರಾಮದ ಪಾದ್ರಿಯ ಬಳಿ ಹೋಗಿ ನಿರಂತರವಾಗಿ ಅವನು ಕ್ರೈಸ್ತಮತದ ದೇವತಾಶಾಸ್ತ್ರವನ್ನು (ಥಿಯಾಲಜಿ) ಕುರಿತಂತೆ ಅನುಮಾನಗಳನ್ನು ವ್ಯಕ್ತಪಡಿಸಿ ಚರ್ಚೆಗೆ ಇಳಿಯುತ್ತಿದ್ದ. ಪಾದ್ರಿಗೆ ಇದೆಲ್ಲಾ ರುಚಿಸದು. ವಾರಕ್ಕೊಮ್ಮೆ ಬೋಧನೆ ನೀಡಿ ಆರಾಮದಿಂದಿರುವುದು ಅವನ ಪದ್ಧತಿ. ಆದರೆ ಯುವಕ ಅವನನ್ನು ಪೀಡಿಸುತ್ತಿದ್ದ. ಹೀಗಿರುತ್ತಿದ್ದಾಗ ಒಮ್ಮೆ ಕ್ಯಾಂಟರ್‌ಬರಿಯ ಆರ್ಚ್‌ಬಿಶಪ್ ಆ ಗ್ರಾಮಕ್ಕೆ ಬರುವುದಿತ್ತು. ಪಾದ್ರಿ ಯುವಕನಿಗೆ ಹೇಳಿದ : "ನೋಡು, ಸುಮ್ಮನೆ ನನ್ನನ್ನು ಗೋಳುಹುಯ್ದುಕೊಳ್ಳಬೇಡ; ಸರ್ವಜ್ಞ ಆರ್ಚ್‌ಬಿಶಪ್ ಬರುತ್ತಾರೆ. ಎಲ್ಲ ಪ್ರಶ್ನೆಗಳನ್ನು ಕೇಳಿ ಅವರಿಂದ ಪರಿಹಾರ ಪಡೆದುಬಿಡು." ಯುವಕ ಅಂತೆಯೇ ಆರ್ಚ್‌ಬಿಶಪ್ ಬಳಿ ದೀರ್ಘಕಾಲದ ಚರ್ಚೆ ನಡೆಸಿದ. ಮಾರನೆಯ ದಿನ ಪಾದ್ರಿ ಯುವಕನನ್ನು ಕೇಳಿದ : "ಏನಯ್ಯಾ, ನಿನ್ನ ಸಂಶಯಗಳೆಲ್ಲಾ ಪರಿಹಾರವಾದುವೋ?" ಯುವಕನೆಂದ: "ಹೌದು ಎನ್ನಬಹುದು. ಈವರೆಗೆ ನನಗೆ ಸಾಕಷ್ಟು ಗೊಂದಲಗಳಿದ್ದವು. ಆರ್ಚ್‌ಬಿಶಪ್ ಜೊತೆ ಸಂಭಾಷಣೆ ನಡೆಸಿದ ನಂತರ ಈಗ ನಾನು ಬಹು ಉಚ್ಚಮಟ್ಟದಲ್ಲಿ ಗೊಂದಲಗಳನ್ನು ತುಂಬಿಕೊಂಡಿದ್ದೇನೆ."

ಭಗವಾನನು ಒಂದು ಕಡೆ ಕರ್ಮಾತೀತನಾಗು ಎಂದು ಬೋಧಿಸಿದ್ದಾನೆ. ಅಂದರೆ, ಕರ್ಮಸಂನ್ಯಾಸವನ್ನು ಶ್ರೇಯಸ್ಕರವೆಂದು ಹೇಳಿದ್ದಾನೆ. ಅದೇ ಉಸಿರಿನಲ್ಲಿ ಇನ್ನೊಂದು ಕಡೆ ಜ್ಞಾನಯೋಗ ಬೋಧಿಸಿದ್ದಾನೆ. "ಇದೇನು ಗೊಂದಲ, ಕೃಷ್ಣ? ಸರಿಯಾಗಿ ಯಾವುದಾದರೂ ಒಂದನ್ನು ಪಕ್ವವಾಗಿ ತಿಳಿಸಿಕೊಡಬಾರದೆ?" ಎನ್ನುತ್ತಾನೆ ಅರ್ಜುನ. ಅದು ಗೀತೆಯ ಐದನೆಯ ಅಧ್ಯಾಯದ ವಸ್ತು. ಸ್ಥಿತಪ್ರಜ್ಞನ ಇನ್ನೊಂದು ಮುಖದ ಅನಾವರಣ ಇಲ್ಲಿದೆ. ಫಲಾಪೇಕ್ಷೆಯ ತುಡಿತವು ಪ್ರಧಾನವಾಗಿರದೆ ಯಥಾಯೋಗ್ಯ ತಮ್ಮ ತಮ್ಮ ಕರ್ಮಗಳಲ್ಲಿ ತೊಡಗಿರುವುದು ಕರ್ಮಸಂನ್ಯಾಸ; ಅಥವಾ ಯಜ್ಞಾದಿಗಳಿಂದ ಏನನ್ನೋ ಪಡೆಯುವುದಕ್ಕೆ ಆದ್ಯತೆ ನೀಡದೆ ನಿತ್ಯ ಮತ್ತು ನೈಮಿತ್ತಿಕ ಕರ್ಮಗಳನ್ನು ಕ್ರಮವಾಗಿ ಮಾಡುತ್ತಿರುವುದು ಕರ್ಮಸಂನ್ಯಾಸ. ಇದು ಶೂದ್ರವರ್ಣದವರಿಗೆ ಅನ್ವಯವಾಗುವಂಥದಲ್ಲ ಎಂದು ನಿರ್ದಿಷ್ಟವಾಗಿ ಗೀತೆಯು ಹೇಳದಿದ್ದರೂ ಅದರ ಇಂಗಿತ ಸ್ಪಷ್ಟವೇ ಆಗಿದೆ. ಕರ್ಮ ಸಂನ್ಯಾಸಕ್ಕಿಂತಲೂ ಕರ್ಮಯೋಗವು ವಿಶಿಷ್ಟವಾದ್ದು ಎನ್ನುತ್ತಾನೆ ಭಗವಾನ್. ಎರಡೂ ಮುಕ್ತಿಯ ಹಾದಿಗಳೇ ಆದರೂ ಕರ್ಮಯೋಗವು ಉಚ್ಚಮಟ್ಟದ್ದು (೫.೨ : ... ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ). ಇದು ಶೂದ್ರ ವರ್ಣದವರಿಗೂ ಅನ್ವಯವಾಗುವಂಥದು. ಅವರ ವರ್ಣಕ್ಕೆ ತಕ್ಕಂತೆ ಅವರಿಗೆ ಫಲ ದಕ್ಕುತ್ತವೆಂದು ನಾಲ್ಕನೆಯ ಅಧ್ಯಾಯದಲ್ಲಿ ಹೇಳಿದ್ದುದನ್ನು ಇಲ್ಲಿ ನೆನೆಯಬಹುದು. ಸಂನ್ಯಾಸದಲ್ಲಿ ಸಿದ್ಧಹಸ್ತರಾದವರು ಆಸೆ ಮತ್ತು ದ್ವೇಷಗಳಿಂದ ದೂರವಾಗಿರುತ್ತಾರೆ. ಗೀತೆಯು ಜ್ಞಾನಯೋಗವನ್ನು 'ಸಾಂಖ್ಯ' ಎಂದು ಹೆಸರಿಸುತ್ತದೆ; ಅದನ್ನು ಸಾಂಖ್ಯ ದರ್ಶನವೆಂದು ತಪ್ಪು ತಿಳಿಯಬಾರದು. ಅದು, ಅಂದರೆ ಸಾಂಖ್ಯ, ಮತ್ತು ಕರ್ಮಯೋಗ ಪರಸ್ಪರ ಭಿನ್ನವಲ್ಲ. ಏಕೆಂದರೆ ಒಂದರಿಂದ ಉಂಟಾಗುವ ಪರಿಣಾಮವು ಇನ್ನೊಂದರಿಂದಲೂ ಉಂಟಾಗುತ್ತದೆ. ಎರಡರಲ್ಲಿ ಯಾವುದನ್ನು ಬೇಕಾದರೂ ಆಯ್ಕೆ ಮಾಡಿಕೊಳ್ಳಬಹುದು (೫.೪... ಏಕಮಪ್ಯಾಸ್ಥಿತಃ ಸಮ್ಯಕ್ ಉಭಯೋರ್ವಿಂದತೇ ಫಲಂ). ಸ್ವಲ್ಪ ಲಘುವಾಗಿ ಟೀಕಿಸಬಹುದಾದರೆ, ಇಲ್ಲೊಂದು ಅನಿವಾರ್ಯ ವೈರುಧ್ಯವಿದೆ. ಗೀತೆಯು ವ್ಯಾಖ್ಯಾನಿಸ ಹೊರಟಿರುವುದು ಕರ್ಮಸಂನ್ಯಾಸವನ್ನು. ಅಂದರೆ ಫಲದ ನಿರೀಕ್ಷೆಯನ್ನು ಇಟ್ಟುಕೊಳ್ಳದಿರುವ ಮನಃಸ್ಥಿತಿಯನ್ನು; ಆದರೆ ಅದೇ ಸಂದರ್ಭದಲ್ಲಿ ಜ್ಞಾನ ಮತ್ತು ಕರ್ಮಯೋಗಗಳಲ್ಲಿ ಯಾವುದನ್ನು ಆಯ್ಕೆ ಮಾಡಿಕೊಂಡರೂ ಫಲವು ದೊರೆಯುತ್ತದೆಂದು ಸಹ ಹೇಳುತ್ತಿದೆ. ಇದು ನಿಜಕ್ಕೂ ಫಲಾಪೇಕ್ಷೆಯೋ ಅಥವಾ ಅದರ ಬಗ್ಗೆ ನಿರಾಸಕ್ತಿಯೋ? ಇಂತಹ ದ್ವಂದ್ವಗಳು ಗೀತೆಯಲ್ಲಿ ಆಗಾಗ್ಗೆ ವ್ಯಕ್ತವಾಗುವುದು ಅಪರೂಪವಲ್ಲ. ಅದರ ಪರಿಹಾರವೋ ಎಂಬಂತೆ ಇನ್ನೊಂದು ಶ್ಲೋಕದಲ್ಲಿ (೫.೬) ಕರ್ಮಯೋಗವನ್ನು

## ಇನ್ನು ಹೊಸತು ಹುಟ್ಟಲಾರದು

ಹುಟ್ಟಿನಿಂದಲೇ ಸುಖ

ಹುಟ್ಟಿನಿಂದಲೇ ದುಃಖ

ಹುಟ್ಟಡಗಿಸಿದರೆ

ಇನ್ನು ಸುಖ-ದುಃಖಗಳಿಲ್ಲ

ಕಲ್ಮಶ ಕಳೆದ ಮನಸ್ಸು

ಒಂದೇ ಸಮ ಪ್ರೀತಿಯ ಸುರಿಸಿರುವಾಗ

ಮುಕ್ತಿಯ ಶಾಂತಿ ನೆಲೆಯಾದೀತೇ ವಿನಾ

ಇನ್ನು ಹೊಸತು ಹುಟ್ಟಲಾರದು.

**ಜ್ಯೋತಿ ಗುರುಪ್ರಸಾದ್**
'ಕಾವೇರಿ', ತೆಳ್ಳಾರು ರಸ್ತೆ, ೧೬ನೇ ತಿರುವು
ಕಾರ್ಕಳ – ೫೭೪ ೧೦೪

ತೊರೆದು ಕರ್ಮಸಂನ್ಯಾಸಕ್ಕಷ್ಟೇ ಕಟ್ಟುಬಿದ್ದರೆ ದುಃಖದಲ್ಲಿ ಪರ್ಯವಸಾನವಾಗುವುದು ಖಚಿತವೆಂದು ಹೇಳಲಾಗಿದೆ. (ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ। ಯೋಗಯುಕ್ತೋ ಮುನಿರ್ಬ್ರಹ್ಮ ನಚಿರೇಣಾಧಿಗಚ್ಛತಿ ॥).

ನಿಜಕ್ಕೂ ಯೋಗವಿಧಿಗೆ ಬದ್ಧರಾದವರ ಲಕ್ಷಣಗಳನ್ನು ನಿರೂಪಿಸುವಾಗ ಗೀತೆಯು, ಕರ್ಮನಿರತರಾಗಿದ್ದು ಅದರ ಫಲದ ಗೋಜಿಗೆ ಹೋಗದಿದ್ದವರು ತಾವರೆಯ ಎಲೆಯ ಮೇಲಿನ ನೀರಿನಂತೆ, ಅಂದರೆ ಏನನ್ನೂ ಅಂಟಿಸಿಕೊಳ್ಳದಂತೆ, ಉಳಿಯುತ್ತಾರೆಂದು ಶ್ಲಾಘಿಸಿದೆ (೫.೧೦ : ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ। ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥). ಅಂಥವರ ಮಹದ್ಗುಣಗಳು (೫.೧೧–೧೭) ಎಂತಹ ಶುಭ್ರ ಅಥವಾ ಕಲ್ಮಶರಹಿತ ವ್ಯಕ್ತಿತ್ವವನ್ನು ರೂಪಿಸುತ್ತವೆಂದರೆ ಅವರಿಗೆ ಎಲ್ಲ ವಿಷಯಗಳಲ್ಲೂ ಸಮಭಾವವಿರುತ್ತದೆ. ಯಾರೋ ವಿದ್ಯಾಸಂಪನ್ನ, ಯಾರೋ ಬ್ರಾಹ್ಮಣ ವರ್ಣದ ವ್ಯಕ್ತಿ, ಯಾವುದೋ ಹಸು, ಇಲ್ಲವೇ ಆನೆ, ಇಲ್ಲವೇ ನಾಯಿ, ಇಲ್ಲವೇ ನಾಯಿ ತಿನ್ನುವವ, ಎಲ್ಲರನ್ನೂ ಸಮಭಾವದಿಂದ ನೋಡುವ ಮಹಾನ್ ಸಂಸ್ಕೃತಿ ಅಂಥವರಲ್ಲಿ ಜೀವಂತವಾಗಿರುತ್ತದೆ. (೫.೧೮ : ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ। ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥). ಅದು ಬ್ರಹ್ಮಜ್ಞಾನದ ಫಲವೋ ಇಲ್ಲವೇ ಉತ್ಕೃಷ್ಟ ಮಾನವತ್ವದ ಪರಿಣಾಮವೋ ಹೇಗೂ ಆಗಬಹುದು. ಗೀತೆಯ ಈ ಪದ್ಯವನ್ನು ಕುರಿತು ಎರಡು ವಿವರಣೆಗಳು ಅವಶ್ಯಕ : (ಅ) ಈ ಪದ್ಯದ ಮೇಲಿನ ವ್ಯಾಖ್ಯಾನಗಳಲ್ಲಿ 'ವಿದ್ಯಾವಿನಯ ಸಂಪನ್ನ' ಎಂಬುದನ್ನು 'ಬ್ರಾಹ್ಮಣ' ಎನ್ನುವುದಕ್ಕೆ ವಿಶೇಷಣವನ್ನಾಗಿ ಪರಿಗಣಿಸಿರುವುದು ಕಂಡುಬರುತ್ತದೆ. ಅಂದರೆ, ಬ್ರಾಹ್ಮಣರಲ್ಲದವರು ಅಂತಹ ವಿಶೇಷಣಕ್ಕೆ ಅರ್ಹರಲ್ಲವೆಂಬುದು; ಅಥವಾ, ಬ್ರಾಹ್ಮಣರಲ್ಲದವರಿಗೆ ಬ್ರಹ್ಮಜ್ಞಾನ ಲಭಿಸಿರಲಾರದೆಂಬ ಇಂಗಿತವೂ ಇರಬಹುದು. ಗೀತೆಯ ಕರ್ತೃವಿಗೆ ಗೌರವ ಸೂಚಿಸಲು ನಾವು 'ವಿದ್ಯಾವಿನಯಸಂಪನ್ನ' ಎಂಬುದನ್ನು ಬ್ರಾಹ್ಮಣರ ವಿಶೇಷಣವನ್ನಾಗಿ ನೋಡುವ ಬದಲು ಅದನ್ನು ಪ್ರತ್ಯೇಕ ನಾಮಪದವನ್ನಾಗಿ ಪರಿಗಣಿಸುತ್ತಿದ್ದೇವೆ. ಅದನ್ನು ವಿಶೇಷಣವನ್ನಾಗಿ ಕಂಡಿರುವ ಭಾಷ್ಯಕಾರರ ಮತ್ತು ಆಚಾರ್ಯರ ಸಂಪ್ರದಾಯ ಶರಣತ್ವವು ಅಷ್ಟೇನೂ ಅಭಿಮಾನ ಮೂಡಿಸುವುದಿಲ್ಲ. (ಆ) ಬ್ರಾಹ್ಮಣನನ್ನು ಹೆಸರಿಸುವ ಈ ಪದ್ಯದಲ್ಲಿ ಗೋವು, ಆನೆ, ನಾಯಿ ಮತ್ತು ನಾಯಿ ತಿನ್ನುವವ, ಇಂತಹ ಪ್ರಸ್ತಾಪವಿದೆ. ಶೂದ್ರ ಮತ್ತು ಅಸ್ಪೃಶ್ಯರನ್ನು ಗೀತೆಯ ಕರ್ತೃವು ಹೆಸರಿಸಬಹುದಿತ್ತು, ಆದರೆ ಹೆಸರಿಸಿಲ್ಲ. ಎರಡು ಕಾಲಿನವರು ಇಲ್ಲಿ ಇಬ್ಬಗೆ ಮಾತ್ರ : ವಿದ್ಯಾವಿನಯ ಸಂಪನ್ನ ಮತ್ತು ಬ್ರಾಹ್ಮಣ. ಎಲ್ಲ ಬ್ರಾಹ್ಮಣರೂ ಅಗತ್ಯವಾಗಿ ವಿದ್ಯಾವಿನಯ ಸಂಪನ್ನರೆಂದು ಹೇಳಲಿಲ್ಲವೆಂಬುದು ಸಮಾಧಾನಕರ. ಎರಡು ಕಾಲಿನ ಇನ್ನೊಬ್ಬನ ಪ್ರಸ್ತಾಪವಿದೆ : ಅವನು ನಾಯಿ ತಿನ್ನುವವನು. ವಿಶ್ವಾಮಿತ್ರ ಸಹ ಯಾವುದೋ ಕಠಿಣ ಸನ್ನಿವೇಶದಲ್ಲಿ ನಾಯಿ ತಿಂದಿದ್ದನೆಂಬ ಮಾಹಿತಿ ಇದೆಯಾದ್ದರಿಂದ ಈ ನಾಯಿ ತಿನ್ನುವವನು ಗೌರವಾನ್ವಿತ ವ್ಯಕ್ತಿಯೇ ಇರಬಹುದು. ಗೀತೆಯ ಕರ್ತೃವಿನ ಸಾಮಾಜಿಕ ಪ್ರಜ್ಞೆಯು ಎಂಥದೆಂದರೆ ಉದಾತ್ತ ತತ್ವಗಳನ್ನು ಪ್ರತಿಪಾದಿಸುವಾಗ ಕೂಡ ಅವನು ಇತರ ವರ್ಣದವರನ್ನು ಬ್ರಾಹ್ಮಣರ ಜೊತೆ ಹೆಸರಿಸಲಾರ. ಅಷ್ಟು ಜಡ್ಡುಗಟ್ಟಿದ್ದ ಸಮಾಜ ಅದು. ಆದ್ದರಿಂದಲೇ ವರ್ಣ ಸಂಕರದ ವಿಪತ್ತನ್ನು ದೂರ ಮಾಡಲು ಗೀತೆಯು ಪದೇ ಪದೇ 'ಸ್ವ–ಧರ್ಮ'ದ ಶ್ರೇಷ್ಠತೆಯನ್ನು ಶ್ಲಾಘಿಸುತ್ತದೆ. ಬ್ರಹ್ಮಜ್ಞಾನ ಪಡೆದರೂ ನಮ್ಮ ದೇಶದಲ್ಲಿ ವರ್ಣ ವಿಭಜನೆಯ ಕರಾಳತೆಯನ್ನು ಗುರುತಿಸುವುದು ಸಾಧ್ಯವಾಗಿಲ್ಲವೆಂದು ತೋರುತ್ತದೆ. ಗೀತೆಗೆ ನೇರವಾಗಿ ಸಂಬಂಧಿಸಿರದ ಇನ್ನೊಂದು ಸಂಗತಿಯ ಪ್ರಸ್ತಾಪವು ಅನುಚಿತವಲ್ಲ; ನಮ್ಮ ದೇಶದ ಪ್ರಾಚೀನ ಸಾಹಿತ್ಯ ಮತ್ತು ತತ್ವಶಾಸ್ತ್ರ ಗ್ರಂಥಗಳಲ್ಲಿ ಎಲ್ಲೂ ವರ್ಣ ವಿಭಜನೆ ಮತ್ತು ಅಸ್ಪೃಶ್ಯತೆಯನ್ನು ಅನಾಗರಿಕ ಅಥವಾ ಅಸಂಸ್ಕೃತ ಪದ್ಧತಿ ಎಂದು ಮೂದಲಿಸಿರುವುದು ಕಾಣಬರುವುದಿಲ್ಲ. ಲೋಕಾಯತರು ಮತ್ತು ಬೌದ್ಧರು ಮಾತ್ರ ಇದಕ್ಕೆ ಅಪವಾದ. ಬಾಣಭಟ್ಟನು ತನ್ನ 'ಹರ್ಷಚರಿತೆ'ಯಲ್ಲಿ ಅನೇಕ ವಿಧದ ಉದ್ಯೋಗಸ್ಥರನ್ನು ಹೆಸರಿಸಿದ್ದಾನೆ; ಯಾವುದನ್ನೂ ಮೇಲು ಅಥವಾ ಕೀಳು ಎಂದು ವಿಂಗಡಿಸಿಲ್ಲವೆಂಬುದು ಸ್ವಾಗತಾರ್ಹ.

ಗೀತೆಯ ಐದನೆಯ ಅಧ್ಯಾಯದ ಇನ್ನುಳಿದ ಭಾಗವು (೧೯–೨೯) ಬ್ರಹ್ಮಜ್ಞಾನಿಯ ಕಲ್ಮಶರಹಿತ ಮನಸ್ಸು ಎಷ್ಟು ಉದಾತ್ತ ಮತ್ತು ಅಪೇಕ್ಷಣೀಯ ಎಂಬುದನ್ನು ಮನೋಜ್ಞವಾಗಿ ಚಿತ್ರಿಸಿದೆ. ಅವನ ಅಂತರ್ಮುಖತೆಯು ಅನನ್ಯವಾದುದು.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧
೪ನೇ ಕ್ರಾಸ್, ಬನಶಂಕರಿ ೩ನೇ ಹಂತ, ಬೆಂಗಳೂರು – ೮೫

ಕಾವ್ಯಲೋಕ



# ಹೆರುವ ಒಡಲಿನ ಬೇಗುದಿ...



ಇಂಡಿಯಾ ಪಾಕಿಸ್ತಾನಗಳ
ನಡುವೆ ಎಷ್ಟಾಯಿತು ಯುದ್ಧ ?
ರಕ್ತ ಕಣ್ಣೀರ ಹೊರತು
ಮತ್ತೇನೂ ಹರಿಯದ ಯುದ್ಧದಲಿ
ನೆಹರು ಸತ್ತರೆ ?
ಅವರ ಸಂಬಂಧಿಕರು ಸತ್ತರೆ ?

ಬಾವುಟ ಭಕ್ತಿಯ ಕಾರ್ಗಿಲ್ ಕದನದಲಿ
ಸೈನಿಕರು ಎಷ್ಟು ದಿನ ಕಾದಾಡಿದರು ?
ಶವಪೆಟ್ಟಿಗೆಯ ಹೊರತು
ಮತ್ತೇನೂ ದೊರಕದ ಯುದ್ಧದಲಿ
ಊರೂರಿಗೆ ತಲುಪಿದ
ಶವಪೆಟ್ಟಿಗೆಯಲ್ಲಿ ವಾಜಪೇಯಿ ಹೆಣವಿತ್ತೆ ?
ಅವರ ಸಂಬಂಧಿಕರು ಹುತಾತ್ಮರಾದರೆ ?
ಮುಷರಫ್ ಹೆಣವಾಗಿ ಹೋದನೆ ?

ಜೀವ ಉಳಿಸುವ ಸರ್ಜಿಕಲ್ ಪದಕ್ಕೆ
ದಾಳಿಯ ಮೊನಚು ಅಂಟಿಸಿದ ಪ್ರಭುಗಳೆ
ಎಷ್ಟು ತಾಸು ಮದ್ದುಗುಂಡುಗಳು ಸಿಡಿದವು
ರಣಹದ್ದಿನ ಕೇಕೆಯ ಹೊರತು
ಮತ್ತೇನೂ ಕೇಳಿಸದ ಯುದ್ಧದಲಿ
ಮೋದಿಯ ಕೊನೆಯುಸಿರು ಹೋಯಿತೆ ?
ಅವರ ಹೆಂಡತಿಯ ಹೃದಯ ಸ್ತಬ್ಧವಾಯಿತೆ ?
ನವಾಜ಼್ ಶರೀಫ್ ಜೀವ ತೆತ್ತನೆ ?

ಮಗಳೇ, ಗುರ್ ಮೆಹರ್ ಕೌರ್,
ಯುದ್ಧಕೋರನಿಗೆ ಯಾವ ದೇಶ ?
ಯಾವ ನೆಲ ? ಯಾವ ಪಕ್ಷ ?
ನಿನ್ನ ಅನಾಥ ನಿಟ್ಟುಸಿರು ಕೇಳುವ
ಪ್ರಶ್ನೆಗೆ ಯಾರು ಉತ್ತರಿಸಿಯಾರು ?

ತಂದೆ ಕಳಕೊಂಡ ಮಗಳಷ್ಟೇ
ಮತ್ತೆ ಯುದ್ಧವಾಗದಿರಲೆಂದು ಪ್ರಾರ್ಥಿಸಬಲ್ಲಳು...
ಬಾ ಮಗಳೆ, ಯುದ್ಧವಿಲ್ಲದ
ಗಡಿಗಳಿಲ್ಲದ
ನಿನ್ನ ಕನಸಿಗೆ ಬಣ್ಣ ತುಂಬು
ಈ ನೆಲದಲಿ ನೀನು
ಆ ನೆಲದಲಿ ಇನ್ನ್ಯಾರೋ
ನಿನ್ನ ಬಳಗ ಹೆಚ್ಚಿಸು
ಜೊತೆಯಾಗುತ್ತಾಳೆ ನಿನ್ನ ಜೊತೆ ನನ್ನ ಮಗಳೂ.

ನನಗಿಷ್ಟೇ ಗೊತ್ತು ಮಗಳೆ
ಹೆರುವ ಒಡಲಷ್ಟೆ ಅನಾಥಗೊಳುವ ನೋವ
ಅರಿಯಬಲ್ಲದು

**ಬಸವರಾಜ ಸೂಳಿಭಾವಿ**
ಲಡಾಯಿ ಪ್ರಕಾಶನ, ನಂ. ೨೧
ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧




ಮುರಳಿಧರ ಚಿಕ್ಕಮಗಳೂರು

# ಭಾರತದಲ್ಲೊಂದು ಶಿಕಾಗೊ

**ಭಾರತದ ಇಡೀ ಕಾರ್ಮಿಕ ವರ್ಗ ಶಿಕಾಗೊ ಕಾರ್ಮಿಕರ ಹೋರಾಟವನ್ನು ತನ್ನದಾಗಿಸಿಕೊಂಡಿದೆಯೋ ಹಾಗೆಯೆ ಮಾರುತಿ–ಸುಝುಕಿ ಕಾರ್ಮಿಕರ ಹೋರಾಟವನ್ನೂ ಹೇಗೆ ತನ್ನದಾಗಿಸಿ ಕೊಳ್ಳಬೇಕಾಗಿದೆ. ಮನೇಸಾರ್ ಕಾರ್ಖಾನೆಯ ಕಾರ್ಮಿಕರ ಛಲ, ಅವರ ತ್ಯಾಗ–ಬಲಿದಾನ ಕಾರ್ಮಿಕ ವರ್ಗ ವರ್ಗಕ್ಕೆ ಅನುಕರಣೀಯ. ಅಂತರರಾಷ್ಟ್ರೀಯ ಕಾರ್ಮಿಕ ದಿನದಂದು ಶಿಕಾಗೊ ಕಾರ್ಮಿಕರ ಅನನ್ಯ ಹೋರಾಟವನ್ನು ಹೇಗೆ ನೆನಪಿಸಿಕೊಳ್ಳುತ್ತ, ಮನೇಸಾರ್ ಕಾರ್ಮಿಕರಿಗೆ ಕೆಂಪು ವಂದನೆಗಳನ್ನು ಸಲ್ಲಿಸುತ್ತ, ಈ ಹೋರಾಟಗಳು ಮುಂದಿನ ವರ್ಗ ಹೋರಾಟಗಳಿಗೆ ನಾಂದಿಯಾಗಲಿ ಎಂದು ಹೊಸತು ಹಾರೈಸುತ್ತದೆ.**

**ಒಂದು ಹೋರಾಟ – ಅನೇಕ ಪ್ರಶ್ನೆಗಳು**

ಅಮೆರಿಕದ ಶಿಕಾಗೊ ನಗರದ ಕಾರ್ಮಿಕರು ೧೮೮೬ ಮೇ ತಿಂಗಳಲ್ಲಿ ಬಂಡವಳಿಗರ ವಿರುದ್ಧ ನಡೆಸಿದ ಧೀರೋದಾತ್ತ ಹೋರಾಟ, ಮಾಲೀಕರ ಜೊತೆ ಕೈಜೋಡಿಸಿದ ಪೊಲೀಸರು ಮುಷ್ಕರ ನಿರತ ಕಾರ್ಮಿಕರ ಮೇಲೆ ನಡೆಸಿದ ಅಮಾನುಷ ಹಲ್ಲೆ, ನಂತರ ನ್ಯಾಯಾಲಯದ ಅನ್ಯಾಯದ ತೀರ್ಪಿಗೆ ಬಲಿಯಾದ ಕಾರ್ಮಿಕ ನಾಯಕರ ಇತಿಹಾಸವನ್ನು ಕೇಳಿದ್ದೇವೆ, ಓದಿದ್ದೇವೆ. ಆದರೆ ಅಂತಹದೇ ಒಂದು ಘಟನೆ ಭಾರತದಲ್ಲಿ ಜುಲೈ ೨೦೧೨ರಲ್ಲಿ ಘಟಿಸಿದ್ದು, ಏಕೋ ಏನೋ ಅದು ಇನ್ನೂ ಕಾರ್ಮಿಕ ಸಮುದಾಯದ ಮನಸ್ಸನ್ನು ಹೊಕ್ಕು ಬಂಡವಾಳಶಾಹಿ ಕ್ರೌರ್ಯದ ಬಗ್ಗೆ ಕೋಪ ಉಕ್ಕಿಸಿದಂತೆ ಕಂಡುಬಂದಿಲ್ಲ. ಹರಿಯಾಣ ರಾಜ್ಯದ ಮನೇಸಾರ್‌ನ ಮಾರುತಿ ಸುಝುಕಿ ಕಾರ್ಖಾನೆಯ ಕಾರ್ಮಿಕರ ಹೋರಾಟ ಶಿಕಾಗೊ ಕಾರ್ಮಿಕರ ಹೋರಾಟದಷ್ಟೇ ಚಾರಿತ್ರಿಕ ಮತ್ತು ಅಪ್ರತಿಮ. ಭಾರತದ ಕಾರ್ಮಿಕ ವರ್ಗಕ್ಕೆ ಮನೇಸಾರ್ ಕಾರ್ಮಿಕರ ಹೋರಾಟ ಅನೇಕ ಪ್ರಶ್ನೆಗಳನ್ನು ಹಾಕಿದೆ. ಈ ಬಗ್ಗೆ ಒಂದು ವಿಶ್ಲೇಷಣೆ.

**ಗತಿ ಮೀರಿದ ಉತ್ಪಾದನೆ**

೧೯೮೩ರಲ್ಲಿ ಸ್ಥಾಪಿತಗೊಂಡ ಮಾರುತಿ ಉದ್ಯೋಗ್ ಲಿಮಿಟೆಡ್ ಕಾರುಗಳ ಉತ್ಪಾದನೆಗೆ ಹೆಸರುವಾಸಿಯಾಗಿದೆ. ಕಾರು ಮಾರುಕಟ್ಟೆಯಲ್ಲಿ ಅದರ ಪಾಲು ೨೦೧೧ರಲ್ಲಿ ೪೮.೭೪%. ೧೯೯೭ರಲ್ಲಿ ಈ ಉದ್ದಿಮೆ ಸರ್ಕಾರದ ನಿಯಂತ್ರಣಕ್ಕೊಳಪಟ್ಟಿತ್ತು. ೨೦೦೩ರಲ್ಲಿ ಇದನ್ನು ಖಾಸಗೀಕರಣಗೊಳಿಸಲಾಯಿತು. ಇದು ಭಾರತದ ಉದ್ದಿಮೆಯಾದರೂ ಜಪಾನಿನ ಸುಝುಕಿ ಈಗ ಇದರ ಮಾಲೀಕರು. ಮೊದಲನೇ ಕಾರ್ಖಾನೆ ಹರಿಯಾಣದ ಗುರಗಾಂವ್‌ನಲ್ಲಿ ಸ್ಥಾಪಿಸಲ್ಪಟ್ಟಿತು. ೨೦೦೬ರಲ್ಲಿ ಮಾರುತಿ ಸುಝುಕಿಯ ಇನ್ನೊಂದು ಕಾರು ಉತ್ಪಾದನೆಯ ಕಾರ್ಖಾನೆ ಅದೇ ಹರಿಯಾಣದ ಮನೇಸಾರ್‌ನಲ್ಲಿ ಸ್ಥಾಪಿತವಾಯಿತು. ಈ ಕಾರ್ಖಾನೆಗಳಲ್ಲಿ ಉನ್ನತ ಮಟ್ಟದ ತಂತ್ರಜ್ಞಾನವನ್ನು ಅಳವಡಿಸಲಾಗಿದೆ. ಮನೇಸಾರ್ ಕಾರ್ಖಾನೆಯಲ್ಲಿ ಪ್ರತಿ ೫೦ ಸೆಕೆಂಡ್‌ಗೆ ಒಂದು ಕಾರು ಉತ್ಪಾದನೆಯಾಗುತ್ತದೆ. ಈ ಲೆಕ್ಕದಲ್ಲಿ ದಿನಕ್ಕೆ ೪೯೦ ಕಾರುಗಳು, ವರ್ಷಕ್ಕೆ ೧,೭೮,೦೦೦ ಕಾರುಗಳು ಉತ್ಪಾದನೆಯಾಗುತ್ತವೆ. ಈ ಪ್ರಮಾಣದ ಕಾರುಗಳ ಉತ್ಪಾದನೆಯಲ್ಲಿ ಕಾರ್ಮಿಕರ ಪಾತ್ರ ಅತ್ಯಂತ ಹಿರಿದಾದದ್ದು. ಆದರೆ ಮಾರುತಿ–ಸುಝುಕಿ ಆಡಳಿತ ವರ್ಗದ ದೃಷ್ಟಿಯಲ್ಲಿ ಕಾರಿನ ಬೆಲೆ ಮುಖ್ಯವೇ ಹೊರತು ಕಾರನ್ನು ಉತ್ಪಾದಿಸುವ ಶ್ರಮಿಕರ ಬೆಲೆ ಮುಖ್ಯವಲ್ಲ.

**ಒಡೆದು ಆಳುವ ನೀತಿ**

ಮನೇಸಾರ್ ಕೈಗಾರಿಕೆಗಳ ಆಗರ. ಮಾರುತಿ–ಸುಝುಕಿ ಅತಿ ದೊಡ್ಡ ಕೈಗಾರಿಕೆ. ಸುಮಾರು ೪೫೦೦ ಖಾಯಂ ಕಾರ್ಮಿಕರ ಜೊತೆ ಸುಮಾರು ೪೫೦೦

ಹಂಗಾಮಿ ಮತ್ತು ಗುತ್ತಿಗೆ ಕಾರ್ಮಿಕರು. ಎಲ್ಲರೂ ಮಾಡುವ ಕೆಲಸ ಒಂದೇ, ಆದರೆ ಗುತ್ತಿಗೆ ಮತ್ತು ಹಂಗಾಮಿ ಕೆಲಸಗಾರರಿಗೆ ನೀಡುವ ವೇತನ ಮಾತ್ರ ಖಾಯಂ ಕೆಲಸಗಾರರಿಗೆ ನೀಡುವ ವೇತನದ ಶೇ. ೩೩ ಮಾತ್ರ. ಈ ಕಾರ್ಮಿಕರಿಗೆ ರಜೆ, ವಿಮೆ, ಇತ್ಯಾದಿ ಸೌಲಭ್ಯಗಳೂ ಇಲ್ಲ. ಈ ಬಗೆಯ ಖಾಯಂ ಮತ್ತು ಗುತ್ತಿಗೆ ಕಾರ್ಮಿಕ ಉದ್ಯೋಗ ವಿತರಣೆ ಒಟ್ಟು ವೇತನದ ಖರ್ಚನ್ನು ಕಡಿಮೆ ಮಾಡುವ ಒಂದೇ ಉದ್ದೇಶ ಮಾತ್ರವಲ್ಲ; ಖಾಯಂ ನೌಕರರ ಕಾರ್ಮಿಕ ಸಂಘಟನೆಯನ್ನು ಹತೋಟಿಯಲ್ಲಿಡಲು ಮತ್ತು ಹತ್ತಿಕ್ಕಲು ಆಡಳಿತ ವರ್ಗ ರಚಿಸಿಕೊಂಡಿರುವ ವ್ಯೂಹ. ಒಡೆದು ಆಳುವ ನೀತಿಯನ್ನೇ ಮಾನವ ಸಂಪನ್ಮೂಲ ನೀತಿಯನ್ನಾಗಿಸಿಕೊಂಡಿರುವ ಮಾರುತಿ-ಸುಝುಕಿ ಆಡಳಿತ ವರ್ಗ ಬ್ರಿಟಿಷ್ ಸಾಮ್ರಾಜ್ಯಶಾಹಿಗಳನ್ನೂ ಮೀರಿಸಿದ್ದಾರೆ !




**ಹೊಸ ತಿರುವು**

ಗುತ್ತಿಗೆ ಕಾರ್ಮಿಕರನ್ನು ಕಾಡುತ್ತಿರುವ ಸಮಸ್ಯೆಯೆಂದರೆ, ಅನಿಶ್ಚಿತ ಉದ್ಯೋಗ, ಕನಿಷ್ಠ ಕೂಲಿ, ಅನಿರ್ದಿಷ್ಟ ಕೆಲಸದ ಅವಧಿ, ಸಾಮಾಜಿಕ ಅಭದ್ರತೆ, ಎರಡನೇ ದರ್ಜೆಯ ಕಾರ್ಮಿಕ ಸ್ಥಾನ ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಸಂಘಟನೆಯ ಕೊರತೆ. ಗುರ್‌ಗಾಂವ್‌ನ ಕಾರ್ಖಾನೆಯಲ್ಲಿದ್ದ ಮಾರುತಿ ಉದ್ಯೋಗ್ ಕಾಮ್‌ಗಾರ್ ಸಂಘವೇ ಮನೇಸಾರ್ ಕಾರ್ಖಾನೆಯ ಕಾರ್ಮಿಕರನ್ನು ಪ್ರತಿನಿಧಿಸುತ್ತಿತ್ತು. ಆದರೆ ಮನೇಸಾರ್ ಕಾರ್ಮಿಕರಿಗೆ ತಮ್ಮದೇ ಆದ ಸಂಘವನ್ನು ಹೊಂದಬೇಕೆಂಬ ಇಚ್ಛೆ ದಿನೇ ದಿನೇ ಬೆಳೆಯುತ್ತಿತ್ತು. ಅವರ ಹೋರಾಟಕ್ಕೆ ಹೊಸ ತಿರುವು ಬಂದದ್ದು ತಮ್ಮ ಆಸೆ-ಆಕಾಂಕ್ಷೆಗಳಿಗೆ ದನಿ ಕೊಡುವ ನೈಜ ಹಾಗೂ ಸ್ವತಂತ್ರ ಕಾರ್ಮಿಕ ಸಂಘದ ಸೃಷ್ಟಿ ಅವರ ಮನಹೊಕ್ಕಿದ್ದು, ಇದನ್ನು ಹತ್ತಿಕ್ಕಲು ಹೊರಟಿತ್ತು ಆಡಳಿತ ವರ್ಗ. ೨೦೧೧-೧೨ರಲ್ಲಿ ಈ ಕಾರಣದಿಂದಲೇ ಮೂರು ಮುಷ್ಕರಗಳು ಮತ್ತು ಒಂದು ಲಾಕ್‌ಔಟ್ ನಡೆದುಹೋದವು. ನಮ್ಮ ದೇಶಕ್ಕೆ ಒಂದು ಸಂವಿಧಾನವಿದೆ. ಸಂಘಟನೆಯ ಹಕ್ಕು ಮೂಲಭೂತ ಹಕ್ಕೆಂದು ಬರೆಯಲಾಗಿದೆ. ಆದರೆ ಸಮಸ್ಯೆಯೆಂದರೆ ಈ ಹಕ್ಕನ್ನು ಪಡೆಯಲು ಹೊರಟರೆ ಅದಕ್ಕೆ ಅಡೆತಡೆಗಳು ನೂರಾರು. ಮಾರುತಿ-ಸುಝುಕಿ ಆಡಳಿತ ವರ್ಗ ಹೊಸ ಸಂಘ ನೊಂದಾಯಿತವಾಗದಂತೆ ಅನೇಕ ಪ್ರಯತ್ನಗಳನ್ನು ಮಾಡಿತು. ಕೊನೆಗೂ ಮಾರ್ಚ್ ೨೦೧೨ರಲ್ಲಿ ಮಾರುತಿ-ಸುಝುಕಿ ಕಾರ್ಮಿಕ ಸಂಘ ನೊಂದಾಯಿತಗೊಂಡದ್ದು ಕಾರ್ಮಿಕರ ಅಪ್ರತಿಮ ಛಲದಿಂದ. ಒಂದು ಯುವ ಕಾರ್ಮಿಕರ ಸೈನ್ಯ ಹುಟ್ಟಿಕೊಂಡಿತ್ತು.

**ವರ್ಗ ಸಂಘರ್ಷ**

ತಮ್ಮದೇ ಆದ ಹೊಸ ಸಂಘಟನೆ ರಚಿಸಿಕೊಂಡದ್ದು ಮನೇಸಾರ್ ಕಾರ್ಖಾನೆಯ ಕಾರ್ಮಿಕರಿಗೆ ಹೊಸ ಹುರುಪು ಮತ್ತು ಸ್ಫೂರ್ತಿ ನೀಡಿತ್ತು. ಇನ್ನೊಂದು ಮಹತ್ವದ ಬೆಳವಣಿಗೆಯೆಂದರೆ ಖಾಯಂ ಕಾರ್ಮಿಕರು ಮತ್ತು ಗುತ್ತಿಗೆ ಕಾರ್ಮಿಕರು ಒಕ್ಕೂಟ ರಚಿಸಿಕೊಂಡದ್ದು, ಆಡಳಿತ ವರ್ಗಕ್ಕೆ ಇದೊಂದು ಅತ್ಯಂತ ಅಸಹನೀಯ ಬೆಳವಣಿಗೆ. ನವನಿರ್ಮಿತ ಮಾರುತಿ-ಸುಝುಕಿ ಕಾರ್ಮಿಕ ಸಂಘದ ಪ್ರಮುಖ ಬೇಡಿಕೆಯೆಂದರೆ ಗುತ್ತಿಗೆ ಕಾರ್ಮಿಕರನ್ನು ಖಾಯಂಗೊಳಿಸಬೇಕೆಂಬುದು ಮತ್ತು ಮೊಳಗಿದ ಘೋಷಣೆಯೆಂದರೆ ಸಮಾನ ಕೆಲಸಕ್ಕೆ ಸಮಾನ ವೇತನ. ಆಡಳಿತ ವರ್ಗ ಹೊಸ ಸಂಘವನ್ನು ಮಾನ್ಯಮಾಡಲು ನಿರಾಕರಿಸಿತು. ೧೮ ಜುಲೈ, ೨೦೧೨ರಂದು ಮುಷ್ಕರಕ್ಕಿಳಿದ ಕಾರ್ಮಿಕರಿಗೂ ಆಡಳಿತ ವರ್ಗದ ನಡುವಿನ ಮಾತಿನ ಚಕಮಕಿ ಹಿಂಸಾಚಾರಕ್ಕೆ ತಿರುಗಿತ್ತು. ೧೨೦೦ ಪೊಲೀಸ್ ಪಡೆ ಕಾರ್ಖಾನೆಯನ್ನು ಸುತ್ತಿ ನಿಂತಿತ್ತು. ಬೆಂಕಿ ಆಕಸ್ಮಿಕದಿಂದ ಮಾನವ ಸಂಪನ್ಮೂಲ ಅಧಿಕಾರಿ ಸತ್ತದ್ದು, ಅನೇಕರು ಗಾಯಗೊಂಡದ್ದು ಪರಿಸ್ಥಿತಿಯನ್ನು ವಿಷಮಕ್ಕೇರಿಸಿತು. ಕಾರ್ಮಿಕರ ವಿರುದ್ಧ ಆಡಳಿತ ವರ್ಗ ಸರ್ಕಾರ ಮತ್ತು ಪೊಲೀಸ್ ಒಂದಾದದ್ದು ಸರ್ಕಾರದ ವರ್ಗ ಗುಣವನ್ನು ಬಹಿರಂಗಗೊಳಿಸಿತ್ತು. ಕಾರ್ಖಾನೆಯನ್ನು ಯುದ್ಧ ಭೂಮಿಯನ್ನಾಗಿಸಿತ್ತು.

**ವಿದೇಶಿ ಬಂಡವಾಳದ ವ್ಯಾಮೋಹ**

ಪೊಲೀಸರು ೧೪೭ ಮಾರುತಿ-ಸುಝುಕಿ ಕಾರ್ಮಿಕರನ್ನು ಬಂಧಿಸಿ ಕೊಲೆ ಆಪಾದನೆಯನ್ನು ಹೊರಿಸಿತು. ೫೪೬ ಖಾಯಂ ಕಾರ್ಮಿಕರು ಮತ್ತು ೧೮೦೦ ಹಂಗಾಮಿ ಕಾರ್ಮಿಕರನ್ನು ಏಕಕಾಲಕ್ಕೆ ಕೆಲಸದಿಂದ ವಜಾ ಮಾಡಲಾಯಿತು. ಜಪಾನ್‌ನಿಂದ ಬಂದ ಮಾರುತಿ-ಸುಝುಕಿಯ ವ್ಯವಸ್ಥಾಪಕ ನಿರ್ದೇಶಕ ಕಾರ್ಮಿಕರ ಹೊಸ ಸಂಘವನ್ನು ಮಾನ್ಯ ಮಾಡುವುದಿಲ್ಲ ಎಂದೂ, ಈ ಘಟನೆಯಲ್ಲಿ ಭಾಗಿಯಾದ ಎಲ್ಲ ಕಾರ್ಮಿಕರನ್ನೂ ಕೆಲಸದಿಂದ ವಜಾ ಮಾಡಲಾಗುವುದು ಎಂಬ ಹೇಳಿಕೆ ನೀಡಿದ್ದ. ಕಾರ್ಮಿಕರ ಬೇಲ್ ಅರ್ಜಿಯ ವಿಚಾರಣೆಯ ಸಮಯದಲ್ಲಿ ಪಂಜಾಬ್ ಮತ್ತು ಹರಿಯಾಣ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳು ಈ ಘಟನೆ ದುರದೃಷ್ಟಕರವಾದದ್ದು, ಇದು ಭಾರತದ ಗೌರವಕ್ಕೆ ಕುಂದು ತಂದಿದೆ, ವಿದೇಶಿ ಬಂಡವಾಳಿಗರು ಕಾರ್ಮಿಕ ಅಶಾಂತಿಯಿಂದಾಗಿ ಭಾರತದಲ್ಲಿ ಬಂಡವಾಳ ಹೂಡಲಾರರು ಎಂದು ವ್ಯಾಖ್ಯಾನಿಸಿದರೆಂದು ವರದಿಯಾಗಿದೆ.

**ಬಹಿರಂಗಗೊಂಡ ಸಂಚು**

ಮನೇಸಾರ್‌ನ ಮಾರುತಿ-ಸುಝುಕಿ ಕಾರ್ಮಿಕರು ತಮ್ಮ ಹಕ್ಕನ್ನು ಚಲಾಯಿಸಿದರೆಂಬುದೇ ಆಡಳಿತ ವರ್ಗದ ಆಕ್ರೋಶಕ್ಕೆ ಕಾರಣವಾದದ್ದು. ನಂತರ ಅನಿರ್ದಿಷ್ಟ ಕಾಲಕ್ಕೆ ಲಾಕ್‌ಔಟ್ ಘೋಷಿಸಿದ್ದು, ನಾಲ್ಕು ವರ್ಷಗಳ ಜೈಲುವಾಸ ಅನುಭವಿಸಿ, ನ್ಯಾಯಾಲಯ ಮೆಟ್ಟಿಲು ಹತ್ತಿ, ಆಡಳಿತ ವರ್ಗ-ಸರ್ಕಾರ-ಪೊಲೀಸ್ ಎಲ್ಲರನ್ನೂ ಎದುರಿಸಿ ನಿಂತ ಈ ಕಾರ್ಮಿಕರ ಕೆಚ್ಚನ್ನು ಮೆಚ್ಚಬೇಕಾದ್ದೇ. ಈಗ ನ್ಯಾಯಾಲಯ ತೀರ್ಪು ಹೊರಬಿದ್ದಿದೆ. ೧೧೭ ಕಾರ್ಮಿಕರನ್ನು ದೋಷಮುಕ್ತರನ್ನಾಗಿಸಿದೆ. ೧೮ ಕಾರ್ಮಿಕರಿಗೆ ೫ ವರ್ಷದ ಸೆರೆಮನೆ ವಾಸ. ಈಗಾಗಲೇ ಈ ೧೮ ಕಾರ್ಮಿಕರು ೪ ವರ್ಷ ಸೆರೆಮನೆ ವಾಸ ಅನುಭವಿಸಿಯಾಗಿದೆ. ೧೩ ಕಾರ್ಮಿಕರನ್ನು ಆಜೀವ ಕಾರಾಗೃಹ ವಾಸದ ಶಿಕ್ಷೆಗೆ ಗುರಿಪಡಿಸಲಾಗಿದೆ. ೧೧೭ ಅಮಾಯಕ ಕಾರ್ಮಿಕರ ಮೇಲೆ ಸುಳ್ಳು ಆಪಾದನೆ ಹೊರಿಸಿದ್ದು ಸಾಬೀತಾಗಿದೆ. ಕಾನೂನು ಸಮರ ಮುಂದುವರಿಯಲಿದೆ.

**ಶಿಕಾಗೊ-ಮನೇಸಾರ್-ಸ್ಫೂರ್ತಿಯ ಸೆಲೆ**

ಈ ಘಟನೆ ನಡೆದ ನಂತರ ಆಡಳಿತ ವರ್ಗ ಗುತ್ತಿಗೆ ಕಾರ್ಮಿಕ ಪದ್ಧತಿಯ ಮೂಲಕ ನೇಮಕಾತಿಯ ಬದಲು ಏಳು ತಿಂಗಳ ಕಾಂಟ್ರಾಕ್ಟ್ ಆಧಾರದ ಮೇಲೆ ಕಂಪನಿ ನೇರವಾಗಿ ನೇಮಕ ಮಾಡಿಕೊಳ್ಳುತ್ತಿದೆ. ಮನೇಸಾರ್ ಕಾರ್ಖಾನೆಯ ಕಾರ್ಮಿಕರ ಹೋರಾಟ ಬಂಡವಾಳಶಾಹಿ ಕ್ರೌರ್ಯದ ಮುಖವನ್ನು ಪರಿಚಯಿಸಿದೆ. ಐಕ್ಯ ಹೋರಾಟದ ಅಗತ್ಯವನ್ನು ಮನವರಿಕೆ ಮಾಡಿಕೊಟ್ಟಿದೆ. ಭಾರತದ ಇಡೀ ಕಾರ್ಮಿಕ ವರ್ಗ ಶಿಕಾಗೊ ಕಾರ್ಮಿಕರ ಹೋರಾಟವನ್ನು ಹೇಗೆ ತನ್ನದಾಗಿಸಿಕೊಂಡಿದೆಯೋ ಹಾಗೆಯೆ ಮಾರುತಿ-ಸುಝುಕಿ ಕಾರ್ಮಿಕರ ಹೋರಾಟವನ್ನೂ ತನ್ನದಾಗಿಸಿಕೊಳ್ಳಬೇಕಾಗಿದೆ. ಮನೇಸಾರ್ ಕಾರ್ಖಾನೆಯ ಕಾರ್ಮಿಕರ ಛಲ, ಅವರ ತ್ಯಾಗ-ಬಲಿದಾನ ಕಾರ್ಮಿಕ ವರ್ಗ ವರ್ಗಕ್ಕೆ ಅನುಕರಣೀಯ. ಅಂತರರಾಷ್ಟ್ರೀಯ ಕಾರ್ಮಿಕ ದಿನದಂದು ಶಿಕಾಗೊ ಕಾರ್ಮಿಕರ ಅನನ್ಯ ಹೋರಾಟವನ್ನು ಹೇಗೆ ನೆನಪಿಸಿಕೊಳ್ಳುತ್ತ, ಮನೇಸಾರ್ ಕಾರ್ಮಿಕರಿಗೆ ಕೆಂಪು ವಂದನೆಗಳನ್ನು ಸಲ್ಲಿಸುತ್ತ, ಈ ಹೋರಾಟಗಳು ಮುಂದಿನ ವರ್ಗ ಹೋರಾಟಗಳಿಗೆ ನಾಂದಿಯಾಗಲಿ ಎಂದು ಹೊಸತು ಹಾರೈಸುತ್ತದೆ.

**ಮುರಳೀಧರ ಚಿಕ್ಕಮಗಳೂರು**
ವಕೀಲರು, ನಂ. ೩, ಎರಡನೇ ಮಹಡಿ, ವಿ. ವಿ. ಪುರಂ,
ಬೆಂಗಳೂರು – ೫೬೦ ೦೦೪

ಪ್ರತಿನಿತ್ಯ ಬೆಳಗ್ಗೆ ಮತ್ತು ಸಾಯಂಕಾಲ ರಾಷ್ಟ್ರೀಯ ಒಟ್ಟು ಉತ್ಪನ್ನದ ಬಗ್ಗೆ ಹೇಳಿಕೆ ನೀಡುವ ವಿತ್ತಮಂತ್ರಿ ಅರುಣ್ ಜೇಟ್ಲಿ ನೋಟುರದ್ದತಿಯ ನಂತರ ಬ್ಯಾಂಕುಗಳಿಗೆ ಹಿಂದಿರುಗಿ ಬಂದ ಹಳೆಯ ನೋಟುಗಳ ಹಣದ ಮೊತ್ತವೆಷ್ಟು ಎಂಬುದನ್ನು ದೇಶದ ಮುಂದಿಡಲು ಏಕೆ ಹಿಂಜರಿಯುತ್ತಿದ್ದಾರೆ ? ನೋಟುರದ್ದತಿ ಈ ದೇಶದ ಇತಿಹಾಸದಲ್ಲಿ ಆಗಿಹೋದ ಅತ್ಯಂತ ದೊಡ್ಡ ಹಗರಣವೆಂಬುದಂತೂ ಸತ್ಯ. ಭ್ರಮೆ ಆರಿದ ಮೇಲೆ ಜನತೆ ಇದನ್ನು ಒಪ್ಪಬಹುದು. ನೋಟುರದ್ದತಿಯಿಂದ ಏನು ಸಾಧನೆಯಾಯಿತು ಎಂಬುದು ಚರ್ಚಾಸ್ಪದ ವಸ್ತುವಾಗಬಹುದಾದರೂ, ಅದು ಕಪ್ಪುಹಣವನ್ನು ನಿಗ್ರಹಮಾಡಲಿಲ್ಲವೆಂಬುದು ಚರ್ಚಾತೀತ.



# ಅಮಾನ್ಯಗೊಂಡ ನೋಟುಗಳು ಅಮಾನ್ಯಗೊಂಡ ಶ್ರೀಸಾಮಾನ್ಯರು

**ಮುರಳೀಧರ ಚಿಕ್ಕಮಗಳೂರು**

ಪ್ರಜೆಗಳಿಂದ ಚುನಾಯಿತಗೊಂಡ ಸರ್ಕಾರ ಜಾರಿಗೊಳಿಸುವ ಆರ್ಥಿಕ ನೀತಿಯನ್ನು ಸಮಾಜದ ಯಾವ ವರ್ಗ ಸ್ವಾಗತಿಸಿ ಸಮರ್ಥಿಸುತ್ತದೆ ಮತ್ತು ಯಾವ ವರ್ಗ ಅದನ್ನು ವಿರೋಧಿಸಿ ಪ್ರತಿಭಟಿಸುತ್ತದೆ ಎಂಬುದು ಆ ಆರ್ಥಿಕ ನೀತಿಯ ವರ್ಗ ಗುಣವನ್ನು ಸೂಚಿಸುತ್ತದೆ. ನವ ಉದಾರ ಆರ್ಥಿಕ ನೀತಿಗಳಾದ ಜಾಗತೀಕರಣ ಮತ್ತು ಖಾಸಗೀಕರಣವನ್ನು ಸ್ವಾಗತಿಸಿ ಸಮರ್ಥಿಸಿದ ವರ್ಗ ಯಾವುದು ಮತ್ತು ಅದನ್ನು ವಿರೋಧಿಸಿ ಪ್ರತಿಭಟಿಸಿದ ವರ್ಗ ಯಾವುದು ಎಂಬುದು ಕಳೆದ ಇಪ್ಪತ್ತೈದು ವರ್ಷಗಳ ಆಗುಹೋಗುಗಳು ಸ್ಪಷ್ಟಪಡಿಸಿವೆ. ಹಾಗೆಯೇ ೨೦೧೬ರ ನವೆಂಬರ್ ೮ರಂದು ನೋಟು ಅಮಾನ್ಯಗೊಳಿಸಿದ ಮೋದಿಯ ಕ್ರಮವನ್ನು ಸ್ವಾಗತಿಸಿ ಸಮರ್ಥಿಸಿದ್ದು ಜಾಗತೀಕರಣವನ್ನು ಸಮರ್ಥಿಸಿದ ಶ್ರೀಮಂತರು, ಉದ್ಯೋಗಪತಿಗಳು ಮತ್ತು ಅವರ ಜೊತೆಗೆ ಮೋದಿ ಭಕ್ತರು. ನಂತರ ಈ ಹೊಗಳುಭಟ್ಟರ ಸಾಲಿಗೆ ಸೇರಿ ಮೋದಿಯ ನೋಟುರದ್ದತಿ ಅದ್ವಿತೀಯವೆಂದು, ಕಪ್ಪುಹಣದ ಮೇಲೆ ಹೂಡಿದ ಸಮರದ ಆರಂಭವೆಂದು ಪ್ರಚಾರ ಮಾಡಿದ ಕಾರ್ಪೊರೇಟ್ ಮಾಧ್ಯಮಗಳು. ಆದರೆ ಕಪ್ಪುಹಣದ ಒಡೆಯರ ಜೊತೆಗೆ ದಿನನಿತ್ಯದ ಬಿಳಿ ಹಣಕ್ಕೂ ಪರದಾಡುವ ಶ್ರೀಸಾಮಾನ್ಯರನೇಕರು ಭ್ರಮಾಧೀನ ರಾದದ್ದು ಒಂದು ವಿಪರ್ಯಾಸ. ಮೋದಿ ಅಮಾನ್ಯ ಗೊಳಿಸಿದ್ದು ನೋಟುಗಳನ್ನಾದರೂ, ಆರ್ಥಿಕ, ಸಾಮಾಜಿಕ ಹಾಗೂ ನೈತಿಕ ದೃಷ್ಟಿಯಿಂದ ವಿಶ್ಲೇಷಿಸಿದಲ್ಲಿ ಆತ ನಿಜಕ್ಕೂ ಅಮಾನ್ಯಗೊಳಿಸಿದ್ದು ಕೂಲಿಕಾರರು–ರೈತರು–ಮಹಿಳೆಯರು–ಹಿರಿಯ ನಾಗರಿಕರು ಮತ್ತು ಸಣ್ಣಪುಟ್ಟ ವ್ಯಾಪಾರಿಗಳನ್ನು ಎಂಬುದು ಬಹುಪಾಲು ಮಂದಿಗೆ ಅರಿವಾಗಲೇ ಇಲ್ಲ. ಕಪ್ಪು ಹಣದ ಒಡೆಯರು ಸುಖವಾಗಿ ನಿದ್ರೆ ಮಾಡಿದರೆ, ನಾಳೆ ಯಾವ ಬ್ಯಾಂಕ್ ಮುಂದೆ, ಎಷ್ಟು ಹಣ ಪಡೆಯಲು ಎಷ್ಟು ಹೊತ್ತು ಸಾಲು ನಿಲ್ಲಬೇಕೆಂಬ ಚಿಂತೆ ಹೊತ್ತು ನಿದ್ರಾಹೀನ ರಾದವರು ಶ್ರೀಸಾಮಾನ್ಯರೇ. ಮೋದಿ ಹೇಳಿದ್ದು ಇದಕ್ಕೆ ವ್ಯತಿರಿಕ್ತವಾಗಿದ್ದರೂ, ಅದೇ ಸತ್ಯವೆಂದು ನಂಬಿ ಮುಂದೆಂದೋ ಒಳ್ಳೆಯ ನಿದ್ರೆ ಬರಬಹುದೆಂದು ಭ್ರಮಾಧೀನರಾದವರ ಸಂಖ್ಯೆಯೂ ಸಾಕಷ್ಟಿತ್ತು. ಈ ಕಾರಣದಿಂದಲೇ ಜನರು ಸಾಲುಗಟ್ಟಿ ಬ್ಯಾಂಕುಗಳ ಮುಂದೆ ಗಂಟೆಗಟ್ಟಲೆ ನಿಂತು ನಿಟ್ಟುಸಿರು ಬಿಟ್ಟರೇ ಹೊರತು ಸಿಟ್ಟುಗೊಳ್ಳಲೇ ಇಲ್ಲ. ಇವರ ನಿಟ್ಟುಸಿರನ್ನು ಸಿಟ್ಟಾಗಿ ಪರಿವರ್ತಿಸುವ ಯಾವುದೇ ರಾಜಕೀಯ ಶಕ್ತಿಯೂ ರೂಪುಗೊಳ್ಳಲೇ ಇಲ್ಲ. ಜನರ ಆಕ್ರೋಶಕ್ಕೆ ತತ್ತರಿಸಬೇಕಿದ್ದ ಮೋದಿ ಪಾರಾದದ್ದು ಹೀಗೆ.

**ಸರ್ಕಾರದ ಹುಚ್ಚಾಟ – ಜನತೆಯ ಬಲಿ**

ಮೋದಿಯವರ ನೋಟುರದ್ದತಿಯ ಕ್ರಮ ನೂರಕ್ಕೂ ಹೆಚ್ಚು (ಬ್ಯಾಂಕ್ ನೌಕರರೂ ಸೇರಿದಂತೆ) ಅಮಾಯಕರನ್ನು ಬಲಿ ತೆಗೆದುಕೊಂಡರೂ ಗುಜರಾತ್‌ನ ಹತ್ಯಾಕಾಂಡವನ್ನೇ ಅರಗಿಸಿಕೊಂಡ ಅವರು ಈ ಬಗ್ಗೆ ನಿರ್ಲಿಪ್ತ ನಿರ್ವಿಕಾರದಿಂದ ಮೌನಿಗಳಾದದ್ದು ಸಹಜವೇ. ಆದರೆ ಒಂದು ಆರ್ಥಿಕ ನೀತಿಯ ಪರಿಣಾಮದಿಂದ ಅಸುನೀಗಿದ್ದ ಶ್ರೀಸಾಮಾನ್ಯರ ಬಗ್ಗೆ ಬದುಕುಳಿದ ಶ್ರೀಸಾಮಾನ್ಯರ ನಿರ್ಲಿಪ್ತತೆ ಮತ್ತು ನಿರ್ವಿಕಾರವನ್ನು ಅರ್ಥೈಸುವುದು ಹೇಗೆ ? ಪ್ರಪಂಚದ ಮೂಲೆಯಲ್ಲೆಲ್ಲೂ ಸಂಭವಿಸುವ ಭಯೋತ್ಪಾದಕ ಕೃತ್ಯಗಳಲ್ಲಿ ರೈಲು ದುರಂತಗಳಲ್ಲಿ, ನಾಡಿನ ಗಡಿಗಳಲ್ಲಿ ಮಡಿದವರ ಬಗ್ಗೆ ಸಂತಾಪ ಸೂಚಿಸುವ ನಾವು ಅಪಾರ ಸಾವು–ನೋವುಗಳನ್ನು ತಂದಂತಹ ಮೋದಿಯ ನೋಟು ಅಮಾನ್ಯ ಕ್ರಮವನ್ನೂ ಒಂದು ರೀತಿಯ ಭಯೋತ್ಪಾದಕ ಕೃತ್ಯವೆಂದೇಕೆ ಪರಿಗಣಿಸು ವುದಿಲ್ಲ ? ನೋಟುರದ್ದತಿ ಒಂದು ಆರ್ಥಿಕ ಭಯೋತ್ಪಾದಕ ಕೃತ್ಯವೆಂದು ಕರೆದಲ್ಲಿ ತಪ್ಪಾಗಲಾರದು, ಮತ್ತೊಂದು ಪ್ರಶ್ನೆ : ಆಳುವ ವರ್ಗ ಜಾರಿಗೊಳಿಸುವ ಎಲ್ಲ ಆರ್ಥಿಕ ನೀತಿಗಳಿಗೆ ಮತ್ತು ಪ್ರಯೋಗಗಳಿಗೆ ಬಡವರೇ ಏಕೆ ಬಲಿಪಶುಗಳಾಗುತ್ತಾರೆ ? ಬಡವರು ಯೋಚಿಸಬೇಕಾದ ವಿಚಾರ. ನೋಟುರದ್ದತಿಯ ತರುವಾಯ ಜನತೆ ಅನುಭವಿಸಿದ ಸಂಕಷ್ಟಕ್ಕೆ ಮೋದಿ






ಎಷ್ಟು ಹೊಣೆಯೊ ಅದನ್ನು ತುಟಿ ಕಚ್ಚಿಕೊಂಡು ಸಹಿಸಿದ ಪ್ರಜೆಗಳು ಅಷ್ಟೇ ಹೊಣೆಗಾರರು.

೨೦೧೬, ನವೆಂಬರ್ ೮ರಂದು ಏಕಾಏಕಿ ಮೋದಿ ಜಾರಿಗೊಳಿಸಿದ ನೋಟುರದ್ದತಿ ಅರ್ಥಶಾಸ್ತ್ರಜ್ಞರ ಪ್ರಕಾರ ಕಪ್ಪುಹಣ ನಿಗ್ರಹದ ಉದ್ದೇಶ ಸಾಧನೆಗಲ್ಲ. ಚಲಾವಣೆಯಲ್ಲಿರುವ ಹಣದಲ್ಲಿ ಕಪ್ಪುಹಣದ ಪ್ರಮಾಣ ಅತ್ಯಲ್ಪ. ಮೋದಿಗೂ ಈ ಸತ್ಯದ ಅರಿವಿದೆ. ಹಾಗಾಗಿ ಇದೊಂದು ರಾಜಕೀಯ ಕುತಂತ್ರವಾಗಿತ್ತೇ ಹೊರತು ಕಪ್ಪು ಹಣದ ಮೇಲಿನ ದಾಳಿಯೇನೋ ಆಗಿರಲಿಲ್ಲ. ಮೋದಿಯ ಈ ಕ್ಷುಲ್ಲಕ ರಾಜಕೀಯಕ್ಕೆ ಬಲಿಯಾದದ್ದು ಕೂಲಿಕಾರರು, ಬಡರೈತರು, ಸಣ್ಣ ವ್ಯಾಪಾರಿಗಳು, ಮಹಿಳೆಯರು ಮತ್ತು ಹಿರಿಯ ನಾಗರಿಕರು. ನಕ್ಕಿದ್ದು ಕಪ್ಪುಹಣ, ನಲುಗಿದ್ದು ಬಿಳಿಹಣ, ಬಿದ್ದದ್ದು ಶ್ರೀಸಾಮಾನ್ಯರ ಹೆಣ !

**ನೋಟುರದ್ದತಿ – ಕಾನೂನಿನ ಪ್ರಶ್ನೆಗಳು**

೨೦೧೬, ನವೆಂಬರ್ ೮ರಂದು ಮೋದಿ ಘೋಷಿಸಿದ ನೋಟುರದ್ದತಿ ಭಾರತದಲ್ಲಿ ಪ್ರಪ್ರಥಮವೇನಲ್ಲ. ಈ ಹಿಂದೆ ೧೯೪೬ ಮತ್ತು ೧೯೭೮ರಲ್ಲಿ ಅಲ್ಪಪ್ರಮಾಣದಲ್ಲಿ ಶಾಸನಗಳ ಮೂಲಕ ನೋಟುಗಳನ್ನು ರದ್ದುಗೊಳಿಸಲಾಗಿತ್ತು. ೧೯೭೮ರಲ್ಲಿ ಶಾಸನದ ಮೂಲಕ ರದ್ದುಗೊಳಿಸಿದ್ದು ಕೇವಲ ಶೇ. ೧ರಷ್ಟು ನೋಟುಗಳನ್ನು ಮಾತ್ರ. ಆದರೆ ಕೇವಲ ಒಂದು ಕಾರ್ಯಾಂಗದ ಅಧಿಸೂಚನೆಯ ಮೂಲಕ ಮೋದಿ ರದ್ದುಗೊಳಿಸಿದ್ದು ಚಲಾವಣೆಯಲ್ಲಿದ್ದ ಶೇ. ೮೬ರಷ್ಟು ನೋಟುಗಳನ್ನು ! ಅಂದರೆ ಈ ಗಾತ್ರದ ನೋಟುರದ್ದತಿಯ ಕ್ರಮ ಕುರಿತು ಪಾರ್ಲಿಮೆಂಟ್‌ನಲ್ಲಿ ಯಾವ ಚರ್ಚೆಗೂ ಅವಕಾಶವೇ ಇರಲಿಲ್ಲ. ಹಾಗಾಗಿ ನೋಟು ಅಮಾನ್ಯಗೊಳಿಸಿದ ಸರ್ಕಾರದ ಕ್ರಮ ಈಗ ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಶ್ನಿತ ವಾಗಿದೆ. ರಿಸರ್ವ್ ಬ್ಯಾಂಕ್ ಆಫ್ ಇಂಡಿಯ ಕಾಯ್ದೆ, ೧೯೩೪ರ ಪ್ರಕಾರ ರಿಸರ್ವ್ ಬ್ಯಾಂಕ್‌ನ ಕೇಂದ್ರ ಆಡಳಿತ ಮಂಡಳಿಯ ನಿರ್ದೇಶಕರು ನೋಟುರದ್ದತಿಯ ಸಲಹೆಯನ್ನು ಕೂಲಂಕಷವಾಗಿ ಚರ್ಚಿಸಿ ಅದರ ಪರಿಣಾಮಗಳನ್ನು ಗಮನದಲ್ಲಿಟ್ಟು ಕೇಂದ್ರ ಸರ್ಕಾರಕ್ಕೆ ತಮ್ಮ ಶಿಫಾರಸ್ಸನ್ನು ನೀಡಬೇಕೆಂಬುದು ನಿಯಮ. ಈ ಶಾಸನಬದ್ಧ ಜವಾಬ್ದಾರಿಯನ್ನು ರಿಸರ್ವ್ ಬ್ಯಾಂಕ್ ಆಡಳಿತ ಮಂಡಳಿ ಪಾಲಿಸಿಲ್ಲವೆಂಬ ಆರೋಪವಿದೆ. ರಿಸರ್ವ್ ಬ್ಯಾಂಕ್ ಆಫ್ ಇಂಡಿಯ ಕಾಯ್ದೆ ಕಲಂ ೩೯ರ ಪ್ರಕಾರ ನೋಟುಗಳನ್ನು ವಿನಿಮಯಗೊಳಿಸಬೇಕಾದದ್ದು ಅದರ ಶಾಸನಬದ್ಧ ಕರ್ತವ್ಯ. ಆದ್ದರಿಂದ ನೋಟುರದ್ದತಿಯ ತರುವಾಯ ಅಧಿಸೂಚನೆಗಳ ಆಧಾರದ ಮೇಲೆ ನೋಟು ವಿನಿಮಯದ ಮೇಲೆ ಕಾಲಕಾಲಕ್ಕೆ ಹೊರಿಸಿದ್ದ ನಿರ್ಬಂಧ ಕಾನೂನು ಉಲ್ಲಂಘನೆಯ ಕ್ರಮವೆಂಬ ಆರೋಪವೂ ಈಗ ಸರ್ವೋಚ್ಚ ನ್ಯಾಯಾಲಯದ ಮುಂದಿದೆ.

**ನೋಟುರದ್ದತಿ – ಮುಗಿದ ಅಧ್ಯಾಯವಲ್ಲ**

ಸಂವಿಧಾನದ ಅನುಚ್ಛೇದ ೩೦೦ ಎ ಪ್ರಕಾರ ದೇಶದ ಯಾವುದೇ ಪ್ರಜೆಯ ಆಸ್ತಿಯನ್ನು ಕಾನೂನಾತ್ಮಕವಾಗಿಯೇ ವಶಪಡಿಸಿಕೊಳ್ಳಬೇಕು. ಪ್ರಜೆಗಳ ಹಣ ಅವರ ಚರಾಸ್ತಿ, ಹಾಗಾಗಿ ಅದನ್ನು ವಶಪಡಿಸಿಕೊಳ್ಳಬೇಕೆಂದರೆ ಅದಕ್ಕೆ ಅನುಗುಣವಾದ ಕಾನೂನು ಜಾರಿಗೊಂಡು ಅದರಾಧರಿತ ಕ್ರಮ ಸರ್ಕಾರ ಜರುಗಿಸಬೇಕು. ಮೋದಿ ಇಂತಹ ಯಾವ ಕಾನೂನನ್ನೂ ಜಾರಿಗೊಳಿಸಲಿಲ್ಲ. ಈ ಬಗ್ಗೆ ಸರ್ವೋಚ್ಚ ನ್ಯಾಯಾಲಯ ಜಯಂತಿಲಾಲ್ ರತನ್ ಚಂದ್ ಶಾ (ಎ.ಐ.ಆರ್. ೧೯೯೭ ಎಸ್.ಸಿ. ೩೭೦) ಪ್ರಕರಣದಲ್ಲಿ, "ನೋಟುರದ್ದತಿ ಸಾರ್ವಜನಿಕ ಸಾಲವನ್ನು, ಅಂದರೆ ಆಸ್ತಿಯನ್ನು ವಿಹಿತಗೊಳಿಸುತ್ತಿದೆ. ಅದನ್ನು ಕೇವಲ ಕಾಯ್ದೆಯ ಮೂಲಕ ಮಾಡಲು ಸಾಧ್ಯ" ಎಂದು ತೀರ್ಪಿತ್ತಿದೆ. ಅಂದರೆ ಕಾರ್ಯಾಂಗದ ಯಾವುದೇ ಆದೇಶ ದೇಶದ ಪ್ರಜೆಗಳು ತಮ್ಮ ತೆರಿಗೆ ನೀಡಿದ ಹಣವನ್ನು ಬ್ಯಾಂಕ್ ಖಾತೆಯಿಂದ ತೆಗೆಯಲು ನಿರ್ಬಂಧ ಹೇರುವಂತಿಲ್ಲ. ಆದ ಕಾರಣ ಕೇಂದ್ರ ಸರ್ಕಾರ ಮತ್ತು ರಿಸರ್ವ್ ಬ್ಯಾಂಕ್ ಆಫ್ ಇಂಡಿಯ ಕಾಲಕಾಲಕ್ಕೆ ವಿಧಿಸಿದ್ದ ಹಣ ತೆಗೆಯುವ ನಿರ್ಬಂಧ ಕಾನೂನುಬಾಹಿರ ಎಂಬುದು ಸರ್ವೋಚ್ಚ ನ್ಯಾಯಾಲಯದ ಮುಂದೆ ಮಂಡಿಸಿರುವ ಇನ್ನೊಂದು ಪ್ರಶ್ನೆ. ನೋಟು ರದ್ದತಿ ಮುಗಿದ ಅಧ್ಯಾಯವಲ್ಲ. ಸರ್ವೋಚ್ಚ ನ್ಯಾಯಾಲಯದ ನಿರ್ಣಯ ಮೋದಿಯ ತುಘಲಕ್ ದರ್ಬಾರ್ ಕ್ರಮವನ್ನು ಕಾನೂನುಬಾಹಿರವೋ ಅಥವಾ ಕಾನೂನಾತ್ಮಕವೋ ಎಂಬುದರ ಬಗ್ಗೆ ತೀರ್ಮಾನಿಸಿದರೆ, ಜನತೆ ತಮ್ಮ ತೀರ್ಮಾನವನ್ನು ಮುಂದಿನ ದಿನಗಳಲ್ಲಿ ನೀಡಬಹುದು.

**ನಿಗ್ರಹಗೊಳ್ಳದ ಕಪ್ಪುಹಣ**

ಉತ್ತರಪ್ರದೇಶ ಮತ್ತು ಉತ್ತರಾಖಂಡ್ ರಾಜ್ಯಗಳಲ್ಲಿ ನಡೆದ ಚುನಾವಣೆಯಲ್ಲಿ ಭಾರತೀಯ ಜನತಾ ಪಕ್ಷವನ್ನು ಭಾರಿ ಬಹುಮತದಿಂದ ಗೆಲ್ಲಿಸುವುದರ ಮೂಲಕ ಜನತೆ ಮೋದಿಯ ನೋಟುರದ್ದತಿ ಕ್ರಮವನ್ನು ಮಾನ್ಯ ಮಾಡಿದ್ದಾರೆ ಎಂಬುದೊಂದು ವಾದ. ಮೋದಿಯವರ ಅಬ್ಬರದ ಪ್ರಚಾರವಿದ್ದಾಗ್ಯೂ ಶೇ. ೬೧ ಮತದಾರರು ಅವರ ಪಕ್ಷದ ಪರವಾಗಿ ಮತ ಚಲಾಯಿಸಿಲ್ಲ. ಹಾಗಾಗಿ ಮೇಲ್ಕಾಣಿಸಿದ ವಾದ ಅಥವಾ ಅಭಿಪ್ರಾಯವನ್ನು ಪುರಸ್ಕರಿಸಲು ಸಾಧ್ಯವಿಲ್ಲ. ಇಲ್ಲಿ ವಿಶೇಷವಾಗಿ ಗಮನಿಸಬೇಕಾದ ಅಂಶವೆಂದರೆ, ಸ್ವತಃ ಮೋದಿಯವರೇ ನೋಟುರದ್ದತಿಯ ಕ್ರಮವನ್ನು ಚುನಾವಣೆ ನಡೆದ ಐದು ರಾಜ್ಯಗಳಲ್ಲಿ ಪಣಕ್ಕಿಡಲಿಲ್ಲ. ಉತ್ತರಪ್ರದೇಶ ಮತ್ತು ಉತ್ತರಾಖಂಡ್ ರಾಜ್ಯಗಳಲ್ಲಿ ಭಾರತೀಯ ಜನತಾ ಪಕ್ಷದ ಗೆಲುವಿನ ಕಾರಣಗಳೇ ಬೇರೆ, ಈ ರಾಜ್ಯಗಳಲ್ಲಿ ನೋಟುರದ್ದತಿಯ ಕ್ರಮ ಅವರ ಗೆಲುವಿಗೆ ಕಾರಣವಾಗಿದ್ದಲ್ಲಿ ಪಂಜಾಬ್‌ನಲ್ಲೇಕೆ ಸೋತರು, ಮಣಿಪುರ ಮತ್ತು ಗೋವಾದಲ್ಲೇಕೆ ಬಹುಮತ ಗಳಿಸಲಿಲ್ಲ ?

ಪ್ರತಿನಿತ್ಯ ಬೆಳಗ್ಗೆ ಮತ್ತು ಸಾಯಂಕಾಲ ರಾಷ್ಟ್ರೀಯ ಒಟ್ಟು ಉತ್ಪನ್ನದ ಬಗ್ಗೆ ಹೇಳಿಕೆ ನೀಡುವ ವಿತ್ತಮಂತ್ರಿ ಅರುಣ್ ಜೇಟ್ಲಿ ನೋಟುರದ್ದತಿಯ ನಂತರ ಬ್ಯಾಂಕುಗಳಿಗೆ ಹಿಂದಿರುಗಿ ಬಂದ ಹಳೆಯ ನೋಟುಗಳ ಹಣದ ಮೊತ್ತವೆಷ್ಟು ಎಂಬುದನ್ನು ದೇಶದ ಮುಂದಿಡಲು ಏಕೆ ಹಿಂಜರಿಯುತ್ತಿದ್ದಾರೆ ? ನೋಟುರದ್ದತಿ ಈ ದೇಶದ ಇತಿಹಾಸದಲ್ಲಿ ಆಗಿಹೋದ ಅತ್ಯಂತ ದೊಡ್ಡ ಹಗರಣವೆಂಬುದಂತೂ ಸತ್ಯ. ಭ್ರಮೆ ಆರಿದ ಮೇಲೆ ಜನತೆ ಇದನ್ನು ಒಪ್ಪಬಹುದು. ನೋಟುರದ್ದತಿಯಿಂದ ಏನು ಸಾಧನೆಯಾಯಿತು ಎಂಬುದು ಚರ್ಚಾಸ್ಪದ ವಸ್ತುವಾಗಬಹುದಾದರೂ, ಅದು ಕಪ್ಪುಹಣವನ್ನು ನಿಗ್ರಹಮಾಡಲಿಲ್ಲವೆಂಬುದು ಚರ್ಚಾತೀತ.

**ಮುರಳೀಧರ ಚಿಕ್ಕಮಗಳೂರು**
ವಕೀಲರು, ನಂ. ೩, ಎರಡನೇ ಮಹಡಿ, ವಿ. ವಿ. ಪುರಂ, ಬೆಂಗಳೂರು – ೫೬೦ ೦೦೪



ಮೂಲ : ಬೇಗಂ ರೊಕೈಯ್ಯ
ಅನುವಾದ : ಝಾಹಿದಾ ಶಿರೀನ್

# ಸುಲ್ತಾನಳ ಕನಸು




ಒಂದು ಸಂಜೆ ನಾನು ನನ್ನ ಕೊಠಡಿಯಲ್ಲಿ ಆರಾಮ ಕುರ್ಚಿಗೆ ಒರಗಿ ಕುಳಿತು ಭಾರತದ ಮಹಿಳೆಯರ ಸ್ಥಿತಿಗತಿಯ ಬಗ್ಗೆ ಆಲೋಚಿಸುತ್ತಿದ್ದೆ. ಆ ಕ್ಷಣ ನನ್ನ ಕಣ್ಣಿಗೆ ನಿದ್ದೆ ಹತ್ತಿತ್ತೋ ಇಲ್ಲವೋ ಗೊತ್ತಿಲ್ಲ. ಆದರೆ ನನಗೆ ಅನಿಸುವ ಮಟ್ಟಿಗೆ ನಾನು ಎಚ್ಚರವಾಗಿಯೇ ಇದ್ದೆ. ಆಕಾಶದಲ್ಲಿ ಚಂದ್ರನ ಬೆಳಕಿನಲ್ಲಿ ವಜ್ರದಂತೆ ಹೊಳೆಯುವ ಸಾವಿರಾರು ನಕ್ಷತ್ರಗಳನ್ನು ಕಂಡೆ.

ಅನಿರೀಕ್ಷಿತವಾಗಿ ನನ್ನ ಮುಂದೆ ಒಬ್ಬ ಮಹಿಳೆ ನಿಂತಿರುವುದನ್ನು ಕಂಡೆ. ಆಕೆ ಹೇಗೆ ಒಳಗೆ ಬಂದಳೋ ತಿಳಿದಿಲ್ಲ. ಆಕೆಯನ್ನು ನನ್ನ ಸ್ನೇಹಿತೆ ಸಹೋದರಿ 'ಸಾರಾ' ಎಂದು ತಿಳಿದೆ.

'ಗುಡ್ ಮಾರ್ನಿಂಗ್' ಎಂದಳು ಸಹೋದರಿ ಸಾರಾ. ಆ ಹೊತ್ತು ಇನ್ನೂ ಬೆಳಗಾಗಿರಲಿಲ್ಲವೆಂದೂ ನಕ್ಷತ್ರಗಳಿಂದ ಕೂಡಿರುವ ರಾತ್ರಿಯೆಂದೂ ನನಗೆ ಗೊತ್ತಿದ್ದರಿಂದ ನಗು ಬಂದಿತು, ಆದರೂ ನಾನು ಆಕೆಗೆ ಪ್ರತ್ಯುತ್ತರ ನೀಡಿದೆ. "ಹೇಗಿದ್ದೀಯಾ ?" ಅವಳೆಂದಳು "ನಾನು ಚೆನ್ನಾಗಿದ್ದೀನಿ ಧನ್ಯವಾದಗಳು. ತಾವು ದಯವಿಟ್ಟು ನನ್ನೊಂದಿಗೆ ಹೊರಗೆ ಬಂದು ನಮ್ಮ ಹೂದೋಟವನ್ನು ನೋಡುತ್ತೀರಾ ?"

ನಾನು ಮತ್ತೊಮ್ಮೆ ಕಿಟಕಿಯಿಂದ ಚಂದ್ರನನ್ನು ನೋಡಿದೆ, ಈ ಹೊತ್ತಿನಲ್ಲಿ ಹೊರಗೆ ಹೋಗುವುದರಲ್ಲಿ ತೊಂದರೆಯಿಲ್ಲ ಎಂದುಕೊಂಡೆ. ಹೊರಗಿದ್ದ ಗಂಡು ಸೇವಕರು ಆಗತಾನೆ ಗಾಢ ನಿದ್ರೆಗೆ ಜಾರಿದ್ದರು. ನಾನು ಸಹೋದರಿ ಸಾರಾಳೊಂದಿಗೆ ಆಹ್ಲಾದಕರವಾಗಿ ತಿರುಗಾಡಿಕೊಂಡು ಬರಬಹುದು ಎಂದುಕೊಂಡೆ.

ಬೇಗಂ ರೊಕೈಯ್ಯ ಎಂದೇ ಪ್ರಖ್ಯಾತರಾಗಿರುವ ಬೇಗಂ ರೊಕೈಯ್ಯ ಶಖಾವತ್ ಹುಸೇನ್ (೯ ಡಿಸೆಂಬರ್ ೧೮೮೦ - ೯ ಡಿಸೆಂಬರ್ ೧೯೩೨) ರವರು ಬಂಗಾಳಿ ಭಾಷೆಯ ಬರಹಗಾರರು, ಶಿಕ್ಷಣ ತಜ್ಞರು, ಸುಧಾರಕರು. ಮಹಿಳೆಯರ ಹಕ್ಕುಗಳಿಗಾಗಿ ಹೋರಾಡಿದ ಬೇಗಂ ರೊಕೈಯ್ಯರವರು ಬಂಗಾಳದ ಪ್ರಮುಖ ಮಹಿಳಾವಾದಿಗಳಲ್ಲಿ ಒಬ್ಬರು. ಮಹಿಳೆಯರನ್ನು ಮತ್ತು ಪುರುಷರನ್ನು ಸಮಾನರನ್ನಾಗಿ ಹಾಗೂ ವಿಚಾರಶೀಲ ವ್ಯಕ್ತಿಗಳನ್ನಾಗಿ ಕಾಣಬೇಕು ಎಂಬುದನ್ನು ಅವರು ತಮ್ಮ ಬರಹಗಳಲ್ಲಿ ಪ್ರತಿಪಾದಿಸಿದ್ದಾರೆ. ಮಹಿಳೆಯರಿಗೆ ಸರಿಯಾದ ಶಿಕ್ಷಣ ಇಲ್ಲದೇ ಇರುವುದರಿಂದ ಅವರು ಹಿಂದುಳಿದಿದ್ದಾರೆ, ಮಹಿಳೆಯರ ವಿಮುಕ್ತಿಗಾಗಿ ಶಿಕ್ಷಣ ಅತ್ಯಗತ್ಯ ಎಂದು ಅವರು ಬಂಗಾಳದ ಮುಸ್ಲಿಂ ಹುಡುಗಿಯರಿಗಾಗಿ ಮೊಟ್ಟ ಮೊದಲ ಶಾಲೆಯನ್ನೂ ಪ್ರಾರಂಭಿಸಿದರು. ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುವಂತೆ ಮನೆಮನೆಗೆ ಹೋಗಿ ಪೋಷಕರನ್ನು ಒಲಿಸಲು ಪ್ರಯತ್ನಿಸಿದರು. ಮಹಿಳೆಯರಿಗೆ ಶಿಕ್ಷಣ ಹಾಗೂ ಉದ್ಯೋಗಕ್ಕಾಗಿ ಒತ್ತಾಯಿಸಲು ೧೯೧೬ರಂದು 'ಮುಸ್ಲಿಂ ವಿಮೆನ್ಸ್ ಅಸೋಸಿಯೇಷನ್'ಅನ್ನು ಸ್ಥಾಪಿಸಿದರು. ಇವರು ತಮ್ಮ 'ಅಬಿರೋಧ್‌ಬಾಸಿನಿ' ಎಂಬ ಬರವಣಿಗೆಯಲ್ಲಿ 'ಪರ್ದಾ' ಪದ್ಧತಿಯ ಅತಿರೇಕದ ಬಗ್ಗೆ ಪ್ರತಿಭಟನೆಯ ಧ್ವನಿ ಎತ್ತಿದ್ದಾರೆ. 'ಸುಲ್ತಾನಳ ಕನಸು' ವೈಜ್ಞಾನಿಕ ಮಾದರಿಯ ಕಲ್ಪನಾ ಸಾಮ್ರಾಜ್ಯದ ಕಥೆ. 'ಪದ್ಮರಾಗ್', 'ಮೊತಿಚೂರ್' ಇವರ ಇತರ ಪ್ರಖ್ಯಾತ ಕೃತಿಗಳು.

ಬೇಗಂ ರೊಕೈಯ್ಯರವರ ಕಾರ್ಯವನ್ನು ಸ್ಮರಿಸಿ ಪ್ರತಿ ಡಿಸೆಂಬರ್ ೯ರಂದು ಬಂಗ್ಲಾದೇಶ ಸರ್ಕಾರವು ಅಪರೂಪದ ಸಾಧನೆ ಮಾಡಿದ ಮಹಿಳೆಯರಿಗೆ ಬೇಗಂ ರೊಕೈಯ್ಯ ಪದಕವನ್ನು ನೀಡುತ್ತದೆ. ಬಿಬಿಸಿ ಸಂಸ್ಥೆ ನಡೆಸಿದ ಜನಮತ ಗಣನೆಯಲ್ಲಿ ಅತಿ ಶ್ರೇಷ್ಠ ಬಂಗಾಳಿಗಳಲ್ಲಿ ಆರನೆಯ ಸ್ಥಾನ ಪಡೆದರು ಎಂಬುದು ನಿಜಕ್ಕೂ ವಿಸ್ಮಯದ, ಸಂತಸದ ಸಂಗತಿ. ಇದನ್ನೆಲ್ಲಾ ಅವರು ಸ್ವಾತಂತ್ರ್ಯ ಪೂರ್ವದಲ್ಲಿ ಆರಂಭಿಸಿ ಜೀವನದ ಕಡೆಯ ಕ್ಷಣದವರೆಗೂ ಮುಂದುವರಿಸಿದರೆಂಬುದು ಗಮನಾರ್ಹ.

ನಾವು ಡಾರ್ಜಿಲಿಂಗ್‌ನಲ್ಲಿದ್ದಾಗ, ಸಾರಾಳೊಂದಿಗೆ ಸುತ್ತಾಡಿಕೊಂಡು ಬರಲು ಹೋಗುತ್ತಿದ್ದೆ. ಹಲವಾರು ಬಾರಿ ನಾವಿಬ್ಬರೂ ಜೊತೆಜೊತೆಯಾಗಿ, ಸಂತೋಷವಾಗಿ ಅಲ್ಲಿನ ಹೂದೋಟಗಳನ್ನು ಸುತ್ತಾಡಿಕೊಂಡು ಬರುತ್ತಿದ್ದೆವು. ಅಂತಹುದೇ ಒಂದು ತೋಟಕ್ಕೆ ಕರೆದುಕೊಂಡು ಹೋಗಲು ಸಾರಾ ಬಂದಿರಬಹುದೆಂದು ನನಗೆ ಖುಷಿಯಾಯಿತು. ನಾನು ತಕ್ಷಣವೇ ಆಕೆಯ ಆಹ್ವಾನವನ್ನು ಒಪ್ಪಿ ಆಕೆಯೊಂದಿಗೆ ಹೊರಗಡೆ ಹೊರಟೆ.

ಹೊರಗೆ ನಡೆಯುತ್ತಿದ್ದಾಗ ಇದು ಸುಂದರವಾದ ಮುಂಜಾವೆಂದು ತಿಳಿದು ನನಗೆ ಆಶ್ಚರ್ಯವಾಯಿತು. ನಗರವು ಸಂಪೂರ್ಣವಾಗಿ ಎಚ್ಚರಗೊಂಡಿದ್ದು, ರಸ್ತೆಗಳು ಜನರ ಗುಂಪುಗಳಿಂದ ತುಂಬಿಹೋಗಿದ್ದವು. ನನಗೆ ತುಂಬ ನಾಚಿಕೆಯೆನಿಸುತ್ತಿತ್ತು. ನಾನು ಪ್ರಖರವಾದ ಬೆಳಕಿನಲ್ಲಿ ನಡೆದುಹೋಗುತ್ತಿದ್ದೆ, ಆದರೆ ರಸ್ತೆಯಲ್ಲಿ ಒಬ್ಬ ಗಂಡಸೂ ಕಣ್ಣಿಗೆ ಬೀಳಲಿಲ್ಲ.




ನನ್ನ ಅಕ್ಕಪಕ್ಕದ ದಾರಿಹೋಕರು ನನ್ನ ಬಗ್ಗೆ ಹಾಸ್ಯ ಮಾಡುತ್ತಿದ್ದರು. ನನಗೆ ಅವರ ಭಾಷೆ ಅರ್ಥವಾಗಲಿಲ್ಲ. ಆದರೂ ಅವರು ನನ್ನ ಬಗ್ಗೆಯೇ ಹಾಸ್ಯ ಮಾಡುತ್ತಿದ್ದಾರೆ ಎಂದು ಅನಿಸಿತು. ನಾನು ನನ್ನ ಸ್ನೇಹಿತೆಯನ್ನು ಕೇಳಿದೆ, ಅವರು ಏನೆನ್ನುತ್ತಿದ್ದಾರೆ ?

"ನೀನು ತುಂಬ ಗಂಡಸರ ರೀತಿಯಲ್ಲಿದ್ದೀಯ" ಎನ್ನುತ್ತಿದ್ದಾಳೆ ಆ ಹೆಂಗಸು.

"ಗಂಡಸರ ರೀತಿಯೆ ? ಅವರ ಮಾತಿನ ಅರ್ಥವೇನು ?"

"ನೀನು ನಾಚಿಕೆ ಹಾಗೂ ಗಾಬರಿ ಸ್ವಭಾವದವಳು ಎಂಬುದು ಅವರ ಮಾತಿನ ಅರ್ಥ" ಎಂದಳು ನನ್ನ ಗೆಳತಿ. ನಾಚಿಕೆ ಹಾಗೂ ಗಾಬರಿ ಪುರುಷರ ಸ್ವಭಾವವೇ ? ಇದು ನನಗೆ ನಿಜವಾಗಲೂ ತಮಾಷೆಯೆನಿಸಿತು. ನನ್ನ ಜೊತೆಯಲ್ಲಿದ್ದ ಸ್ನೇಹಿತೆ ಸಾರಾ ಅಲ್ಲ, ಆಕೆ ಅಪರಿಚಿತ ಮಹಿಳೆ ಎಂದು ಗಮನಕ್ಕೆ ಬಂದಾಗ ನನಗೆ ತುಂಬ ಗಾಬರಿಯಾಯಿತು. ಓಹ್, ಅಪರಿಚಿತ ಮಹಿಳೆಯನ್ನು, ನನ್ನ ಹಳೆಯ ಸ್ನೇಹಿತೆಯೆಂದು ತಿಳಿದು ಎಂತಹ ಮೂರ್ಖ ಕೆಲಸ ಮಾಡಿದೆ ಎಂದುಕೊಂಡೆ.

ನಾವಿಬ್ಬರೂ ಕೈ ಕೈ ಹಿಡಿದುಕೊಂಡು ದಾರಿಯಲ್ಲಿ ಹೋಗುತ್ತಿದ್ದರಿಂದ ನನ್ನ ಬೆರಳುಗಳು ನಡುಗುತ್ತಿರುವುದನ್ನು ಆಕೆ ಗಮನಿಸಿದಳು.

"ಏನಾಯಿತು ?" ಆಕೆ ಆತ್ಮೀಯವಾಗಿ ವಿಚಾರಿಸಿದಳು. ನನಗೇನೋ ಒಂದು ತರಹ ಕಷ್ಟವೆನಿಸಿತು. ನಾನು ಕ್ಷಮೆ ಕೋರುವ ಧ್ವನಿಯಲ್ಲಿ ಉತ್ತರಿಸಿದೆ. "ನಾನು ಪರ್ದಾನಶೀನ್ ಮಹಿಳೆಯಾಗಿರುವುದರಿಂದ ಈ ರೀತಿಯಲ್ಲಿ ಪರದೆಯಿಲ್ಲದೆ ನಡೆಯುವ ಅಭ್ಯಾಸವಿಲ್ಲ" ಎಂದೆ.

"ನಿನಗೆ ಗಂಡಸರನ್ನು ಎದುರುಗೊಳ್ಳುವ ಆತಂಕವೇ ಬೇಡ. ಏಕೆಂದರೆ ಇದು 'ಮಹಿಳಾ ರಾಜ್ಯ.' ಪಾಪ ಮತ್ತು ತೊಂದರೆಯಿಂದ ಮುಕ್ತವಾದದ್ದು. ಸದ್ಗುಣಗಳೇ ಇಲ್ಲಿ ಆಳ್ವಿಕೆ ನಡೆಸುತ್ತಿವೆ" ಎಂದಳು ನನ್ನ ಗೆಳತಿ.

ನಾನು ನಡೆಯುತ್ತಾ ಹೋಗುತ್ತಿದ್ದಂತೆ ಪ್ರಕೃತಿ ಸೌಂದರ್ಯವನ್ನು ಆಸ್ವಾದಿಸುತ್ತಿದ್ದೆ. ನಿಜವಾಗಿಯೂ ಅದು ತುಂಬ ವೈಭವಯುತವಾಗಿತ್ತು. ಹಸಿರು ಹುಲ್ಲನ್ನು ಮಖಮಲ್ಲಿನ ಮೆತ್ತೆಯೆಂದು ತಪ್ಪಾಗಿ ಭಾವಿಸುವಂತಿತ್ತು. ಮೆತ್ತಗಿನ ಹಾಸಿಗೆಯ ಮೇಲೆ ನಡೆಯುತ್ತಿರುವಂತೆ ಭಾಸವಾಗುತ್ತಿತ್ತು. ನಾನು ಬಗ್ಗಿ ನೋಡಿದೆ. ಹಚ್ಚಹಸುರಿನ ಹುಲ್ಲು ಹಾಗೂ ಹೂವುಗಳಿಂದ ರಸ್ತೆಯು ತುಂಬಿತ್ತು.

"ಇದು ಎಷ್ಟು ಸೊಗಸಾಗಿದೆ" ಎಂದೆ.

"ನಿನಗಿದು ಇಷ್ಟವಾಯಿತೇ ?" ಎಂದಳು ಸಹೋದರಿ ಸಾರಾ (ನಾನು ಆಕೆಯನ್ನು ಸಹೋದರಿ ಸಾರಾ ಎಂದೇ ಕರೆಯುವುದನ್ನು ಮುಂದುವರಿಸಿದೆ. ಆಕೆಯಾದರೂ ನನ್ನನ್ನು ನನ್ನ ಹೆಸರಿನಿಂದಲೇ ಕರೆಯುತ್ತಿದ್ದಳು).

"ಹೌದು, ತುಂಬ ಇಷ್ಟವಾಯಿತು. ಆದರೆ ನಾನು ಈ ಸುಂದರವಾದ ಹೂಗಳ ಮೇಲೆ ನಡೆಯಲು ಬಯಸುವುದಿಲ್ಲ."

"ಬೇಸರಪಡಬೇಡ ಸುಲ್ತಾನ, ನೀನು ನಡೆಯುವುದರಿಂದ ಈ ಹೂವುಗಳಿಗೆ ಯಾವುದೇ ರೀತಿ ಹಾನಿಯಾಗುವುದಿಲ್ಲ. ಇವು ಬೀದಿಯ ಹೂಗಳು."

"ಇಡೀ ಪ್ರದೇಶ ತೋಟದಂತಿದೆ. ನೀವು ಪ್ರತಿಯೊಂದು ಸಸಿಯನ್ನು ಬಹಳ ನಿಪುಣತೆಯಿಂದ ಬೆಳೆಸಿದ್ದೀರಿ" ಎಂದು ನನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸಿದೆ.

"ನಿಮ್ಮ ಜನ ಇಷ್ಟಪಟ್ಟಿದ್ದರೆ ನಿನ್ನ ಕಲ್ಕತ್ತೆಯೂ ಸಹ ಇದಕ್ಕಿಂತ ಉತ್ತಮವಾದ ತೋಟವಾಗಬಹುದಿತ್ತು."

"ಮಾಡಲು ಬೇಕಾದಷ್ಟು ಬೇರೆ ಕೆಲಸಗಳು ಇರಬೇಕಾದರೆ, ತೋಟಗಾರಿಕೆಗೆ ಇಷ್ಟೊಂದು ಮಹತ್ವ ನೀಡುವುದು ಅನಾವಶ್ಯಕ ಎಂಬುದು ನಮ್ಮವರ ಅಭಿಪ್ರಾಯ."

"ಇದಕ್ಕಿಂತ ಉತ್ತಮವಾದ ನೆಪ ಅವರಿಗೆ ಸಿಗಲಿಲ್ಲವೇ ?" ಎಂದು ಆಕೆ ಮುಗುಳ್ನಕ್ಕಳು.

ನಾನು ನಡೆದು ಹೋಗುವಾಗ ನೂರಕ್ಕೂ ಹೆಚ್ಚು ಮಹಿಳೆಯರನ್ನು ನೋಡಿದೆ. ಆದರೆ ಒಬ್ಬ ಗಂಡಸೂ ಕಣ್ಣಿಗೆ ಬೀಳಲಿಲ್ಲ. ಗಂಡಸರೆಲ್ಲರೂ ಎಲ್ಲಿದ್ದಾರೆಂದು ತಿಳಿಯುವ ಕುತೂಹಲವಾಯಿತು.

"ಗಂಡಸರೆಲ್ಲರೂ ಎಲ್ಲಿದ್ದಾರೆ ?"

"ಅವರು ಎಲ್ಲಿರಬೇಕೋ ಅಲ್ಲಿ. ಅವರ ಸೂಕ್ತವಾದ ಸ್ಥಳದಲ್ಲಿದ್ದಾರೆ."

"ಅವರ ಸೂಕ್ತವಾದ ಸ್ಥಳದಲ್ಲಿ ಎಂದರೇನು ? ದಯವಿಟ್ಟು ತಿಳಿಸುತ್ತೀಯ ?"

"ಓಹ್, ಕ್ಷಮಿಸು ನನ್ನ ತಪ್ಪಿನ ಅರಿವಾಗುತ್ತಿದೆ. ನೀನು ಇಲ್ಲಿನವಳಲ್ಲದ್ದರಿಂದ ನಿನಗೆ ನಮ್ಮ ಪದ್ಧತಿ ತಿಳಿದಿಲ್ಲ. ನಾವು ಗಂಡಸರನ್ನು ಮನೆಯೊಳಗಿರಿಸಿದ್ದೇವೆ."

"ನಮ್ಮನ್ನು ಜನಾನಾದೊಳಗೆ ಇರಿಸಿರುವಂತೆ."

"ಖಂಡಿತವಾಗಿಯೂ ಹಾಗೆಯೇ."

"ಎಷ್ಟು ವಿಚಿತ್ರ." ನನಗೆ ನಗು ತಡೆಯಲಾಗದೆ ನಗಲಾರಂಭಿಸಿದೆ. ಸಹೋದರಿ ಸಾರಾ ಕೂಡ ನಕ್ಕರು.

ಅವರೆಂದರು, "ಪ್ರೀತಿಯ ಸುಲ್ತಾನಾ, ಯಾವುದೇ ಅಪಾಯವಿಲ್ಲದ ಹೆಣ್ಣುಮಕ್ಕಳನ್ನು ಒಳಗೆ ಕೂಡಿ ಹಾಕಿ ಗಂಡಸರನ್ನು ಹೊರಬಿಟ್ಟಿರುವುದು ಬಹಳ ಅನ್ಯಾಯ ಅಲ್ಲವೇ ?"

"ಯಾಕೆ ? ಪ್ರಾಕೃತಿಕವಾಗಿ ದುರ್ಬಲರಾದ ನಾವು ಜನಾನಾಗಳಿಂದ ಹೊರಬರುವುದು ಸುರಕ್ಷಿತವಲ್ಲ."

"ಹೌದ್ಹೌದು, ಎಲ್ಲಿಯವರೆಗೆ ರಸ್ತೆಯಲ್ಲಿ ಗಂಡಸರಿರುತ್ತಾರೋ ಅಲ್ಲಿಯವರೆಗೂ ಅದು ನಮಗೆ ಸುರಕ್ಷಿತವಲ್ಲ. ಕಾಡುಪ್ರಾಣಿಯೊಂದು ಮಾರುಕಟ್ಟೆಗೆ ನುಸುಳಿದರೆ ಹೇಗೋ ಹಾಗೆ."

"ಖಂಡಿತವಾಗಿಯೂ ಅಲ್ಲ."

"ಹುಚ್ಚು ಹಿಡಿದಿರುವ ಕುದುರೆ ಅಥವಾ ಇನ್ಯಾವುದೇ ಪ್ರಾಣಿ ತಪ್ಪಿಸಿಕೊಂಡು ಬಂದು ಎಲ್ಲಾ ರೀತಿಯ ತೊಂದರೆ ಕೊಡಲಾರಂಭಿಸಿದರೆ ಆಗ ನಿಮ್ಮ ದೇಶದ ಜನರು ಏನು ಮಾಡುತ್ತಾರೆ ?"

"ಮತ್ತೆ ಅದನ್ನು ಹಿಡಿದು ದೊಡ್ಡಿಯಲ್ಲಿ ಕೂಡಿಹಾಕುತ್ತಾರೆ."

"ಧನ್ಯವಾದಗಳು ! ಸ್ವಸ್ಥ ಮನಸ್ಸಿನವರನ್ನು ಕೂಡಿಹಾಕಿ, ಅಸ್ವಸ್ಥ ಮನಸ್ಸಿನವರನ್ನು ಹೊರಬಿಡುವುದು ಬುದ್ಧಿವಂತಿಕೆಯೆಂದು ನೀನು ತಿಳಿದಿಲ್ಲವಲ್ಲ !"

"ಖಂಡಿತವಾಗಿಯೂ ಇಲ್ಲ" ನಗುತ್ತಾ ಉತ್ತರಿಸಿದೆ.

"ನಿಜ ಹೇಳಬೇಕೆಂದರೆ ನಿಮ್ಮ ದೇಶದಲ್ಲಿ ಆಗಿರುವುದು ಹೀಗೆಯೇ. ಪುಂಡಾಟ ಮಾಡುವ ಅಥವಾ ಮಾಡಲು ಸಾಮರ್ಥ್ಯವಿರುವ ಗಂಡಸರನ್ನು ಹೊರಗೆ ಬಿಟ್ಟು ಅಮಾಯಕ ಹೆಣ್ಣುಮಕ್ಕಳನ್ನು ಜನಾನಾದಲ್ಲಿಡಲಾಗಿದೆ. ಮನೆಯ ಹೊರಗಿರುವ ನಿಯಂತ್ರಣವಿಲ್ಲದ ಪುರುಷರನ್ನು ನಂಬುವುದು ಹೇಗೆ ?"

"ಸಾಮಾಜಿಕ ವ್ಯವಹಾರಗಳನ್ನು ನಿಭಾಯಿಸುವಲ್ಲಿ ನಮ್ಮ ಕೈವಾಡ ಏನೂ ಇಲ್ಲ. ನಮ್ಮ ಧ್ವನಿಯನ್ನು ಕೇಳಿಸಿಕೊಳ್ಳುವುದಿಲ್ಲ. ಭಾರತದಲ್ಲಿ ಪುರುಷನೇ ಯಜಮಾನ. ಎಲ್ಲಾ ಅಧಿಕಾರಗಳನ್ನು ಹಾಗೂ ಸೌಕರ್ಯಗಳನ್ನು ತನ್ನಲ್ಲೇ ಇರಿಸಿಕೊಂಡು, ಮಹಿಳೆಯರನ್ನು ಜನಾನಾದಲ್ಲಿ ಕೂಡಿಟ್ಟಿದ್ದಾನೆ."

"ನಿಮ್ಮನ್ನು ಕೂಡಿಡಲು ನೀವೇಕೆ ಒಪ್ಪುತ್ತೀರಿ ?"

"ಮಹಿಳೆಯರಿಗಿಂತ ಪುರುಷರು ಪ್ರಬಲರಾಗಿರುವುದರಿಂದ ಇನ್ನೇನೂ ಮಾಡಲು ಸಾಧ್ಯವಿಲ್ಲ."

"ಮನುಷ್ಯರಿಗಿಂತ ಸಿಂಹ ಬಲಶಾಲಿ. ಆದರೆ ಅದು ಮಾನವ ಜನಾಂಗದ ಮೇಲೆ ಹತೋಟಿ ಸಾಧಿಸಲು ಸಮರ್ಥವಲ್ಲ. ನೀವು ನಿಮ್ಮ ಕರ್ತವ್ಯವನ್ನು ನಿರ್ಲಕ್ಷಿಸಿದ್ದೀರಿ. ನಿಮ್ಮ ಹಿತಾಸಕ್ತಿಯಿಂದ ವಿಮುಖವಾಗಿ ಕಣ್ಣುಮುಚ್ಚಿ ಕುಳಿತಿರುವುದರಿಂದ ನಿಮ್ಮ ಸ್ವಾಭಾವಿಕ ಅಧಿಕಾರಗಳನ್ನು ಕಳೆದುಕೊಂಡಿದ್ದೀರಿ."

"ಆದರೆ ನನ್ನ ಪ್ರೀತಿಯ ಸಾರಾ, ನಾವೇ ಎಲ್ಲಾ ಕೆಲಸಗಳನ್ನೂ ಮಾಡಿಕೊಂಡರೆ ಗಂಡಸರು ಏನು ಮಾಡಬೇಕು ?"

"ಅವರು ಏನನ್ನೂ ಮಾಡಬೇಕಾಗಿಲ್ಲ, ಕ್ಷಮಿಸು; ಅವರು ಯಾವುದಕ್ಕೂ ಯೋಗ್ಯರಲ್ಲ. ಕೇವಲ ಅವರನ್ನು ಹಿಡಿದು ಜನಾನಾದೊಳಗೆ ಹಾಕಬೇಕು !"

"ಆದರೆ ಅವರನ್ನು ಹಿಡಿದು ನಾಲ್ಕು ಗೋಡೆಗಳ ಮಧ್ಯೆ ಕೂಡಿಹಾಕುವುದು ಅಷ್ಟು ಸುಲಭವೇ ? ಹಾಗೆ ಮಾಡಲು ಸಾಧ್ಯವಾದರೂ ಆರ್ಥಿಕ, ರಾಜಕೀಯ, ವ್ಯವಹಾರವೆಲ್ಲವೂ ಜನಾನಾದೊಳಗೆ ಸೇರಿಕೊಳ್ಳುವುದೇ ?"

ಸಹೋದರಿ ಸಾರಾ ಉತ್ತರಿಸಲಿಲ್ಲ, ಸಿಹಿಯಾದ ನಗೆಯೊಂದನ್ನು ಬೀರಿದಳು. ಬಹುಶಃ ಬಾವಿಯೊಳಗಿನ ಕಪ್ಪೆಯಂತಿರುವವರೊಂದಿಗೆ ವಾದ ಮಾಡುವುದರಲ್ಲಿ ಅರ್ಥವಿಲ್ಲವೆಂದು ಆಕೆ ಭಾವಿಸಿರಬಹುದು.

ಅಷ್ಟು ಹೊತ್ತಿಗಾಗಲೇ ನಾವು ಸಾರಾಳ ಮನೆಗೆ ತಲುಪಿದೆವು. ಸುಂದರವಾದ ಮೇಲ್ಛಾವಣಿಯನ್ನು ಹೊಂದಿದ ಬಂಗ್ಲೆ ಸುಂದರವಾದ ಹೃದಯಾಕಾರದ ಹೂದೋಟದ ನಡುವೆ ಇತ್ತು. ಶ್ರೀಮಂತ ಕಟ್ಟಡಗಳಿಗಿಂತ ಹೆಚ್ಚು ತಂಪಾಗಿತ್ತು. ಎಷ್ಟು ಸ್ವಚ್ಛವಾಗಿ, ಸುಮಾರಾಗಿ, ಅಭಿರುಚಿಯಿಂದ ಅದನ್ನು ಅಲಂಕರಿಸಲಾಗಿತ್ತೆಂದು ನಾನು ವಿವರಿಸಲಾರೆ.

ನಾವು ಪಕ್ಕ–ಪಕ್ಕ ಕುಳಿತುಕೊಂಡೆವು. ಆಕೆ ಎಂಬ್ರಾಯಿಡರಿ ಸಲಕರಣೆಗಳನ್ನು, ಬಟ್ಟೆಯನ್ನು ತಂದು ಅದರಲ್ಲಿ ಹೊಸ ಡಿಸೈನ್ ಹಾಕಲು ಪ್ರಾರಂಭಿಸಿ ಕೇಳಿದಳು.

"ನಿನಗೆ ಹೆಣಿಗೆ ಮತ್ತು ಕಸೂತಿಯ ಕೆಲಸ ಗೊತ್ತೆ ?"

"ಗೊತ್ತು. ನಮಗೆ ಜನಾನಾದಲ್ಲಿ ಕುಳಿತು ಮಾಡಲು ಇನ್ನೇನೂ ಕೆಲಸವಿಲ್ಲ" ಎಂದೆ.

"ಆದರೆ ನಾವು ಕಸೂತಿ ಕೆಲಸಕ್ಕೆ ನಮ್ಮ ಜನಾನಾ ಸದಸ್ಯರನ್ನು ನಂಬುವುದಿಲ್ಲ ! ಗಂಡಸರಿಗೆ ಸೂಜಿಯ ತೂತಿನಿಂದ ದಾರ ಪೋಣಿಸುವುದಕ್ಕೂ ತಾಳ್ಮೆಯಿರುವುದಿಲ್ಲ" ಎಂದಳು ಸಾರಾ ನಗುತ್ತಾ.

ಟೀಪಾಯಿಯ ಮೇಲೆ ಹಾಸಿದ್ದ ವಿಭಿನ್ನ ರೀತಿಯ ಕಸೂತಿ ಕೆಲಸದ ಹಾಸುಗಳತ್ತ ನೋಡುತ್ತಾ, "ಈ ಎಲ್ಲಾ ಕಸೂತಿಯನ್ನು ನೀನು ಹಾಕಿದ್ದೇ?" ಎಂದು ಕೇಳಿದೆ.

"ಹೌದು."

"ಈ ಎಲ್ಲಾ ಕೆಲಸಕ್ಕೆ ನಿನಗೆ ಸಮಯ ಎಲ್ಲಿ ? ನೀನು ಕಛೇರಿಯ ಕೆಲಸವನ್ನೂ ಮಾಡಬೇಕಲ್ಲ ?"

"ಹೌದು, ನಾನು ಪ್ರಯೋಗಶಾಲೆಯಲ್ಲಿ ಇಡೀ ದಿನವನ್ನು ಕಳೆಯುವುದಿಲ್ಲ. ನಾನು ನನ್ನ ಕೆಲಸವನ್ನು ಎರಡೇ ಗಂಟೆಗಳಲ್ಲಿ ಮುಗಿಸಿಬಿಡುತ್ತೇನೆ.

"ಎರಡೇ ಗಂಟೆಗಳಲ್ಲಿ ನೀನು ಹೇಗೆ ನಿಭಾಯಿಸುತ್ತೀಯ ? ನಮ್ಮ ದೇಶದಲ್ಲಿ ಅಧಿಕಾರಿಗಳು, ನ್ಯಾಯಾಧೀಶರು, ಇನ್ನಿತರ ರೆಲ್ಲರೂ ದಿನದ ಏಳುಗಂಟೆ ಕೆಲಸ ಮಾಡುತ್ತಾರೆ."

"ಕೆಲವರು ಕೆಲಸ ಮಾಡುತ್ತಿದ್ದುದನ್ನು ನೋಡಿದ್ದೇನೆ. ಆದರೆ ಅವರು ಏಳು ಗಂಟೆಯೂ ಕೆಲಸ ಮಾಡುತ್ತಾರೆಂದು ತಿಳಿದಿದ್ದೀಯಾ?"

"ಖಂಡಿತವಾಗಿಯೂ ಮಾಡುತ್ತಾರೆ !"

"ಇಲ್ಲ, ಪ್ರೀತಿಯ ಸುಲ್ತಾನ, ಅವರು ಮಾಡುವುದಿಲ್ಲ. ಅವರು ತಮ್ಮ ಸಮಯವನ್ನು ಸಿಗರೇಟ್ ಸೇದುವುದರಲ್ಲಿ ಕಳೆಯುತ್ತಾರೆ. ಅವರು ತಮ್ಮ ಕೆಲಸದ ಬಗ್ಗೆ ಮಾತನಾಡುವುದು ಹೆಚ್ಚು, ನಿಜವಾಗಲೂ ಕೆಲಸ ಮಾಡುವುದು ಕಡಿಮೆ. ಒಂದು ಸಿಗರೇಟು ಸೇದಿ ಹರಟೆ ಹೊಡೆಯಲು ಅರ್ಧ ಗಂಟೆಯ ಸಮಯ ಎಂದುಕೊಳ್ಳೋಣ. ಒಬ್ಬ ವ್ಯಕ್ತಿ ದಿನಕ್ಕೆ ಹನ್ನೆರಡು ಸಿಗರೇಟುಗಳನ್ನು ಸೇದಿದರೆ ದಿನಕ್ಕೆ ಆರು ಗಂಟೆಗಳ ಕಾಲವನ್ನು ಧೂಮಪಾನಕ್ಕೆ ವ್ಯಯಿಸಿದಂತಾಗುತ್ತದೆ. ಅಲ್ಲವೇ ?"

ನಂತರ ನಾವಿಬ್ಬರೂ ಹಲವಾರು ವಿಷಯಗಳ ಬಗ್ಗೆ ಚರ್ಚೆ ಮಾಡಿದೆವು. ಸಾರಾಳ ನಾಡಿನಲ್ಲಿ ಅವರು ಯಾವುದೇ ರೀತಿಯ ಸಾಂಕ್ರಾಮಿಕ ರೋಗಗಳಿಗೆ ತುತ್ತಾಗುವುದಿಲ್ಲ, ನಾವು ಅನುಭವಿಸುವಂತೆ ಸೊಳ್ಳೆಗಳ ಕಡಿತವನ್ನು ಅನುಭವಿಸುವುದಿಲ್ಲವೆಂದು ತಿಳಿಯಿತು. 'ಪ್ರಮೀಳಾ ರಾಜ್ಯ'ದಲ್ಲಿ ಈ ಅಪರೂಪದ ಘಟನೆಗಳನ್ನು ಹೊರತುಪಡಿಸಿದಂತೆ ಯಾವುದೇ ವ್ಯಕ್ತಿಯೂ ಸಹ ಯೌವನದಲ್ಲಿ ಸಾವಿಗೀಡಾಗುವುದಿಲ್ಲವೆಂದು ತಿಳಿದು ಆಶ್ಚರ್ಯವಾಯಿತು.

"ನೀನು ನಮ್ಮ ಅಡುಗೆಮನೆಯನ್ನು ನೋಡುತ್ತೀಯಾ ?" ಆಕೆ ಕೇಳಿದಳು.

"ಖಂಡಿತವಾಗಿಯೂ" ಎಂದೆ ನಾನು. ಅಡುಗೆಮನೆ ನೋಡಲು ಒಳಗೆ ಹೋದೆವು. ಆಗ ಅಲ್ಲಿನ ಗಂಡಸರೆಲ್ಲರನ್ನೂ ಅವರ ಕೆಲಸಗಳಿಂದ ಬಿಡುಗಡೆಮಾಡಿ ಹೊರಗೆ ಕಳಿಸಲಾಗಿತ್ತು. ಸುಂದರವಾದ ತರಕಾರಿ ತೋಟದ ನಡುವೆ ಅಡುಗೆಮನೆ ಇತ್ತು. ಪ್ರತಿಯೊಂದು ಬಳ್ಳಿಯೂ ಟೊಮ್ಯಾಟೊವಿನ ಪ್ರತಿಯೊಂದು ಗಿಡವೂ ಆಭರಣದಂತೆ ಕಂಗೊಳಿಸುತ್ತಿತ್ತು. ಅಡುಗೆಮನೆಯಲ್ಲಿ ಹೊಗೆಯಾಗಲಿ, ಚಿಮಣಿಯಾಗಲಿ ಕಾಣಿಸಲಿಲ್ಲ. ಅದು ಶುಭ್ರ ಹಾಗೂ ಪ್ರಕಾಶಮಾನವಾಗಿತ್ತು. ಅದರ ಕಿಟಕಿಗಳು ಹೂಗಳಿಂದ ಶೃಂಗರಿಸಲ್ಪಟ್ಟಿದ್ದವು. ಅಲ್ಲಿ ಇದ್ದಿಲಿನ ಅಥವಾ ಬೆಂಕಿಯ ಯಾವ ಕುರುಹುಗಳೂ ಇರಲಿಲ್ಲ.

"ನೀವು ಹೇಗೆ ಅಡುಗೆ ಮಾಡುತ್ತೀರಿ ?" ಎಂದು ಕೇಳಿದೆ.

"ಘನೀಕೃತ ಸೂರ್ಯನ ಶಾಖ ಹರಿದು ಬರುವ ಪೈಪನ್ನು ತೋರಿಸುತ್ತಾ, 'ಸೂರ್ಯನ ಶಾಖದಿಂದ' ಎಂದಳಾಕೆ. ನಂತರ ಅಡುಗೆಯನ್ನು ಮಾಡುತ್ತಾ, ಅದರ ವಿಧಾನವನ್ನು ವಿವರಿಸಿದಳು.

"ಸೂರ್ಯನ ಶಾಖವನ್ನು ಹೇಗೆ ಸಂಗ್ರಹಿಸಿ ಕೂಡಿಡುತ್ತೀರಿ?" ಎಂದು ಆಶ್ಚರ್ಯದಿಂದ ಕೇಳಿದೆ.

"ನಮ್ಮ ಇತಿಹಾಸವನ್ನು ಸ್ವಲ್ಪ ವಿವರಿಸುತ್ತೇನೆ. ಸುಮಾರು ಮೂವತ್ತು ವರ್ಷಗಳ ಹಿಂದೆ, ಅಂದರೆ ನಮ್ಮ ಇಂದಿನ ರಾಣಿಯವರು ಹದಿಮೂರು ವರ್ಷದವರಾಗಿದ್ದಾಗ ಪೂರ್ವಜರಿಂದ ಅಧಿಕಾರವನ್ನು ಪಡೆದುಕೊಂಡರು. ಆಕೆ ಹೆಸರಿಗೆ ಮಾತ್ರ ರಾಣಿಯಾಗಿದ್ದರು. ಪ್ರಧಾನ ಮಂತ್ರಿಗಳೇ ನಿಜವಾಗಿಯೂ ದೇಶವನ್ನು ಆಳುತ್ತಿದ್ದರು."



"ಮಹಾರಾಣಿಯವರಿಗೆ ವಿಜ್ಞಾನವೆಂದರೆ ಬಹಳ ಇಷ್ಟ. ಆದುದರಿಂದ ಅವರು ಎಲ್ಲಾ ಮಹಿಳೆಯರು ವಿದ್ಯಾವಂತರಾಗಬೇಕೆಂದು ಆಜ್ಞೆಯನ್ನು ಹೊರಡಿಸಿದರು. ಅದಕ್ಕೆ ಪೂರಕವಾಗಿ ಸರ್ಕಾರದ ನೆರವಿನಿಂದ ಹಲವಾರು ಬಾಲಕಿಯರ ಶಾಲೆಗಳನ್ನು ತೆರೆಯಲಾಯಿತು. ಮಹಿಳೆಯರಿಗೆ ಶಿಕ್ಷಣ ದೊರೆಯುವಂತಾಯಿತು. ಬಾಲ್ಯವಿವಾಹ – ಬಹಳ ಬೇಗ ಮದುವೆಯಾಗು ವುದನ್ನು ನಿಲ್ಲಿಸಲಾಯಿತು. ಮಹಿಳೆಗೆ ಇಪ್ಪತ್ತೊಂದು ವರ್ಷಗಳಾಗುವುದಕ್ಕಿಂತ ಮುಂಚೆ ಮದುವೆಗೆ ಅವಕಾಶ ನೀಡುತ್ತಿರಲಿಲ್ಲ. ಈ ಎಲ್ಲಾ ಬದಲಾವಣೆಗಳು ಬರುವುದಕ್ಕಿಂತ ಮುಂಚೆ ನಮ್ಮನ್ನು ಪರ್ದಾಗಳಲ್ಲಿ ಇಡಲಾಗಿತ್ತು."

"ಹಾಗಾದರೆ ಈ ಬದಲಾವಣೆ ಹೇಗೆ ಬಂತು ?" ನಾನು ಆಶ್ಚರ್ಯದಿಂದ ಕೇಳಿದೆ.

"ಸಾಧ್ಯವಾಯಿತು, ಆದರೆ ಪ್ರತ್ಯೇಕತೆಯು ಹಾಗೆಯೇ ಉಳಿಯಿತು. ಕೆಲವೇ ವರ್ಷಗಳಲ್ಲಿ ನಮಗೆ ಪ್ರತ್ಯೇಕ ವಿಶ್ವವಿದ್ಯಾನಿಲಯಗಳು ಸ್ಥಾಪನೆಯಾದವು. ಅಲ್ಲಿ ಯಾವ ಪುರುಷರಿಗೂ ಪ್ರವೇಶವಿರಲಿಲ್ಲ."

ನಮ್ಮ ರಾಣಿಯವರು ವಾಸಿಸುವ

ರಾಜಧಾನಿಯಲ್ಲಿ ಎರಡು ವಿಶ್ವವಿದ್ಯಾಲಯಗಳಿವೆ. ಅದರಲ್ಲಿ ಒಂದು ವಿಶ್ವವಿದ್ಯಾನಿಲಯವು ಹಲವಾರು ಪೈಪುಗಳನ್ನು ಜೋಡಿಸಿರುವ ಈ ಅದ್ಭುತ ಬಲೂನ್ ಅನ್ನು ಕಂಡುಹಿಡಿಯಿತು. ಆ ಬಲೂನುಗಳು ಮೋಡಗಳ ಆಚೆ ಹಾರಾಡುವಂತೆ ವ್ಯವಸ್ಥೆ ಮಾಡಿಕೊಂಡು, ವಾತಾವರಣದಿಂದ ತಮಗಿಷ್ಟ ಬಂದಷ್ಟು ನೀರನ್ನು ಪಡೆಯುತ್ತವೆ. ಈ ರೀತಿ ವಾತಾವರಣದಿಂದ ನಿರಂತರವಾಗಿ ನೀರನ್ನು ಸಂಗ್ರಹಿಸುವುದರಿಂದ ಮೋಡಗಳು ಸೃಷ್ಟಿಯಾಗುವುದನ್ನು ತಡೆಹಿಡಿಯ ಲಾಗಿದೆ. ವಿಶ್ವವಿದ್ಯಾನಿಲಯದ ಚತುರೆಯಾದ ಮಹಿಳಾ ಪ್ರಾಂಶುಪಾಲರು, ಈ ರೀತಿ ಮಾಡುವು ದರಿಂದ ಮಳೆ ಹಾಗೂ ಪ್ರವಾಹವನ್ನು ನಿಲ್ಲಿಸಿದ್ದಾರೆ."

"ನಿಜವಾಗಿಯೂ ! ಇಲ್ಲಿ ಕೆಸರು ಯಾಕಿಲ್ಲ ಎಂಬುದು ಈಗ ಅರ್ಥವಾಯಿತು. ಆದರೆ ಈ ಪೈಪುಗಳಲ್ಲಿ ನೀರು ಸಂಗ್ರಹಿಸಲು ಹೇಗೆ ಸಾಧ್ಯ ವಾಯಿತು ಎನ್ನುವುದು ಅರ್ಥವಾಗುತ್ತಿಲ್ಲ." ಅದರ ವಿಧಾನಕ್ರಮವನ್ನು ಆಕೆ ನನಗೆ ವಿವರಿಸಿದಳು. ನನಗೆ ವಿಜ್ಞಾನದ ತಿಳುವಳಿಕೆ ಅಷ್ಟು ಇಲ್ಲದೇ ಇದ್ದುದರಿಂದ ನನಗೆ ಅರ್ಥವಾಗಲಿಲ್ಲ. ಇದರ ವಿಷಯ ತಿಳಿಯು ತ್ತಿದ್ದಂತೆಯೇ ಮತ್ತೊಂದು ವಿಶ್ವವಿದ್ಯಾನಿಲಯದವರಿಗೆ ವಿಪರೀತ ಸ್ಪರ್ಧಾಮನೋಭಾವ ಉಂಟಾಗಿ, ತಾವೂ ಅತ್ಯದ್ಭುತವಾದದ್ದನ್ನು ಕಂಡುಹಿಡಿಯಬೇಕೆಂದು ಪಣತೊಟ್ಟರು. ಅದರಂತೆಯೇ, ತಮಗೆ ಬೇಕಾದಷ್ಟು ಸೂರ್ಯನ ಶಾಖವನ್ನು ಸಂಗ್ರಹಿಸುವ ಸಾಧನವನ್ನು ಕಂಡುಹಿಡಿದರು. ಸೂರ್ಯನ ಶಾಖವನ್ನು ಸಂಗ್ರಹಿಸಿಟ್ಟು ಅವಶ್ಯಕತೆ ಇರುವವರಿಗೆ ವಿತರಿಸಲಾಗುವುದು."

"ಮಹಿಳೆಯರು ವೈಜ್ಞಾನಿಕ ಸಂಶೋಧನೆಗಳಲ್ಲಿ ತೊಡಗಿದ್ದಾಗ, ಈ ದೇಶದ ಪುರುಷರು ತಮ್ಮ ಮಿಲಿಟರಿ ಶಕ್ತಿಯನ್ನು ಹೆಚ್ಚಿಸಿಕೊಳ್ಳುವಲ್ಲಿ ತೊಡಗಿದ್ದರು. ಮಹಿಳಾ ವಿಶ್ವವಿದ್ಯಾನಿಲಯಗಳು ವಾತಾವರಣದಿಂದ ನೀರನ್ನು ಸಂಗ್ರಹಿಸುವ ಮತ್ತು ಸೂರ್ಯನ ಶಾಖವನ್ನು ಸಂಗ್ರಹಿಸಿಡುವ ಸಂಶೋಧನೆಯನ್ನು ಮಾಡಿವೆ ಎಂದು ತಿಳಿದಾಗ ಗಂಡಸರು ನಕ್ಕು, 'ಸೊಗಸು ಕನಸು' ಎಂದು ವಿನೋದ ಮಾಡಿದರು."

"ನಿಮ್ಮ ಸಾಧನೆಗಳು ಅದ್ಭುತ ! ಆದರೆ ನಿಮ್ಮ ದೇಶದ ಪುರುಷರನ್ನು ಜನಾನಾದೊಳಗೆ ಹೇಗೆ ಸೇರಿಸಿದಿರಿ? ಮೊದಲು ಅವರನ್ನು ಕೂಡಿಹಾಕಿದಿರಾ?"

"ಇಲ್ಲ !"

"ಅವರಾಗಿಯೆ ತಮ್ಮ ಸ್ವತಂತ್ರ ಜೀವನವನ್ನು ನಾಲ್ಕು ಗೋಡೆಗಳ ಮಧ್ಯೆ ಜನಾನಾದೊಳಗೆ ಉಳಿಸಿಕೊಳ್ಳಲು ಬಯಸಿರಲಿಕ್ಕಿಲ್ಲ ಅಲ್ಲವೇ ? ಅವರ ಮೇಲೆ ಯಾರಾದರೂ ಬಲಪ್ರಯೋಗಿಸಿರಬಹುದು."

"ಹೌದು. ಅವರ ಮೇಲೆ ಬಲಪ್ರಯೋಗವಾಗಿದೆ."

"ಯಾರಿಂದ ? ಯಾರಾದರೂ ಮಹಿಳಾ ಯೋಧೆಯೇ ಆಗಿರಬಹುದು !"

"ಇಲ್ಲ, ಶಸ್ತ್ರಾಸ್ತ್ರಗಳಿಂದ ಅಲ್ಲ !"

"ಹೌದು, ಹಾಗಾಗಲು ಸಾಧ್ಯವಿಲ್ಲ, ಏಕೆಂದರೆ ಪುರುಷರ ಕೈಗಳು ಮಹಿಳೆಯರ ಕೈಗಳಿಗಿಂತ ಪ್ರಬಲವಾದವುಗಳು. ಮತ್ತೆ ಹೇಗೆ ?"

"ಬುದ್ಧಿಯಿಂದ !"

## ನಮನ...



ನಾಡಿನ ಹೆಸರಾಂತ ಸಾಹಿತಿ, ಜನಪರ ಚಿಂತಕ, ಪ್ರಗತಿಪರ ಚಳುವಳಿಗಳಲ್ಲಿ ಸಕ್ರಿಯರಾಗಿದ್ದ ಮಂಡ್ಯದ ಶ್ರೀ ಎಚ್. ಎಲ್. ಕೇಶವಮೂರ್ತಿ ನಿಧನರಾಗಿದ್ದಾರೆ. ನಾಡಿನ ಪ್ರಗತಿಪರ ಪತ್ರಿಕೆ 'ಗೌರಿ ಲಂಕೇಶ್' ಹಾಗೂ 'ಹೊಸತು' ಪತ್ರಿಕೆಗೆ ನಿರಂತರವಾಗಿ ಬರೆಯುತ್ತಿದ್ದ ಸ್ನೇಹಜೀವಿ ಎಚ್. ಎಲ್. ಕೆ. ಅವರ ನಿಧನ ಜನಪರ ಚಳುವಳಿಗೆ ದೊಡ್ಡ ನಷ್ಟ. ಎಚ್.ಎಲ್.ಕೆ. ನಿಧನಕ್ಕೆ 'ಹೊಸತು' ಹಾಗೂ 'ನವಕರ್ನಾಟಕ' ಬಳಗ ನೋವಿನ ನಮನ ಸಲ್ಲಿಸುತ್ತದೆ. – ಸಂ.

"ಮಹಿಳೆಯರ ಮಿದುಳಿಗಿಂತ ಪುರುಷರ ಮಿದುಳು ದೊಡ್ಡದು ಹಾಗೂ ಭಾರವಾದುದು ಅಲ್ಲವೇ ?"

"ಹೌದು, ಆದರೇನಂತೆ ? ಒಬ್ಬ ಪುರುಷನ ಮಿದುಳಿಗಿಂತ ದೊಡ್ಡದು ಹಾಗೂ ಭಾರವಾದ ಮಿದುಳನ್ನು ಆನೆಯು ಹೊಂದಿದೆ. ಆದರೂ ಮನುಷ್ಯರು ಆನೆಯನ್ನು ಸೆರೆಹಿಡಿದು ತಮಗಿಷ್ಟ ಬಂದ ರೀತಿಯಲ್ಲಿ ಅವುಗಳನ್ನು ದುಡಿಸಿಕೊಳ್ಳುತ್ತಾರೆ."

"ಸರಿಯಾಗಿ ಹೇಳಿದೆ. ಆದರೆ ಇದು ಸಾಧ್ಯವಾಗಿದ್ದು ಹೇಗೆ ಎಂದು ತಿಳಿದುಕೊಳ್ಳಲು ಕಾತುರಳಾಗಿದ್ದೇನೆ. ದಯವಿಟ್ಟು ತಿಳಿಸು."

"ಮಹಿಳೆಯರ ಮಿದುಳು ಪುರುಷರ ಮಿದುಳಿಗಿಂತ ಚುರುಕಾದದ್ದು. ಹತ್ತು ವರುಷಗಳ ಹಿಂದೆ, ಯಾವಾಗ ಒಬ್ಬ ಮಿಲಿಟರಿ ಅಧಿಕಾರಿಯೊಬ್ಬರು ನಮ್ಮ ವೈಜ್ಞಾನಿಕ ಸಂಶೋಧನೆಗಳನ್ನು ಸೊಗಸಾದ ಕನಸು ಎಂದು ಹೇಳಿದ್ದರೋ, ಅಂದಿನಿಂದಲೇ ಕೆಲ ಯುವತಿಯರು ಇದಕ್ಕೆ ಸರಿಯಾದ ಪ್ರತಿಕ್ರಿಯೆ ನೀಡಬೇಕು ಎಂದು ಕಾಯುತ್ತಿದ್ದರು. ಆದರೆ ಇಬ್ಬರೂ ಮಹಿಳಾ ಪ್ರಾಂಶುಪಾಲರು ಅವರನ್ನು ತಡೆದು, ಕೇವಲ ಮಾತಿನಿಂದಲ್ಲದೆ ಕೃತಿಯಿಂದ ಉತ್ತರ ನೀಡಬೇಕು ಎಂದರು. ಉತ್ತರ ನೀಡುವ ಅವಕಾಶಕ್ಕಾಗಿ ಬಹಳ ದಿನ ಕಾಯಬೇಕಾಗಿ ಬರಲಿಲ್ಲ."

"ಅದ್ಭುತ !" ಸಂತೋಷದಿಂದ ಚಪ್ಪಾಳೆ ತಟ್ಟಿದೆ. "ಅರ್ಥವಾಗಲಿಲ್ಲ ?"

"ಪಕ್ಕದ ದೇಶದಿಂದ ಕೆಲವು ವ್ಯಕ್ತಿಗಳು ಬಂದು ನಮ್ಮ ದೇಶದಲ್ಲಿ ಆಶ್ರಯ ಪಡೆದಿದ್ದರು. ಅವರು ರಾಜಕೀಯ ಅಪರಾಧವನ್ನು ಎಸಗಿದವರಾಗಿದ್ದರು. ಜನತೆಗೆ ಒಳ್ಳೆಯ ಆಡಳಿತ ಕೊಡುವ ಬಗ್ಗೆ ಯೋಚಿಸದೆ, ಕೇವಲ ತನ್ನ ಅಧಿಕಾರಕ್ಕಾಗಿ ಹವಣಿಸುತ್ತಿದ್ದ ಆ ದೇಶದ ರಾಜ, ರಾಜಕೀಯ ಅಪರಾಧಿಗಳನ್ನು ವಾಪಸ್ ತನ್ನ ವಶಕ್ಕೆ ನೀಡಬೇಕೆಂದು ನಮ್ಮ ರಾಣಿಯನ್ನು ಕೇಳಿಕೊಂಡ. ರಾಜಕೀಯ ನಿರಾಶ್ರಿತರನ್ನು ಹಸ್ತಾಂತರಿಸುವುದು ತತ್ವಕ್ಕೆ ವಿರುದ್ಧವಾದುದೆಂದು ಆಕೆ ನಿರಾಕರಿಸಿದಳು. ಈ ಕಾರಣಕ್ಕಾಗಿ ಅಲ್ಲಿನ ರಾಜ ನಮ್ಮ ದೇಶದ ಮೇಲೆ ಯುದ್ಧ ಸಾರಿದ.

ತತ್‌ಕ್ಷಣ ನಮ್ಮ ಮಿಲಿಟರಿ ಅಧಿಕಾರಿಗಳು ವೈರಿಗಳನ್ನು ಎದುರಿಸಲು ಸಿದ್ಧರಾದರು. ಶತ್ರುಗಳ ಸೈನ್ಯ ಬಲಿಷ್ಠವಾಗಿತ್ತು. ನಿಸ್ಸಂಶಯವಾಗಿ ನಮ್ಮ ಸೈನಿಕರು ಧೈರ್ಯ, ಸಾಹಸಗಳಿಂದ ಕಾದಾಡಿದರು. ಆದರೂ ಶತ್ರುಸೈನ್ಯ, ನಮ್ಮ ದೇಶದ ಒಳಗೆ ಮುನ್ನುಗ್ಗುತ್ತಲೇ ಇತ್ತು.

ಹದಿನಾರು ವರ್ಷದ ಯುವಕನನ್ನೂ ಬಿಡದೆ ಎಲ್ಲಾ ಗಂಡಸರು ಯುದ್ಧಭೂಮಿಗೆ ತೆರಳಿದ್ದರು. ನಮ್ಮ ಬಹುತೇಕ ಯೋಧರು ಕೊಲ್ಲಲ್ಪಟ್ಟರು. ಉಳಿದ ಸೈನಿಕರು ಯುದ್ಧ ಭೂಮಿಯಿಂದ ಪಲಾಯನ ಮಾಡಿದರು. ಹಾಗಾಗಿ ಶತ್ರು ಸೈನ್ಯ ರಾಜಧಾನಿಯಿಂದ ಇಪ್ಪತ್ತೈದು ಮೈಲಿ ದೂರದವರೆಗೆ ಬಂದು ತಲುಪಿತು.

ನಮ್ಮ ಮಾತೃಭೂಮಿಯನ್ನು ಹೇಗೆ ರಕ್ಷಿಸಿ ಕೊಳ್ಳಬೇಕು ಎಂದು ಆಲೋಚಿಸಲು ಬುದ್ಧಿವಂತ ಮಹಿಳೆಯರು ರಾಣಿಯವರ ಅರಮನೆಯಲ್ಲಿ ಸಭೆ ಸೇರಿದರು. ಕೆಲವರು ಯೋಧರಂತೆ ಹೋರಾಡಬೇಕು ಎಂದರು. ಕೆಲವರು ಅದನ್ನು ಆಕ್ಷೇಪಿಸುತ್ತಾ, ಖಡ್ಗ ಮತ್ತು ಬಂದೂಕಿನಿಂದ ಹೋರಾಡುವ ತರಬೇತಿ ಮಹಿಳೆಯರಿಗಿಲ್ಲದಿರುವುದರಿಂದ ಮತ್ತು ಯಾವುದೇ ಆಯುಧವನ್ನು ಉಪಯೋಗಿಸಿ ಅಭ್ಯಾಸವಿಲ್ಲದೇ ಇರುವುದರಿಂದ ಇದು ಸಾಧ್ಯವಿಲ್ಲವೆಂದರು. ದೈಹಿಕ ವಾಗಿ ತಾವು ಬಹಳ ದುರ್ಬಲರಾಗಿದ್ದೇವೆ ಎಂದು ಇನ್ನೂ ಕೆಲವರು ವ್ಯಥೆಯಿಂದ ಹೇಳಿಕೊಂಡರು.

"ಕೇವಲ ದೈಹಿಕ ದುರ್ಬಲತೆಯಿಂದ ನಮ್ಮ ದೇಶವನ್ನು ಉಳಿಸಿಕೊಳ್ಳಲು ಸಾಧ್ಯವಿಲ್ಲವೇ ? ಹಾಗಾದರೆ ಬುದ್ಧಿಯನ್ನು ಉಪಯೋಗಿಸಿ" ಎಂದು ರಾಣಿಯವರು ಹೇಳಿದರು.

ಕೆಲವು ಕ್ಷಣ ಅಲ್ಲಿ ಸ್ಮಶಾನ ಮೌನ ಆವರಿಸಿತು. "ದೇಶ ಹಾಗೂ ನನ್ನ ಗೌರವವನ್ನು ಉಳಿಸಿಕೊಳ್ಳಲಾಗ ದಿದ್ದರೆ ನಾನು ಆತ್ಮಹತ್ಯೆ ಮಾಡಿಕೊಳ್ಳಬೇಕಾಗುತ್ತದೆ" ಎಂದು ರಾಣಿಯವರು ಹೇಳಿದರು.

ಎರಡನೇ ವಿಶ್ವವಿದ್ಯಾನಿಲಯದ ಪ್ರಾಂಶುಪಾಲರು (ಸೂರ್ಯನ ಶಾಖವನ್ನು ಶೇಖರಿಸಿದವರು) ಚರ್ಚೆಯ ಸಮಯದಲ್ಲಿ ಗಂಭೀರವಾದ ಆಲೋಚನೆ ಯಲ್ಲಿ ಮಗ್ನರಾಗಿದ್ದರು. ನಾವು ಎಲ್ಲವನ್ನು ಕಳೆದುಕೊಂಡಿದ್ದರೂ ಸ್ವಲ್ಪ ಭರವಸೆ ಕಾಣುತ್ತಿದೆ. ಒಂದು ಉಪಾಯವನ್ನು ಪ್ರಯತ್ನಿಸುವುದಾಗಿಯೂ, ಅದು ಆಕೆಯ ಮೊದಲ ಹಾಗೂ ಕೊನೆಯ ಪ್ರಯತ್ನ ವಾಗಿರುತ್ತದೆಯೆಂದೂ, ಅದು ವಿಫಲವಾದರೆ, ಆತ್ಮಹತ್ಯೆಯಿಲ್ಲದೆ ಬೇರೆ ದಾರಿಯಿಲ್ಲವೆಂದು ಆಕೆ

ನುಡಿದರು. ಯಾವ ಪರಿಸ್ಥಿತಿ ಬಂದರೂ ಸರಿ ತಾವು ಮಾತ್ರ ಬಂಧಿಗಳಾಗುವುದಿಲ್ಲವೆಂದು ಅಲ್ಲಿ ನೆರೆದಿದ್ದ ಎಲ್ಲಾ ಮಹಿಳೆಯರು ಪ್ರತಿಜ್ಞೆ ಮಾಡಿದರು.

ಮಹಾರಾಣಿಯವರು ಎಲ್ಲರಿಗೂ ಧನ್ಯವಾದವನ್ನು ತಿಳಿಸುತ್ತಾ, ಮಹಿಳಾ ಪ್ರಾಂಶುಪಾಲರಿಗೆ ಅವರ ಯೋಜನೆಯನ್ನು ಜಾರಿಗೊಳಿಸುವಂತೆ ತಿಳಿಸಿದರು. ಆಗ ಪ್ರಾಂಶುಪಾಲರು ಎದ್ದುನಿಂತು, "ನಾವು ಹೊರಗೆ ಬರುವುದಕ್ಕಿಂತ ಮುಂಚಿತವಾಗಿ ಪುರುಷರೆಲ್ಲರೂ ಜನಾನಾದೊಳಗೆ ಪ್ರವೇಶಿಸಬೇಕು, ನಾವು ಪರ್ದಾ ಧರಿಸುವವರ ಪರವಾಗಿ ವಿನಂತಿ ಮಾಡುತ್ತಿದ್ದೇವೆ" ಎಂದರು. 'ಖಂಡಿತವಾಗಿಯೂ' ಎಂದರು ಮಹಾರಾಣಿಯವರು.

ದೇಶದ ಮರ್ಯಾದೆ ಹಾಗೂ ಸ್ವಾತಂತ್ರ್ಯ ರಕ್ಷಣೆಗಾಗಿ ಎಲ್ಲಾ ಗಂಡಸರು ಜನಾನಾದೊಳಗೆ ಪ್ರವೇಶಿಸಬೇಕೆಂದು ರಾಣಿಯವರ ಅಪ್ಪಣೆಯಾಯಿತು. ಯುದ್ಧದಿಂದ ದಣಿದಿದ್ದ, ಗಾಯಗೊಂಡಿದ್ದ ಪುರುಷರಿಗೆ ಅವರ ಆಜ್ಞೆ ವರದಾನವೇ ಆಯಿತು. ಪ್ರತಿಭಟನೆಯ ಒಂದು ಸ್ವರವೂ ಹೊರಬರಲಿಲ್ಲ. ಎಲ್ಲಾ ಪುರುಷರು ವಿಧೇಯರಾಗಿ ಜನಾನಾದೊಳಗೆ ಹೋದರು. ಈ ದೇಶಕ್ಕೆ ಭವಿಷ್ಯವಿಲ್ಲ ಎಂದು ಅವರಲ್ಲಿ ಬಲವಾದ ನಂಬಿಕೆಯುಂಟಾಗಿತ್ತು.

ಎರಡು ಸಾವಿರ ವಿದ್ಯಾರ್ಥಿನಿಯರೊಂದಿಗೆ ಮಹಿಳಾ ಪ್ರಾಂಶುಪಾಲರು ಯುದ್ಧಭೂಮಿಯತ್ತ ನಡೆದರು ಹಾಗೂ ಕ್ರೋಢೀಕರಿಸಿದ ಸೂರ್ಯನ ಕಿರಣಗಳನ್ನು ಶತ್ರುಸೈನ್ಯದ ಕಡೆಗೆ ನಿರ್ದೇಶಿಸಿದರು.

"ಅತ್ಯಂತ ಪ್ರಖರವಾದ ಬೆಳಕು ಹಾಗೂ ಶಾಖವನ್ನು ಶತ್ರು ಸೈನಿಕರು ತಡೆಯದಾದರು. ಸುಡುವ ಉರಿ ಶಾಖಗಳನ್ನು ಎದುರಿಸುವುದು ಹೇಗೆ ಎಂದು ತಿಳಿಯಲಾರದೆ ದಿಕ್ಕಾಪಾಲಾಗಿ ಓಡಲಾರಂಭಿಸಿದರು. ಬಂದೂಕು ಹಾಗೂ ಯುದ್ಧದ ಶಸ್ತ್ರಾಸ್ತ್ರಗಳನ್ನು ಬಿಟ್ಟು ಓಡಿದ ಸೈನಿಕರನ್ನು ಅದೇ ಸೂರ್ಯನ ಶಾಖದಿಂದ ಸುಟ್ಟು ಭಸ್ಮ ಮಾಡಲಾಯಿತು. ಅಂದಿನಿಂದ ಯಾರೂ ಕೂಡ ನಮ್ಮ ದೇಶದ ಮೇಲೆ ಆಕ್ರಮಣ ಮಾಡುವ ಧೈರ್ಯ ಮಾಡಿಲ್ಲ."

"ಮತ್ತೆ, ಅಂದಿನಿಂದ ನಿಮ್ಮ ದೇಶದ ಪುರುಷರು ಜನಾನಾದಿಂದ ಹೊರಗೆ ಬರುವ ಪ್ರಯತ್ನವನ್ನು ಮಾಡಲಿಲ್ಲವೇ ?"

"ಇಲ್ಲ, ಅವರು ಸ್ವತಂತ್ರರಾಗಲು ಬಯಸಿದರು. ಕೆಲವು ಪೊಲೀಸ್ ಅಧಿಕಾರಿಗಳು, ಜಿಲ್ಲಾ ಮ್ಯಾಜಿಸ್ಟ್ರೇಟ್‌ಗಳು ಮಹಾರಾಣಿಯವರಿಗೆ ಮಿಲಿಟರಿ ಅಧಿಕಾರಿಗಳು ತಮ್ಮ ಕರ್ತವ್ಯದಲ್ಲಿ ವಿಫಲರಾಗಿರುವುದರಿಂದ ಅವರಿಗೆ ಸೆರೆಮನೆವಾಸದ ಶಿಕ್ಷೆ ವಿಧಿಸುವುದು ನ್ಯಾಯ. ಆದರೆ ಅವರು ತಮ್ಮ ಕರ್ತವ್ಯವನ್ನು ಎಂದೂ ನಿರ್ಲಕ್ಷಿಸದೆ ಪಾಲಿಸಿರುವುದರಿಂದ ಅವರಿಗೆ ಶಿಕ್ಷೆಯನ್ನು ವಿಧಿಸದೆ ತಮ್ಮ ತಮ್ಮ ಕರ್ತವ್ಯಗಳಿಗೆ ಹಾಜರಾಗಲು ಅನುಮತಿ ನೀಡಬೇಕೆಂದು ಮನವಿಯನ್ನು ಮುಂದಿಟ್ಟರು."

"ಮಹಾರಾಣಿಯವರು ಒಂದು ಸುತ್ತೋಲೆಯನ್ನು ಹೊರಡಿಸಿ, ಅವರ ಸೇವೆಯ ಅಗತ್ಯತೆ ಇದ್ದರೆ ಖಂಡಿತವಾಗಿಯೂ ಅವರಿಗೆ ತಿಳಿಸಲಾಗುವುದು. ಆದರೆ ಅಲ್ಲಿಯವರೆಗೂ ಅವರು ಎಲ್ಲಿದ್ದಾರೋ ಅಲ್ಲಿಯೇ ಉಳಿಯಬೇಕು ಎಂದು ತಿಳಿಸಿದರು. ಈಗ ಅವರು ಜನಾನಾದೊಳಗೆ ಪ್ರತ್ಯೇಕವಾಗಿ ಉಳಿಯುವುದಕ್ಕೆ ಒಗ್ಗಿಕೊಂಡಿದ್ದಾರೆ. ಆದುದರಿಂದ ನಾವು ಈಗ ಆ ಅಂತಃಪುರವನ್ನು 'ಜನಾನಾ' ಎಂಬುದಕ್ಕೆ ಬದಲಾಗಿ 'ಮರ್ದಾನಾ' ಎಂದು ಕರೆಯುತ್ತೇವೆ."

"ಕಳವು ಅಥವಾ ಕೊಲೆಯಾದ ಸಂದರ್ಭದಲ್ಲಿ ಪೊಲೀಸರು, ಮ್ಯಾಜಿಸ್ಟ್ರೇಟರು ಇಲ್ಲದೆ ನೀವು ಹೇಗೆ ನಿಭಾಯಿಸಿಕೊಳ್ಳುತ್ತೀರಾ ?" ಎಂದು ಸಹೋದರಿ ಸಾರಾಳನ್ನು ಕೇಳಿದೆ.

"ಮರ್ದಾನಾ ಪದ್ಧತಿ ಜಾರಿಗೆ ಬಂದಾಗಿನಿಂದಲೂ ಸಹ ಯಾವ ಅಪರಾಧವಾಗಲಿ, ಪಾಪಕೃತ್ಯವಾಗಲಿ ನಡೆದಿಲ್ಲ. ಆದುದರಿಂದ ಅಪರಾಧಿಯನ್ನು ಹುಡುಕಲು ಪೊಲೀಸರ ಅವಶ್ಯಕತೆಯೇ ಬರುವುದಿಲ್ಲ ಹಾಗೂ ನ್ಯಾಯಾಂಗ ವಿಚಾರಣೆ ನಡೆಸಲು ಮ್ಯಾಜಿಸ್ಟ್ರೇಟರ ಅವಶ್ಯಕತೆಯೂ ಬರುವುದಿಲ್ಲ."

ನಾನೆಂದೆ, "ಖಂಡಿತವಾಗಿಯೂ ಬಹಳ ಒಳ್ಳೆಯದು, ಯಾರಾದರೂ ಅಪ್ರಾಮಾಣಿಕ ವ್ಯಕ್ತಿ ಇದ್ದರೆ ನೀವು ಅವರನ್ನು ಬಹಳ ಸುಲಭವಾಗಿ ಶಿಕ್ಷಿಸುತ್ತಿದ್ದಿರಿ. ಒಂದು ಹನಿ ರಕ್ತವನ್ನೂ ಸುರಿಸದೆ ನಿರ್ಧಾರಕ ಜಯವನ್ನು ಪಡೆದಿರುವ ನೀವು, ಅಪರಾಧವನ್ನೂ, ಅಪರಾಧಿಗಳನ್ನೂ ಬಹಳ ಸುಲಭವಾಗಿ ನಿಗ್ರಹಿಸಬಲ್ಲಿರಿ."

ನಂತರ ಆಕೆ "ಪ್ರಿಯ ಸುಲ್ತಾನ, ನೀನು ಇಲ್ಲಿ ಕುಳಿತುಕೊಳ್ಳುತ್ತೀಯಾ ಅಥವಾ ನನ್ನ ಪಾರ್ಲರಿಗೆ ಬರುತ್ತಿಯಾ ?" ಎಂದು ಕೇಳಿದಳು.

"ನಿಮ್ಮ ಅಡುಗೆಮನೆ ರಾಣಿಯ ಅಂತಃಪುರಕ್ಕಿಂತಲೂ ಏನೂ ಕಡಿಮೆಯಿಲ್ಲ!" ಎಂದು ನಗುತ್ತಾ ನಾನು ಉತ್ತರಿಸಿದೆ. "ಆದರೆ ನಾವು ಈಗಲೇ ಇಲ್ಲಿಂದ ಹೊರಡಬೇಕು. ನಿಮ್ಮನ್ನು ಇಷ್ಟು ಹೊತ್ತು ಇಲ್ಲಿ ಇರಿಸಿಕೊಂಡಿದ್ದರಿಂದ ಅವರ ಕರ್ತವ್ಯಕ್ಕೆ ಅಡ್ಡಿಯಾಗಿದ್ದು, ಸಭ್ಯ ಗೃಹಸ್ಥರು ನನಗೆ ಶಾಪ ಹಾಕುತ್ತಿರಬಹುದು" ಎಂದು ಸಾರಾ ತಮಾಷೆ ಮಾಡಿದಳು. ನಾವಿಬ್ಬರೂ ಮನಸಾರೆ ನಕ್ಕೆವು.

"ನಾನು ಹಿಂತಿರುಗಿ ಹೋದಮೇಲೆ, ಪುರುಷರು ಮರ್ದಾನಾಗಳಲ್ಲಿ ಇರುವುದು, ಮಕ್ಕಳನ್ನು ಪೋಷಿಸುವುದು, ಅಡಿಗೆ ಮಾಡುವುದರ ಜೊತೆಗೆ ಗೃಹಕೃತ್ಯಗಳನ್ನು ಮಾಡುವುದು, ಅತ್ಯಂತ ಸುಲಭವಾಗಿ ಪ್ರೆಶರ್ ಕುಕ್ಕರಿನಲ್ಲಿ ಅಡುಗೆ ಮಾಡುವುದು ಇವೆಲ್ಲವುಗಳ ಬಗ್ಗೆ, ಜೊತೆಗೆ ಪ್ರಮೀಳಾರಾಜ್ಯದ ಬಗ್ಗೆ, ಮಹಿಳೆಯರು ದೇಶವನ್ನು ಆಳುತ್ತಿರುವುದರ ಬಗ್ಗೆ ಹಾಗೂ ಸಾಮಾಜಿಕ ವಿಷಯಗಳನ್ನು ಚೆನ್ನಾಗಿ ತಮ್ಮ ಹತೋಟಿಯಲ್ಲಿ ಇಟ್ಟುಕೊಂಡಿರುವುದರ ಬಗ್ಗೆ ನಮ್ಮ ಮನೆಯವರೆಲ್ಲರಿಗೆ ಹಾಗೂ ಸ್ನೇಹಿತರಿಗೆ ತಿಳಿಸಿದರೆ ಅವರಿಗೆ

## ಒಂಟಿ....






ಆಗಸದಿ ರಂಗು ತುಂಬಿದ ಘಳಿಗೆ,
ಮನದಾಳದಿ ನೆನಪಿನಲಿ ಸೆಳೆಗೆ,
ಎಂದೋ ಪರಿಚಿತವಾಗಿ
ಸ್ನೇಹ ಹೂ ಗಾಳಿ ತೂರಿದ ಹಾಗೆ,
ಮಂಜು ಮುಸುಕಿದ ಪ್ರೀತಿ ಪಲಿಗೆ,
ನನಗೆ ನಾನೇ
ಅನರ್ಥವಾಗಿ
ನನ್ನ ಸಂದಿಗ್ಧತೆಗೆ
ನಿಮ್ಮೊಳಗನ್ನು ಕವನಿಸುವ
ಕವಿಯಳಲಿಗೆ
ನಿರ್ವಿಶೇಷದ ನೀರಸ
ಬಾಳಿಗೆ ಕ್ಯಾನವಾಸ
ರಂಗು ತುಂಬಲ್ಹೊರಟು
ನಾನೇ ಹರವಿದ
ಹಠದ ಬಲೆಯಲಿ ಸಿಕ್ಕು
ಕೊನೆಗೂ ನಾನೀಗ
ಒಂಟಿ-ಒಬ್ಬಂಟಿ !

**ಶೋಭಾ ಪ್ರಮೋದ್**
ಮನ್‌ಗಾವ್ ಪೋಸ್ಟ್ – ೪೦೨೧೦೪, ರಾಯಗಡ ಜಿಲ್ಲೆ, ಮಹಾರಾಷ್ಟ್ರ

ವಿನೋದವೆನಿಸಬಹುದು ಹಾಗೂ ಅತ್ಯಂತ ಆಶ್ಚರ್ಯವಾಗಬಹುದು" ಎಂದೆ.

"ಹೌದು. ನೀನು ನೋಡಿರುವ ಎಲ್ಲಾ ವಿಷಯಗಳನ್ನು ಅವರಿಗೆ ತಿಳಿಸು" ಸಾರಾ ನುಡಿದಳು.

"ನೀವು ನಿಮ್ಮ ವ್ಯವಸಾಯದ ಕೆಲಸವನ್ನು, ಭೂಮಿಯನ್ನು ಉಳುಮೆ ಮಾಡುವುದನ್ನು ಹಾಗೂ ಇನ್ನಿತರ ಕಠಿಣ ಕೆಲಸಗಳನ್ನು ಗಂಡಸರ ಪಾತ್ರವಿಲ್ಲದೆ ಹೇಗೆ ಮಾಡಿಕೊಳ್ಳುತ್ತಿದ್ದೀರಿ, ದಯವಿಟ್ಟು ತಿಳಿಸು."

"ವಿದ್ಯುಚ್ಛಕ್ತಿಯ ನೆರವಿನಿಂದ ಭೂಮಿಯಲ್ಲಿ ಉಳುಮೆ ಮಾಡಲಾಗುವುದು. ಇನ್ನಿತರ ಕಠಿಣ ಕೆಲಸ ಕಾರ್ಯಗಳಿಗೂ ಅದನ್ನೇ ಉಪಯೋಗಿಸುತ್ತೇವೆ. ನಮ್ಮಲ್ಲಿ ರೈಲು, ರಸ್ತೆ ಅಥವಾ ಪಾದಚಾರಿ ರಸ್ತೆಗಳು ಹೆಚ್ಚಾಗಿ ಇಲ್ಲ. ಆಕಾಶಯಾನಕ್ಕೆ ವಿದ್ಯುಚ್ಛಕ್ತಿಯನ್ನೇ ಬಳಸುತ್ತೇವೆ.

"ಓಹೋ ! ಆದುದರಿಂದ ಇಲ್ಲಿ ರಸ್ತೆ ಅಪಘಾತಗಳಾಗಲೀ, ರೈಲು ಅಪಘಾತಗಳಾಗಲೀ ಸಂಭವಿಸುವುದಿಲ್ಲ, ಅಲ್ಲವೇ ? ನಿಮಗೆ ಎಂದೂ ಮಳೆಯ ಅವಶ್ಯಕತೆ ಇದೆ ಎಂದೆನಿಸುವುದೇ ಇಲ್ಲವೇ ?" ಎಂದು ಆಕೆಯನ್ನು ಕೇಳಿದೆ.

"ನೀರಿನ ಬಲೂನುಗಳ ವ್ಯವಸ್ಥೆ ಮಾಡಿದಾಗಿನಿಂದ ಇದರ ಅವಶ್ಯಕತೆಯೆನಿಸಲೇ ಇಲ್ಲ. ಅಲ್ಲಿ ನೋಡು. ದೊಡ್ಡ ಬಲೂನು ಹಾಗೂ ಪೈಪುಗಳನ್ನು ಅಳವಡಿಸಲಾಗಿದೆ. ಅದರ ಸಹಾಯದಿಂದ ನಾವು ಎಷ್ಟು ಮಳೆ ನೀರು ಬೇಕಾದರೂ ಪಡೆದುಕೊಳ್ಳ ಬಹುದು. ನಾವು ಎಂದೂ ಸಹ ಪ್ರವಾಹದಿಂದಾಗಲಿ, ಚಂಡಮಾರುತದಿಂದಾಗಲಿ ನಷ್ಟ ಅನುಭವಿಸುವುದಿಲ್ಲ. ಪ್ರಕೃತಿಯನ್ನು ಎಷ್ಟರಮಟ್ಟಿಗೆ ಮಣಿಸಲು ಸಾಧ್ಯವೋ ಅಷ್ಟರವರೆಗೂ ಮಣಿಸಲು ಪ್ರಯತ್ನಪಡುತ್ತಿರುತ್ತೇವೆ. ನಾವು ಸದಾ ಕ್ರಿಯಾಶೀಲ ರಾಗಿರುವುದರಿಂದ ಮತ್ತೊಬ್ಬರೊಂದಿಗೆ ಕಾದಾಡಲು ಸಮಯವೇ ಇರುವುದಿಲ್ಲ. ನಮ್ಮ ರಾಣಿಯವರಿಗೆ ಸಸ್ಯಶಾಸ್ತ್ರದಲ್ಲಿ ಅತೀವ ಆಸಕ್ತಿ. ಆದುದರಿಂದ ಇಡೀ ದೇಶದಲ್ಲಿ ಅತ್ಯುತ್ತಮವಾದ ತೋಟಗಳನ್ನು ನಿರ್ಮಿಸುವ ಆಕಾಂಕ್ಷೆಯನ್ನು ಹೊಂದಿದ್ದಾರೆ."

"ಈ ಆಲೋಚನೆ ಅದ್ಭುತವಾಗಿದೆ. ನಿಮ್ಮ ಮುಖ್ಯ ಆಹಾರ ಏನು ?"

"ಹಣ್ಣುಗಳು."

"ಬೇಸಿಗೆಯ ಕಾಲದಲ್ಲಿ ನಿಮ್ಮ ದೇಶವನ್ನು ಹೇಗೆ ತಂಪಾಗಿರಿಸುತ್ತೀರಿ ? ಬೇಸಿಗೆ ಕಾಲದಲ್ಲಿ ಮಳೆ ಬಂದರೆ ನಾವು ಅದು ಸ್ವರ್ಗದಿಂದ ಹರಿಸಲ್ಪಟ್ಟಿದೆ ಎಂದು ಭಾವಿಸುತ್ತೇವೆ."

"ಬಿಸಿಲಿನ ಝಳವನ್ನು ಸಹಿಸಲಸಾಧ್ಯವಾದಾಗ, ಕೃತಕವಾದ ಕಾರಂಜಿಗಳಿಂದ ನೀರನ್ನು ಸಿಂಪಡಿಸಿಕೊಳ್ಳುತ್ತೇವೆ. ಚಳಿಗಾಲದಲ್ಲೂ ಕೋಣೆಗಳನ್ನು ಬೆಚ್ಚಗೆ ಇಡಲು ಸೂರ್ಯನ ಶಾಖವನ್ನು ಬಳಸಿಕೊಳ್ಳುತ್ತೇವೆ."

ನಂತರ ಆಕೆ ತನ್ನ ಬಚ್ಚಲು ಮನೆಯನ್ನು ತೋರಿಸಿದಳು. ಅದರ ಮೇಲ್ಚಾವಣಿಯನ್ನು ತೆಗೆದಿಡಬಹುದಾಗಿತ್ತು. ಆಕೆ ಬಯಸಿದಾಗಲೆಲ್ಲ ಮೇಲ್ಚಾವಣಿ ಯನ್ನು ತೆಗೆದಿಟ್ಟು (ಅದು ಒಂದು ಡಬ್ಬದ ಮುಚ್ಚಳದಂತಿತ್ತು) ಪೈಪಿನ ತಿರುವನ್ನು ತಿರುಗಿಸಿ ಸ್ನಾನ ಮಾಡಬಹುದಾಗಿದ್ದಿತು.

"ನೀವು ಅದೃಷ್ಟಶಾಲಿಗಳು" ಎಂದು ಉದ್ಗರಿಸಿದೆ. "ನಿಮಗೆ ಅವಶ್ಯಕತೆ ಎಂಬುದೇ ತಿಳಿದಿಲ್ಲ. ನಿಮ್ಮ ಧರ್ಮ ಯಾವುದು ಎಂದು ತಿಳಿದುಕೊಳ್ಳಬಹುದೇ ?"

"ಪ್ರೀತಿ ಹಾಗೂ ಸತ್ಯವೇ ನಮ್ಮ ಧರ್ಮದ ಆಧಾರ. ಪರಸ್ಪರರನ್ನು ಪ್ರೀತಿಯಿಂದ ಕಾಣುವುದು ಹಾಗೂ ಸತ್ಯವಂತರಾಗಿರುವುದು ನಮ್ಮ ಧಾರ್ಮಿಕ ಕರ್ತವ್ಯ. ಒಂದು ವೇಳೆ ಆಕೆ ಅಥವಾ ಆತ ಸುಳ್ಳು ನುಡಿದರೆ..."

"ಮರಣದಂಡನೆಯ ಶಿಕ್ಷೆಯೇ ?"

"ಇಲ್ಲ. ಮರಣದಂಡನೆಯಿಲ್ಲ. ದೇವರ ಸೃಷ್ಟಿಯನ್ನು ಅದರಲ್ಲೂ ಮನುಷ್ಯರನ್ನು ಕೊಲ್ಲುವುದರಲ್ಲಿ ನಾವು ಆನಂದವನ್ನು ಅನುಭವಿಸುವುದಿಲ್ಲ. ಎಲ್ಲರ ಒಳಿತಿಗಾಗಿ, ಸುಳ್ಳುಗಾರರನ್ನು ದೇಶವನ್ನು ಬಿಟ್ಟು ಹೋಗುವಂತೆ ಹಾಗೂ ಮತ್ತೆಂದೂ ಹಿಂದಿರುಗಿ ಬರದಂತೆ ಮಾಡಲಾಗುತ್ತದೆ.

"ತಪ್ಪು ಮಾಡಿದವರನ್ನು ಎಂದಿಗೂ ಕ್ಷಮಿಸುವುದಿಲ್ಲವೇ ?"

"ಕ್ಷಮಿಸುತ್ತೇವೆ. ಆದರೆ ಆ ವ್ಯಕ್ತಿ ಪ್ರಾಮಾಣಿಕವಾಗಿ ಪಶ್ಚಾತ್ತಾಪ ಪಟ್ಟರೆ ಮಾತ್ರ."

"ನೀವು ನಿಮ್ಮ ಹತ್ತಿರದ ಸಂಬಂಧದ ಪುರುಷರನ್ನು ಬಿಟ್ಟು ಇನ್ನಿತರ ಪುರುಷರನ್ನು ನೋಡಲು ಸಾಧ್ಯವಿಲ್ಲವೇ?"

"ಪವಿತ್ರವಾದ ಸಂಬಂಧಿಕರ ಹೊರತಾಗಿ ಇನ್ಯಾರನ್ನೂ ನೋಡಲು ಸಾಧ್ಯವಿಲ್ಲ."

ನಮ್ಮ ಬಳಗದಲ್ಲಿ ಪವಿತ್ರ ಸಂಬಂಧಗಳ ಮಿತಿ ಬಹಳ ಚಿಕ್ಕದು. ದೊಡ್ಡಪ್ಪ-ಚಿಕ್ಕಪ್ಪನ ಮಕ್ಕಳೂ ಸಹ ಪವಿತ್ರರಾಗಿರಲ್ಲ.

ಆದರೆ ನಮ್ಮದು ಬಹಳ ವಿಸ್ತಾರವಾದ ಬಳಗ, ದೂರದ ಸೋದರ ಸಂಬಂಧಿಯೂ ಸಹ ಸಹೋದರನಷ್ಟೇ ಪವಿತ್ರ.

"ಬಹಳ ಒಳ್ಳೆಯದು. ಪಾವಿತ್ರ್ಯತೆಯೇ ನಿಮ್ಮ ನಾಡಿನಲ್ಲಿ ಆಧಿಪತ್ಯ ನಡೆಸುತ್ತಿದೆ. ಇಷ್ಟೊಂದು ವಿವೇಕದಿಂದ, ದೂರದೃಷ್ಟಿಯಿಂದ ಈ ರೀತಿಯ ಆದೇಶಗಳನ್ನು ಹೊರಡಿಸಿರುವ ನಿಮ್ಮ ರಾಣಿಯವರನ್ನ ನೋಡಲು ಬಯಸುತ್ತೇನೆ."

"ಸರಿ ಹಾಗಾದರೆ" ಎಂದಳು ಸಹೋದರಿ ಸಾರಾ.

ಒಂದು ಚೌಕಾಕಾರದ ಹಲಗೆಯ ಮೇಲೆ ಕೆಲವೊಂದು ಕುರ್ಚಿಗಳನ್ನು ಕೂಡಿಸಿದಳು. ಆ ಹಲಗೆಗೆ ಮೃದುವಾದ ಹಾಗೂ ಚೆನ್ನಾಗಿ ಪಾಲಿಶ್ ಮಾಡಿದ ಎರಡು ಬಲೂನುಗಳನ್ನು ಜೋಡಿಸಿದಳು. ಆ ಬಲೂನುಗಳು ಏತಕ್ಕಾಗಿ ಎಂದು ಕೇಳಿದಾಗ, ಆಕೆ ಅದು ಹೈಡ್ರೋಜನ್ ಬಲೂನುಗಳು, ಅವು ಗುರುತ್ವಾಕರ್ಷಣೆಯ ಬಲದಿಂದ ಹೊರಬರಲು ಉಪಯೋಗಿಸಲ್ಪಡುತ್ತವೆ ಎಂದು ಉತ್ತರಿಸಿದಳು. ಗುರುತ್ವಾಕರ್ಷಣೆಯ ಬಲಕ್ಕೆ ಅನುಗುಣವಾಗಿ ಆ ಎರಡೂ ಬಲೂನುಗಳು ವಿಭಿನ್ನ ಸಾಮರ್ಥ್ಯವನ್ನು ಹೊಂದಿದ್ದವು. ನಂತರ ಆಕೆ ಗಾಳಿಯಲ್ಲಿ ಹೋಗುವ ಕಾರಿಗೆ ಎರಡು ರೆಕ್ಕೆಗಳ ಮಾದರಿಯ ವಿದ್ಯುಚ್ಛಕ್ತಿಯಿಂದ ಚಲಿಸುವ ಅಂಚುಗಳನ್ನು ಸೇರಿಸಿದಳು. ನಾವಿಬ್ಬರೂ ಆರಾಮವಾಗಿ ಅದರಲ್ಲಿ ಕುಳಿತುಕೊಂಡೆವು. ಆಗ ಆಕೆ ಅದರ ಗುಂಡಿಯನ್ನು ಒತ್ತಿದಳು. ರೆಕ್ಕೆಗಳು ತಿರುಗಲು ಪ್ರಾರಂಭವಾದವು. ಪ್ರತಿಕ್ಷಣವೂ ಅದರ ವೇಗ ಹೆಚ್ಚುತ್ತಲೇ ಇತ್ತು. ಪ್ರಾರಂಭದಲ್ಲಿ ಸುಮಾರು ಆರು ಅಥವಾ ಏಳು ಅಡಿಗಳಷ್ಟು ಎತ್ತರಕ್ಕೆ ಹೋಗಿ ನಂತರ ಹಾರಿದೆವು. ನನ್ನ ಅರಿವಿಗೆ ಬರುವುದಕ್ಕಿಂತ ಮುಂಚೆಯೇ ನಾವು ಚಲಿಸಲು ಪ್ರಾರಂಭಿಸಿದ್ದೆವು. ನಾವು ರಾಣಿಯ ತೋಟಕ್ಕೆ ತಲುಪಿದೆವು.

ಯಂತ್ರದ ಗುಂಡಿಯನ್ನು ತಿರುಗಿಸಿ, ಗಾಳಿಯಲ್ಲಿ ಹಾರುವ ಕಾರನ್ನು ಕೆಳಗಿಸಲಾಯಿತು. ಕಾರು ನೆಲವನ್ನು ಮುಟ್ಟುತ್ತಿದ್ದಂತೆಯೇ ಯಂತ್ರ ಕೆಲಸ ನಿಲ್ಲಿಸಿತು. ನಾವು ಕೆಳಗಿಳಿದು ಬಂದೆವು.

ರಾಣಿ ತನ್ನ ಪುಟ್ಟ ಮಗಳು (ನಾಲ್ಕು ವರ್ಷ ವಯಸ್ಸಿನವಳು) ಹಾಗೂ ಇನ್ನೊಬ್ಬ ಪರಿಚಾರಿಕೆಯೊಂದಿಗೆ ತೋಟದಲ್ಲಿ ತಿರುಗಾಡುತ್ತಿರುವುದನ್ನು ಮೇಲಿನಿಂದಲೇ ನೋಡಿದ್ದೆ.

"ನಮಸ್ಕಾರ, ನೀನು ಇಲ್ಲಿ !" ಸಹೋದರಿ ಸಾರಾಳನ್ನು ಕಂಡು ರಾಣಿ ಸಂತೋಷ ವನ್ನು ವ್ಯಕ್ತಪಡಿಸಿದಳು. ಸಹೋದರಿ ಸಾರಾ, ರಾಣಿಯವರಿಗೆ ನನ್ನ ಪರಿಚಯವನ್ನು ಮಾಡಿಕೊಟ್ಟಳು. ರಾಣಿಯವರು ಆತ್ಮೀಯವಾಗಿ ನನ್ನನ್ನು ಬರಮಾಡಿಕೊಂಡರು.

ಮಹಾರಾಣಿಯವರೊಂದಿಗೆ ಒಡನಾಟವನ್ನು ಬೆಳೆಸಿಕೊಂಡಿದ್ದರಿಂದ ಸಂತೋಷ ವಾಯಿತು. ಆಕೆಯೊಂದಿಗಿನ ಮಾತುಕತೆಯಿಂದ ನನಗೆ ತಿಳಿದುಬಂದ ವಿಷಯ ವೆಂದರೆ, ಆ ದೇಶದ ಜನರು ಬೇರೆ ದೇಶದವರೊಂದಿಗೆ ವ್ಯಾಪಾರ ಮಾಡಲು ಆಕೆಯದೇನೂ ಅಭ್ಯಂತರವಿಲ್ಲ. ಆದರೆ, ಮಹಿಳೆಯರನ್ನು ಜನಾನಾದೊಳಗೆ ಇಟ್ಟಿರುವ ದೇಶಗಳೊಂದಿಗೆ ವ್ಯಾಪಾರ ಕಷ್ಟ. ಅವರು ಇಲ್ಲಿ ಬಂದು ವ್ಯಾಪಾರ ಮಾಡಲು ಸಾಧ್ಯವಾಗುವುದಿಲ್ಲ. ಪುರುಷರಲ್ಲಿ ನೈತಿಕತೆ ಕೆಳಮಟ್ಟದಲ್ಲಿರುವುದರಿಂದ ಅವರೊಂದಿಗೆ ವ್ಯವಹರಿಸಲು ಬಯಸುವುದಿಲ್ಲ. ನಾವು ಬೇರೆಯವರ ಭೂಮಿಗಾಗಿ ಆಸೆಪಡುವುದಿಲ್ಲ. ಕೊಹಿನೂರ್‌ಗಿಂತಲೂ ಸಾವಿರಪಟ್ಟು ಹೆಚ್ಚು ಪ್ರಜ್ವಲಿಸುವ ವಜ್ರದ ತುಂಡಿಗಾಗಿ ಕಾದಾಡುವುದಿಲ್ಲ. ನಾವು ಜ್ಞಾನದ ಆಳವಾದ ಸಮುದ್ರದಲ್ಲಿ ಧುಮುಕಿ, ನಿಸರ್ಗ ಅಡಗಿಸಿಟ್ಟಿರುವ ಹರಳುಗಳಿಗಾಗಿ ಹುಡುಕಾಡುತ್ತೇವೆ. ನಿಸರ್ಗ ನೀಡಿರುವ ಕೊಡುಗೆಯನ್ನು ಅನುಭವಿಸುತ್ತೇವೆ."

ರಾಣಿಯವರಿಂದ ಬೀಳ್ಕೊಂಡ ನಂತರ ಪ್ರಖ್ಯಾತ ವಿಶ್ವವಿದ್ಯಾನಿಲಯಕ್ಕೆ ಭೇಟಿ ನೀಡಿದೆ. ಅಲ್ಲಿಯ ಪ್ರಯೋಗಾಲಯಗಳನ್ನು, ವೀಕ್ಷಣಾಲಯಗಳನ್ನು ಹಾಗೂ ಉತ್ಪಾದನೆಯ ಘಟಕಗಳನ್ನು ವೀಕ್ಷಿಸಿದೆ.

ಅತ್ಯಾಸಕ್ತ ಸ್ಥಳಗಳಿಗೆ ಭೇಟಿ ನೀಡಿದ ಬಳಿಕ ಮತ್ತೆ ಗಾಳಿಯಲ್ಲಿ ಹಾರುವ ಕಾರ್‌ನಲ್ಲಿ ಕುಳಿತೆವು. ಆದರೆ ಅದು ಚಲಿಸಲು ಪ್ರಾರಂಭಿಸಿದ ತಕ್ಷಣ ನಾನು ಅದರಿಂದ ಜಾರಿ ಬಿದ್ದು ಕನಸಿನಿಂದ ಹೊರಬಿದ್ದು ನನ್ನ ಕಣ್ಣುಗಳನ್ನು ತೆರೆದೆ. ನಾನು ನನ್ನ ಅದೇ ಆರಾಮ ಕುರ್ಚಿಯಲ್ಲಿ ಒರಗಿ ಕುಳಿತಿದ್ದೆ !


ಮೂಲ : **ಬೇಗಂ ರೊಕೈಯ್ಯ**

ಅನುವಾದ : **ಜಾಹಿದಾ ಶಿರೀನ್**

ನಂ. ೬೧, ೪ನೇ ಅಡ್ಡರಸ್ತೆ, ಅಶೋಕನಗರ, ಎನ್. ಆರ್. ಕಾಲೋನಿ

ಬೆಂಗಳೂರು – ೫೬೦ ೦೫೦

# ಮೀಸಲಾತಿ ಹೆಚ್ಚಳ : ಮೂಗಿಗೆ ತುಪ್ಪ ಸವರಿದಂತೆ

**ಡಾ॥ ಕೆ. ಎನ್. ದೊಡ್ಡಮನಿ**

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಶ್ರೇಯೋಭಿವೃದ್ಧಿಗಾಗಿ ಸರಕಾರಗಳು ಇದುವರೆಗೆ ಡಾ॥ ಬಿ. ಆರ್. ಅಂಬೇಡ್ಕರ್ ಅವರ ಜಯಂತಿ ಸಂದರ್ಭದಲ್ಲಿ ಹೊಸ ಹೊಸ ಕಾರ್ಯಕ್ರಮಗಳನ್ನು ಪ್ರಕಟಿಸುತ್ತ ಬಂದಿವೆ. ಈಗ ಪರಿಶಿಷ್ಟ ಸಮುದಾಯ ದವರಿಗಾಗಿ ಹಮ್ಮಿಕೊಳ್ಳುತ್ತಿರುವ ಮಹರ್ಷಿ ವಾಲ್ಮೀಕಿ ಜಯಂತಿ ಸಂದರ್ಭದಲ್ಲೂ ನೂತನ ಭರವಸೆಗಳು ಪ್ರಕಟಗೊಳ್ಳುತ್ತಿವೆ. ಅದೇ ಪ್ರಕಾರ ಈ ಸಲದ ಮಹರ್ಷಿ ವಾಲ್ಮೀಕಿ ಜಯಂತಿ ಸಂದರ್ಭದಲ್ಲಿ ರಾಜ್ಯದ ಮುಖ್ಯಮಂತ್ರಿಗಳಾದ ಶ್ರೀ ಸಿದ್ದರಾಮಯ್ಯನವರು ಈ ಶೋಷಿತ ಸಮುದಾಯಗಳಿಗೆ ಜನಸಂಖ್ಯೆ ಆಧಾರದ ಮೇಲೆ ಮೀಸಲಾತಿ ಪ್ರಮಾಣ ಹೆಚ್ಚಿಸುವ ಅಗತ್ಯವಿದೆ. ಇದಕ್ಕಾಗಿ ಸಂವಿಧಾನಾತ್ಮಕ ತಿದ್ದುಪಡಿ ತರಬೇಕಾಗುತ್ತದೆ, ಎಂದು ಹೇಳಿಕೆ ನೀಡಿ ಹೊಸ ಆಸೆ ಹುಟ್ಟಿಸಿದ್ದಾರೆ.

ಹೌದು. ಸಾವಿರಾರು ವರ್ಷಗಳಿಂದ ತುಳಿದು ತುಳಿದು ಮೂಲೆಗುಂಪು ಮಾಡಿರುವ, ಪಶುಗಳಿಗಿಂತ ಕನಿಷ್ಠವಾಗಿ ಪರಿಗಣಿಸಲಾಗಿರುವ ಈ ಸಮುದಾಯ ಮುಖ್ಯವಾಹಿನಿಯಲ್ಲಿ ಒಂದಾಗಿ, ಹೊಸ ಬದುಕು ಕಟ್ಟಿಕೊಂಡು ಮನುಷ್ಯರಂತೆ ಬದುಕುವಂಥವರಾಗ ಬೇಕಾದರೆ ಮೀಸಲಾತಿ ಇಂದಿಗೂ ಅಗತ್ಯವಿದೆ ಮತ್ತು ಅದರ ಪರಿಷ್ಕರಣೆಯೂ ನಡೆಯಬೇಕಾದ ಅಗತ್ಯವಿದೆ. ಈ ಸಮುದಾಯಗಳನ್ನು ಮೊದಲಿಂದಲೂ ಸಮಾಜವೇ ಲೆಕ್ಕಕ್ಕೆ ತೆಗೆದುಕೊಳ್ಳದಿರುವಾಗ, ಸಮಾಜದ ಮುಖ್ಯವಾಹಿನಿಯದೇ ಹಿತಚಿಂತನೆ ಮಾಡುತ್ತ ಬಂದ ಸರಕಾರಗಳು ಆಟಕ್ಕುಂಟು ಲೆಕ್ಕಕ್ಕಿಲ್ಲ ಎನ್ನುವಂತೆ ಇವರ ಅಭಿವೃದ್ಧಿಯನ್ನು ಕಡೆಗಣಿಸುತ್ತ ಬಂದಿವೆ. ಐಡೆಂಟಿಟಿ ಇಲ್ಲದ ಈ ಸಮುದಾಯ ಚದುರಿಹೋದ ಕಾರಣ ಜನಸಂಖ್ಯೆ ಎಷ್ಟಿದೆ ಎಂಬ ಲೆಕ್ಕಾಚಾರ ಸರಿಯಾಗಿ ಪರಿಗಣನೆಯಾಗಿಲ್ಲ. ಇದರಿಂದಾಗಿ ನ್ಯಾಯಯುತವಾಗಿ ಇವರಿಗೆ ಸಿಗಬೇಕಾದ ಸೌಲಭ್ಯ, ಸೌಕರ್ಯಗಳು ಇದುವರೆಗೂ ನಿಗದಿತ ಪ್ರಮಾಣದಲ್ಲಿ ಸಿಕ್ಕಿಲ್ಲ. ಆದರೆ ಸರಕಾರಿ ಕಾಗದ ಪತ್ರಗಳ ಮೇಲೆ ಇವರಿಗಾಗಿ ಹಮ್ಮಿಕೊಂಡ ಅಭಿವೃದ್ಧಿ ಕಾರ್ಯಕ್ರಮ, ಮಾಡಿದ ಖರ್ಚು ಸಾಕಷ್ಟು ದೊರೆಯುತ್ತದೆ. ಪ್ರಾಯೋಗಿಕವಾಗಿ ದಲಿತರ ಹರಕು ಗುಡಿಸಲುಗಳಲ್ಲಿ ಅದನ್ನು ಹುಡುಕಿದರೆ ಪ್ರತಿಶತ ಇಪ್ಪತ್ತೈದರ ಪ್ರಮಾಣ ದಷ್ಟು ಸಿಗುವುದು ಕಷ್ಟ. ಪರಿಸ್ಥಿತಿ ಹೀಗಿರುವಾಗ ಸಮಾಜವಾದಿ ಚಳುವಳಿಯ ಮೂಲಕ ಗುರುತಿಸಿ ಕೊಂಡು ಬೆಳೆದುಬಂದ ಮುಖ್ಯಮಂತ್ರಿ ಸಿದ್ದರಾಮಯ್ಯ ನವರು ಜನಸಂಖ್ಯೆ ಆಧಾರಿತ ಮೀಸಲಾತಿ ಪ್ರಮಾಣ ಹೆಚ್ಚಿಗೆ ನೀಡಬೇಕೆಂದು ಒತ್ತಾಯಿಸಿರುವುದು ನ್ಯಾಯೋಚಿತವಾಗಿದೆ. ಸಾಂವಿಧಾನಾತ್ಮಕವಾಗಿ ಈ ಸಮುದಾಯಗಳಿಗೆ ನೀಡಲಾಗಿರುವ ಈಗಿರುವ ಮೀಸಲಾತಿ ಪ್ರಮಾಣವನ್ನೇ ಸಹಿಸಿಕೊಳ್ಳಲಾರದ, ದಲಿತ ಏಳಿಗೆ ಸಹಿಸಿಕೊಳ್ಳಲಾರದ ಮೂಲಭೂತವಾದಿಗಳು, ಶೋಷಕರು "ಯಾಕೋ ಇವರದು ಅತಿಯಾಯಿತು !"



ಸರಕಾರದ ನೀತಿ ಹಾಗೂ ಖಾಸಗೀಕರಣದಿಂದಾಗಿ ನಿಜವಾದ ದಲಿತರು ಇಂದು ಗುಣಮಟ್ಟದ ಶಿಕ್ಷಣದಿಂದಲೂ ವಂಚಿತರಾಗುತ್ತಿದ್ದಾರೆ. ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಹೂವಿನ ಹಾಸಿಗೆ ಹಾಸುತ್ತಿರುವ ಸರಕಾರ ಬಡವರ ಸಾರ್ವಜನಿಕ ಶಾಲಾ ಕಾಲೇಜುಗಳನ್ನು ಸಂಪೂರ್ಣವಾಗಿ ಮರೆತಿದೆ. ಬಟ್ಟೆ ಆಕಾರ ಬದಲಾಯಿಸುವ, ಶೂ ಕೊಡುವ, ಸೈಕಲ್ ವಿತರಿಸುವ, ಮಧ್ಯಾಹ್ನ ಬಿಸಿಯೂಟ ನೀಡುವುದನ್ನೇ ಗುಣಮಟ್ಟದ ಶಿಕ್ಷಣ ಎಂಬುದು ಸರಕಾರದ ವ್ಯಾಖ್ಯಾನವಾಗಿದೆ. ಈ ಮೂಲಭೂತ ಅವಶ್ಯಕತೆಗಳು ಈ ಸಮುದಾಯಕ್ಕೆ ತುಂಬ ಅಗತ್ಯ.

ಎಂದು ಮತ್ತಷ್ಟು ಕೆಂಡಕಾರುವುದರಲ್ಲಿ ಸಂಶಯವಿಲ್ಲ. ಹಾಗಂತ ಇನ್ನೂ ಗುಲಾಮಗಿರಿಯಲ್ಲಿ ನರಳುತ್ತಿರುವ ಈ ಸಮುದಾಯದ ಹಿತಾಸಕ್ತಿಗೆ ಮೀಸಲಾತಿ ಹೆಚ್ಚಿಸಲು ಹಿಂಜರಿಯಬೇಕಾಗಿಲ್ಲ.

ಮೀಸಲಾತಿ ಹೆಚ್ಚಳಕ್ಕಿಂತ ಅತ್ಯಂತ ಮುಖ್ಯವಾಗಿ ಈಗಿರುವ ಮೀಸಲಾತಿಯ ಹಕೀಕತ್ತು ಮತ್ತು ದಲಿತರ ಜೀವನಮಟ್ಟದ ಸ್ಥಿತಿಗತಿಯ ಬಗ್ಗೆ ಸರಕಾರಗಳು ಆತ್ಮಾವಲೋಕನ ಮಾಡಿಕೊಳ್ಳಬೇಕಾದ ತುರ್ತು ಅಗತ್ಯವಿದೆ. ಈಗಿರುವ ಸಾಂವಿಧಾನಿಕ ಮೀಸಲಾತಿಯ ಪ್ರಾಯೋಗಿಕ ಅನುಷ್ಠಾನದ ಬಗ್ಗೆ ಎಷ್ಟರಮಟ್ಟಿಗೆ ಸರಕಾರಗಳು ಚಿಂತಿಸುತ್ತಿವೆ? ಮತ್ತು ಎಷ್ಟರಮಟ್ಟಿಗೆ ಉದ್ಯೋಗ, ಸಾಮಾಜಿಕ ಸಂಪತ್ತಿನ ಹಂಚಿಕೆ ಮತ್ತು ಶೈಕ್ಷಣಿಕ ಶ್ರೇಯೋಭಿವೃದ್ಧಿಯ ಮೂಲಕ ಸಮಪಾಲು ಸಮಬಾಳು ತಂದುಕೊಡಲು ಪ್ರಯತ್ನಿಸುತ್ತಿವೆ ಎಂಬ ಪ್ರಶ್ನೆ ಮುಖ್ಯವಾಗುತ್ತದೆ.

ಈಗಿರುವ ಮೀಸಲು ನಿಯಮದ ಪ್ರಕಾರ ಸರಕಾರ ಹಾಗೂ ಸರಕಾರಿ ಸೌಕರ್ಯಗಳನ್ನು ಪಡೆದುಕೊಂಡಿರುವ ಸಂಸ್ಥೆಗಳು ಎಷ್ಟರಮಟ್ಟಿಗೆ ಮೀಸಲಾತಿ ನಿಯಮಗಳನ್ನು ಪ್ರಾಮಾಣಿಕವಾಗಿ ಪಾಲಿಸಿವೆ ಮತ್ತು ಪಾಲಿಸುತ್ತಿವೆ ಅನ್ನುವ ಇಡೀ ಸತ್ಯ ಹೊರಬರಬೇಕಾಗಿದೆ. ನಿಗದಿ ಮೀಸಲಾತಿ ಪ್ರಮಾಣದಲ್ಲಿಯೇ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ನ್ಯಾಯಯುತವಾಗಿ ಇದುವರೆಗೆ ಉದ್ಯೋಗಾವಕಾಶ ನೀಡಲು ಸಾಧ್ಯವಾಗಿಲ್ಲ. ಸರಕಾರಿ ನೌಕರಿಗಳು ಮಣ್ಣುಗೂಡಿರುವುದರಿಂದ ಆಧುನಿಕ ಆರ್ಥಿಕ ನೀತಿಗಳಿಂದಾಗಿ ಈ ಸಮುದಾಯದ ಪದವೀಧರರು ಉದ್ಯೋಗವಿಲ್ಲದೆ ಹೊಟ್ಟೆಪಾಡಿಗಾಗಿ ಕನಿಷ್ಠಮಟ್ಟದ ಸಂಬಳಕ್ಕೂ ಗತಿಯಿಲ್ಲದೆ ಜೀವನ ಸಾಗಿಸಬೇಕಾದ ಅನಿವಾರ್ಯತೆಯನ್ನು ಎದುರಿಸುತ್ತಿದ್ದಾರೆ. ದಲಿತರ ಬಗ್ಗೆ ಮೇಲಿಂದ ಮೇಲೆ ಕಳಕಳಿ ವ್ಯಕ್ತಪಡಿಸುತ್ತ ಬಂದಿರುವ ಸರಕಾರಗಳು ಲಕ್ಷಾಂತರ ಬ್ಯಾಕಲಾಗ್ ಹುದ್ದೆಗಳನ್ನು ಹಾಗೇ ಉಳಿಸಿಕೊಂಡಿವೆ. ಆರ್ಥಿಕ ಮಿತವ್ಯಯ ಕಾರಣದಿಂದಾಗಿ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ, ಅದರಲ್ಲೂ ವಿಶೇಷವಾಗಿ ಉನ್ನತ ಶಿಕ್ಷಣ ವ್ಯವಸ್ಥೆಯಲ್ಲಿ ಕಳೆದ ಹದಿನೈದು ಇಪ್ಪತ್ತು ವರ್ಷಗಳಿಂದ ಬ್ಯಾಕಲಾಗ್ ಹುದ್ದೆಗಳನ್ನು ತುಂಬಿಕೊಳ್ಳಲು ಅವಕಾಶ ಕಲ್ಪಿಸಿಕೊಟ್ಟಿಲ್ಲ. ಈ ಹುದ್ದೆಗಳ ಭರ್ತಿಯಲ್ಲಿ ಸಂಸ್ಥೆಗಳು ಎಷ್ಟರಮಟ್ಟಿಗೆ ನ್ಯಾಯಯುತವಾಗಿ ನಡೆದುಕೊಳ್ಳುತ್ತ ಬಂದಿವೆ ಎಂಬುದರ ಬಗ್ಗೆ ಯಾವ ಸರಕಾರವೂ ತಲೆಕೆಡಿಸಿಕೊಂಡಿಲ್ಲ. ದಲಿತ ಮಂತ್ರಿಗಳಿಗೆ ಮುಖ್ಯಮಂತ್ರಿಗಳಾಗುವುದೇ ದೊಡ್ಡ ಸಮಸ್ಯೆಯಾಗಿ ಕಾಡುತ್ತಿರುವಾಗ ದಲಿತರ ಈ ಸಮಸ್ಯೆಗಳ ಬಗ್ಗೆ ಗಮನ ಹರಿಸಲು ಅವರಿಗೆ ಸಮಯ ಸಿಕ್ಕಿಲ್ಲ. ಈ ಹಿಂದೆ ಅನುಮತಿ ನೀಡಿದ ಹುದ್ದೆಗಳಲ್ಲಿ ಖಾಸಗಿ ವಲಯದ ಅದೆಷ್ಟೋ ಸಂಸ್ಥೆಗಳು ಈ ಸಮುದಾಯದ ಅಭ್ಯರ್ಥಿಗಳಿಗೆ ಅವಕಾಶ ನೀಡದೆ ಬಹಿರಂಗವಾಗಿ ವಂಚಿಸುತ್ತ ಬಂದಿವೆ. ಪರಿಸ್ಥಿತಿ ಹೀಗಿರಬೇಕಾದರೆ ಅಕ್ಷರ ವಂಚಿತ ಈ ಸಮುದಾಯದಿಂದ ಅಷ್ಟಿಷ್ಟು ಕಲಿತು ಹೊರಬಂದ ಸಂದರ್ಭದಲ್ಲಿ ಆಧುನಿಕ ಆರ್ಥಿಕ ನೀತಿಗಳಿಂದಾಗಿ ಈ ಸಮುದಾಯಕ್ಕೆ ಉದ್ಯೋಗಾವಕಾಶದ ಬಾಗಿಲು ಮುಚ್ಚಿದ್ದರಿಂದ ದಲಿತರನ್ನು ಸಮಾನತೆಯನ್ನು ಸಾರುವ ಸಂವಿಧಾನದ ಸಾಕ್ಷಿಗಣ್ಣಿನಲ್ಲಿಯೇ ಹೊರಕ್ಕೆ ದಬ್ಬಲಾಗಿದೆ.

ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದ ಹೆಸರಿನಲ್ಲಿ ಎಲ್ಲೆಡೆ ಖಾಸಗಿ ಒಡೆತನವೇ ವ್ಯಾಪಿಸಿಕೊಳ್ಳುತ್ತಿರುವಾಗ ಮತ್ತು ಸರಕಾರಗಳು ಬಂಡವಾಳಶಾಹಿಗಳ ಅಧೀನದಲ್ಲಿ ಆಡಳಿತ ಮಾಡುತ್ತಿರುವಾಗ ಮೀಸಲಾತಿ ಹೆಚ್ಚಿಸಿ ಈ ಸಮುದಾಯದವರಿಗೆ ಹೇಗೆ ತಾನೆ ಉದ್ಯೋಗಾವಕಾಶ ಕಲ್ಪಿಸುವುದು? ಉದ್ಯೋಗ ಸೃಷ್ಟಿಗೆ ಸರಕಾರದ ಹತ್ತಿರ ಎರಡು-ಮೂರು ಇಲಾಖೆಗಳನ್ನು ಹೊರತು ಪಡಿಸಿದರೆ ಏನೂ ಉಳಿದಿಲ್ಲ. ಹೀಗಾಗಿ ಮೀಸಲಾತಿ ಎಲ್ಲಿ ಅನ್ವಯಿಸುವುದು. ಖಾಸಗಿಯವರಂತೂ ಪ್ರತಿಭೆ, ಕೌಶಲ್ಯ, ಇಂಗ್ಲಿಷ್ ಮಾಧ್ಯಮದ ಹೆಸರಿನಲ್ಲಿ ಉದ್ಯೋಗಾವಕಾಶದ ಜಾತೀಯತೆಯ ಮೇಳಗಳನ್ನು ನಡೆಸುತ್ತಿವೆ. ಈಗ ಕಲಿತು ಕಣ್ಣುಬಿಡುತ್ತಿರುವ ಬಹುಸಂಖ್ಯಾತ ಈ ಯುವಕರಿಗೆ ಇಲ್ಲಿ ಉದ್ಯೋಗ ದೊರೆಯುವುದು ಅಷ್ಟಕಷ್ಟೆ. ಈ ಮಾನದಂಡಗಳನ್ನೇ ನೆಪಮಾಡಿಕೊಂಡು ಖಾಸಗಿ ವಲಯ ದಲಿತ ಯುವ ಸಮುದಾಯವನ್ನು ಹೊರತಳ್ಳುತ್ತಿದೆ. ಕ್ವಚಿತ್ತಾಗಿ ಅವಕಾಶ ಕಲ್ಪಿಸಿದರೂ ಅತ್ಯಂತ ಕೆಳಹಂತದ ಉದ್ಯೋಗ ನೀಡಿ ಶೋಷಿಸಲಾಗುತ್ತಿದೆ. ಈ ಸಮುದಾಯಕ್ಕೆ ಇಲ್ಲಿ ಸರಿಯಾಗಿ ಅವಕಾಶ ಸಿಗುತ್ತಿಲ್ಲ. ಸಿಕ್ಕರೂ ನೆಮ್ಮದಿ ಇಲ್ಲ. ಸೂಕ್ತ ಗೌರವವಿಲ್ಲ.

ಅಳಿದುಳಿದ ಸರಕಾರಿ ಇಲಾಖೆಗಳ ಉದ್ಯೋಗಾವಕಾಶ ಪಡೆದುಕೊಳ್ಳುವುದು ಬಡಪಾಯಿ ಪ್ರತಿಭಾವಂತರಿಗೆ ಗಗನಕುಸುಮವಾಗಿ ಪರಿಣಮಿಸಿದೆ. ಜಪರಾಸಿಯಿಂದ ಉನ್ನತ ಹುದ್ದೆಯವರೆಗೆ ಇಂದು ಸರಕಾರಿ ನೌಕರಿ ಸಿಗಬೇಕಾದರೆ ಸಾಮಾನ್ಯನಿಗೆ ಅಸಾಧ್ಯ ಎಂಬುದು ಮನೆಮಾತಾಗಿದೆ. ಬಡಪಾಯಿ ಪದವೀಧರ ತನ್ನ ಎಲ್ಲ ಸರ್ಟಿಫಿಕೇಟ್ ಹಾಗೂ ಮೆಡಲ್‌ಗಳನ್ನು ಮುಂದಿಟ್ಟುಕೊಂಡು ಹುಡುಕಿದರೂ ಸರಕಾರಿ ಉದ್ಯೋಗ ಸಿಗುವುದು ಕಷ್ಟ. ಕಾರಣ – ಕಡಿಮೆ ಉದ್ಯೋಗಾವಕಾಶ, ಸ್ಪರ್ಧೆ ಜಾಸ್ತಿ. ಸರಕಾರಿ ಹುದ್ದೆಗಳನ್ನು ಗಿಟ್ಟಿಸಿಕೊಳ್ಳುವಲ್ಲಿ ನಡೆಯುವ ಹಣಕಾಸಿನ ಸ್ಪರ್ಧೆ ವಿಪರೀತ ಎಂಬುದು ಎಲ್ಲರಿಗೂ ಗೊತ್ತಿರುವ ಸಂಗತಿ. ಮೀಸಲು ಹುದ್ದೆಗಳ ಸ್ಪರ್ಧೆಯಲ್ಲಿ ಗೆಲ್ಲುವುದು ಬಲಿತ ದಲಿತನೇ ಹೊರತು ಬಡಪಾಯಿ ದಲಿತನಲ್ಲ. ಅಲ್ಪಪ್ರಮಾಣದ ಮೀಸಲು ಹುದ್ದೆಗಳು ಆರ್ಥಿಕ ಹಾಗೂ ರಾಜಕೀಯ ಬಲ ಪಡೆದಿರುವ ದಲಿತರ ಪಾಲಾಗುತ್ತಿರುವುದರಿಂದ ಕೂಲಿನಾಲಿ ಮಾಡಿ ಓದಿ, ರ್‍ಯಾಂಕ್, ಗೋಲ್ಡ್‌ಮೆಡಲ್ ಪಡೆದ ಪ್ರತಿಭಾವಂತರು ಸರಕಾರಿ ಹುದ್ದೆಗಳಿಂದ ಸಂಪೂರ್ಣವಾಗಿ ವಂಚಿತರಾಗುತ್ತಿದ್ದಾರೆ. ಭ್ರಷ್ಟಾಚಾರ, ಹಣಕಾಸಿನ ಸ್ಪರ್ಧೆ ಎದುರಿಸುವ ಶಕ್ತಿಯಿಲ್ಲದ ಈ ಬಡಪಾಯಿಗಳು ಪಡೆದ ಶಿಕ್ಷಣಕ್ಕೆ ಸಂಬಂಧವಿಲ್ಲದ ಯಾವುದಾದರೂ ಕೆಲಸ ಮಾಡಿ ಜೀವನ ಸಾಗಿಸುತ್ತ ಅತ್ಯಂತ ಕೆಳಮಟ್ಟಕ್ಕೆ ಕುಸಿದುಹೋಗಿದ್ದಾರೆ. ಅನೀತಿಗಳ ವಿರುದ್ಧ ಯಾವುದೇ ಕ್ರಮಕ್ಕೆ ಮುಂದಾಗದ ಸರಕಾರ ಸಂವಿಧಾನ ತಿದ್ದುಪಡಿ ಮಾಡಿ ಮೀಸಲಾತಿ ಹೆಚ್ಚಿಸಲು ಯೋಚಿಸುತ್ತಿದೆ. ಇದ್ದ ಉದ್ಯೋಗಾವಕಾಶ ನಿಜವಾದ ಫಲಾನುಭವಿಗಳಿಗೆ ತಪ್ಪಿಹೋಗಲು ಕಾರಣವಾದ ಭ್ರಷ್ಟಾಚಾರಕ್ಕೆ ಸರಕಾರವೇ ನೇರವಾಗಿ ಕುಮ್ಮಕ್ಕು ನೀಡುತ್ತಿರುವ ವಿಷಯ ಗುಟ್ಟಾಗಿ ಉಳಿದುಕೊಂಡಿಲ್ಲ.

ಸರಕಾರದ ನೀತಿ ಹಾಗೂ ಖಾಸಗೀಕರಣದಿಂದಾಗಿ ನಿಜವಾದ ದಲಿತರು ಇಂದು ಗುಣಮಟ್ಟದ ಶಿಕ್ಷಣದಿಂದಲೂ ವಂಚಿತರಾಗುತ್ತಿದ್ದಾರೆ. ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಹೂವಿನ ಹಾಸಿಗೆ ಹಾಸುತ್ತಿರುವ ಸರಕಾರ ಬಡವರ ಸಾರ್ವಜನಿಕ ಶಾಲಾ ಕಾಲೇಜುಗಳನ್ನು ಸಂಪೂರ್ಣವಾಗಿ ಮರೆತಿದೆ. ಬಟ್ಟೆ ಆಕಾರ ಬದಲಾಯಿಸುವ, ಶೂ ಕೊಡುವ, ಸೈಕಲ್ ವಿತರಿಸುವ, ಮಧ್ಯಾಹ್ನ ಬಿಸಿಯೂಟ ನೀಡುವುದನ್ನೇ ಗುಣಮಟ್ಟದ ಶಿಕ್ಷಣ ಎಂಬುದು ಸರಕಾರದ ವ್ಯಾಖ್ಯಾನವಾಗಿದೆ. ಈ ಮೂಲಭೂತ ಅವಶ್ಯಕತೆಗಳು ಈ ಸಮುದಾಯಕ್ಕೆ ತುಂಬ ಅಗತ್ಯ. ಆದರೆ, ಅದೇ ಗುಣಮಟ್ಟದ ಶಿಕ್ಷಣ ಎಂದು ಭಾವಿಸಿಕೊಂಡಿರುವುದು ದುರಂತ. ದಲಿತ ಮಕ್ಕಳು ಆಧುನಿಕ ಸ್ಪರ್ಧಾ ಜಗತ್ತನ್ನು ಎದುರಿಸುವ ಶಿಕ್ಷಣ ವ್ಯವಸ್ಥೆ ಕಲ್ಪಿಸುವುದಕ್ಕೆ ಸರಕಾರಕ್ಕೆ ಇದುವರೆಗೆ ಸಾಧ್ಯವಾಗಿಲ್ಲ. ತದ್ವಿರುದ್ಧವಾಗಿ ವಿದ್ಯಾರ್ಥಿಗಳ ಕೊರತೆಯನ್ನು ನೆಪ ಮಾಡಿಕೊಂಡು ಇದ್ದಬದ್ದ ಶಾಲೆಗಳನ್ನು ಮುಚ್ಚಲು ಹವಣಿಸುತ್ತಿದೆ. ಹಾಳುಬಿದ್ದ, ನಿರುಪಯುಕ್ತ ಸಾರ್ವಜನಿಕ ಶಾಲೆಗಳಲ್ಲಿ ಓದುವ ದಲಿತ ಮಕ್ಕಳು ಹೊರ ಜಗತ್ತನ್ನು ಸರಿಯಾಗಿ ಎದುರುಗೊಳ್ಳಲು ಸಾಧ್ಯವಾಗುತ್ತಿಲ್ಲ. ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಮಕ್ಕಳಿಗೆ ಪ್ರವೇಶ ನೀಡುವಷ್ಟು ಆರ್ಥಿಕ ಶಕ್ತಿ ಇವರಲ್ಲಿ ಇಲ್ಲ. ವಾಸ್ತವ ಸ್ಥಿತಿ ಹೀಗಿರಬೇಕಾದರೆ, ತುಂಬ ದುಬಾರಿಯಾಗಿರುವ ವೈದ್ಯಕೀಯ, ಎಂಜಿನಿಯರಿಂಗ್ ಸೇರಿದಂತೆ ಇತರೇ ವೃತ್ತಿಪರ ಕೋರ್ಸ್‌ಗಳಲ್ಲಿ ಪ್ರವೇಶ ಪಡೆದುಕೊಳ್ಳಲು ಈ ಸಮುದಾಯದ ಮಕ್ಕಳಿಗೆ ಸಾಧ್ಯವಾಗುತ್ತಿಲ್ಲವಾದ್ದರಿಂದ ಕನಿಷ್ಠಮಟ್ಟದ ಶಿಕ್ಷಣದಿಂದಾಗಿ ಕೂಲಿಯಾಳುಗಳಾಗಿ ಹೊರಹೊಮ್ಮುವುದರ ಮೂಲಕ ಮತ್ತೊಮ್ಮೆ ವ್ಯವಸ್ಥಿತವಾಗಿ ಶೋಷಣೆಗೆ ಗುರಿಯಾಗುತ್ತಿದ್ದಾರೆ.

ಸಾಂವಿಧಾನಿಕ ಮೀಸಲಾತಿಯ ಪರಿಣಾಮಕಾರಿ ಅನುಷ್ಠಾನದಿಂದ ದುಡಿಯುವ ಕೈಗಳಿಗೆ ಸೂಕ್ತ ಉದ್ಯೋಗಾವಕಾಶ ನೀಡಿ, ಹಸಿದ ಹೊಟ್ಟೆಗಳು ತುಂಬಲು ಅವರ ಬಾಯಿಗೆ ಅನ್ನ ದೊರೆಯುವ ಅವಕಾಶಕ್ಕೆ ಮುಕ್ತ ವಾತಾವರಣ ಕಲ್ಪಿಸಬೇಕಾದ ಸರಕಾರ, ಮೀಸಲಾತಿ ಹೆಚ್ಚಿಸುವ ಮಾತು ಹರಿಬಿಟ್ಟು ತನ್ನ ಅಸ್ತಿತ್ವ ಉಳಿಸಿಕೊಳ್ಳುವುದರ ಸಲುವಾಗಿ ಅನ್ನಕ್ಕಾಗಿ ಬಾಯಿ ತೆರೆದವರ ಮೂಗಿಗೆ ತುಪ್ಪ ಸವರುವ ಕೆಲಸಕ್ಕೆ ಮುಂದಾಗಿದೆ. ರಾಜ್ಯ ಹಾಗೂ ಕೇಂದ್ರ ಸರಕಾರಗಳಿಗೆ ನಿಜವಾಗಲೂ ದಲಿತರ ಬಗ್ಗೆ ಕಾಳಜಿ ಇದ್ದಿದ್ದೇ ಆದರೆ, ಡಾ॥ ಬಿ. ಆರ್. ಅಂಬೇಡ್ಕರ ಬಗ್ಗೆ ಗೌರವ ಹೊಂದಿದ್ದೇ ಆದರೆ ನಿಜವಾದ ದಲಿತರು ಎದುರಿಸುತ್ತಿರುವ ನಿತ್ಯದ ಬದುಕಿನ ಸಮಸ್ಯೆಗಳನ್ನು ಪರಿಹರಿಸಲು ಮುಂದಾಗಲಿ. ಭ್ರಷ್ಟಾಚಾರಕ್ಕೆ ಕಡಿವಾಣ ಹಾಕಲಿ. ದಲಿತರ ಏಳ್ಗೆಗೆ ಖಾಸಗಿ ವಲಯದಲ್ಲಿ ಮೀಸಲಾತಿ ಜಾರಿಗೊಳಿಸಿ ಸೂಕ್ತ ಉದ್ಯೋಗಾವಕಾಶ ದೊರೆಯುವಂತೆ ಮಾಡಲಿ. ಮಾಡಲೇಬೇಕಾದ ಈ ಕೆಲಸಗಳಿಗೆ ಅಸಾಧ್ಯವೆನಿಸುವ ಸಾಂವಿಧಾನಿಕ ತಿದ್ದುಪಡಿ ಬೇಕಾಗಿಲ್ಲ.

**ಡಾ॥ ಕೆ. ಎನ್. ದೊಡ್ಡಮನಿ**
ಮುಖ್ಯಸ್ಥ, ಕನ್ನಡ ವಿಭಾಗ, ಜೈನ ಮಹಾವಿದ್ಯಾಲಯ, ಹಿಂದವಾಡಿ, ಬೆಳಗಾವಿ – ೫೯೦ ೦೧೧

# ಕಾರ್ಮಿಕರ ಹೋರಾಟಕ್ಕೆ ಹೊಸ ಆಯಾಮ ಕೊಟ್ಟ ಅಂಗನವಾಡಿ ಕೆಲಸಗಾರರು



ಡಾ॥ ಸಿದ್ದನಗೌಡ ಪಾಟೀಲ



ಕರ್ನಾಟಕ ಕಳೆದ ಒಂದು ವರ್ಷದ ಅವಧಿಯಲ್ಲಿ ಮೂರು ವಿಭಿನ್ನ ಕಾರ್ಮಿಕ ಚಳುವಳಿಗಳಿಗೆ ಸಾಕ್ಷಿಯಾಯಿತು. ಇತ್ತೀಚಿನ ವರ್ಷಗಳಲ್ಲಿ ಪ್ರಭುತ್ವಗಳು ಕಾರ್ಮಿಕ, ರೈತ, ದಲಿತ ಚಳುವಳಿಗಳನ್ನು ಗಂಭೀರವಾಗಿ ಪರಿಗಣಿಸುತ್ತಿಲ್ಲ. ವಿಶ್ವದ ಶ್ರೀಮಂತ ದೇಶಗಳಿಗೆ ಹೋಗಿ ಬಂಡವಾಳ ಹೂಡಬನ್ನಿ ಎಂದು ಅಂಗಲಾಚುವ ಸರಕಾರಗಳು. ವಿದೇಶಿ ಬಂಡವಾಳ ಬಂದರೆ ಉದ್ಯೋಗ ಸೃಷ್ಟಿಯಾಗುತ್ತದೆಂಬ ಸಬೂಬು ಹೇಳುತ್ತವೆ. ಅದನ್ನಾದರೂ ಸಾಧಿಸಿವೆಯೇ ? ವಾಸ್ತವದಲ್ಲಿ ಭಾರತದ ಉದ್ಯೋಗಾಕಾಂಕ್ಷಿಗಳ ಬೆಳವಣಿಗೆ ನೋಡಿದರೆ ವರ್ಷಕ್ಕೆ ಕನಿಷ್ಠ ಒಂದು ಕೋಟಿ ಉದ್ಯೋಗ ಸೃಷ್ಟಿಯಾಗಬೇಕು. ನಮ್ಮ ದೇಶದ ಪ್ರಧಾನಿ ಮೋದಿಯವರು ದೇಶ ವಿದೇಶ ಸುತ್ತಿ 'ಹೂಡಬನ್ನಿ' ಎಂದು ಗೋಗರೆದರೂ ೨೦೧೬ರಲ್ಲಿ ಒಂದು ಕೋಟಿ ಉದ್ಯೋಗಾಕಾಂಕ್ಷಿಗಳ ಮುಂದೆ ಇಟ್ಟದ್ದು ಕೇವಲ ಒಂದೂವರೆ ಲಕ್ಷ ಉದ್ಯೋಗ. ಇದಕ್ಕೆ ಪ್ರತಿಯಾಗಿ ಜಿ.ಡಿ.ಪಿ. ಹೆಚ್ಚಿದೆ ಎಂದು ಹೇಳುತ್ತಾರೆ. ಅಂದರೆ ಉದ್ಯೋಗವಿಲ್ಲದ ಅಭಿವೃದ್ಧಿ. ಈ ಉದ್ಯೋಗವಿಲ್ಲದ ಅಭಿವೃದ್ಧಿ ಉದ್ಯಮಪತಿಗಳ ಸಂಪತ್ತನ್ನು ಹೆಚ್ಚಿಸಿದೆಯೇ ಹೊರತು ಉದ್ಯೋಗಾಕಾಂಕ್ಷಿಗಳ ಹಸಿವು, ಬಡತನವನ್ನು ಕಡಿಮೆ ಮಾಡಿಲ್ಲ. ಉದ್ಯೋಗ ಕೊಡಲಾಗದ ಈ ಸರಕಾರಗಳು ಈಗ ಉದ್ಯೋಗದಲ್ಲಿರುವ ತನ್ನದೇ ದೇಶದ ಪ್ರಜೆಗಳನ್ನು ಹೇಗೆ ನಡೆಸಿಕೊಳ್ಳುತ್ತಿವೆ ಎಂಬುದನ್ನು ಮೇ ೧ರ ಕಾರ್ಮಿಕ ದಿನಾಚರಣೆಯ ಸಂದರ್ಭದಲ್ಲಿ ಗಂಭೀರವಾಗಿ ಯೋಚಿಸಬೇಕಿದೆ. ದೇಶದಲ್ಲಿ ಒಟ್ಟು ಕಾರ್ಮಿಕರಲ್ಲಿ ಪ್ರತಿಶತ ೯೦ರಷ್ಟು ಅಸಂಘಟಿತ ಕಾರ್ಮಿಕರು. ಪ್ರತಿಶತ ೧೦ರಷ್ಟಿರುವ ಸಂಘಟಿತ ಕಾರ್ಮಿಕರಲ್ಲಿಯೂ ಗುತ್ತಿಗೆ, ಅರೆಗುತ್ತಿಗೆ, ಹೊರಗುತ್ತಿಗೆ ಸಾಂದರ್ಭಿಕ, ತಾತ್ಕಾಲಿಕ ಹೆಸರಿನಲ್ಲಿ ಅವರನ್ನೂ ಅಸಂಘಟಿತ ವಲಯಕ್ಕೆ ತಳ್ಳುತ್ತಿದ್ದಾರೆ. ಕಾರ್ಮಿಕ ವರ್ಗ ನೂರಾರು ವರ್ಷಗಳಿಂದ ಹೋರಾಟ ಮಾಡಿ ಪಡೆದ ಹಕ್ಕುಗಳನ್ನು ತಿದ್ದುಪಡಿ ಮಾಡಿ ದೇಶದ ಕಾರ್ಮಿಕ ವರ್ಗವನ್ನು ಅತಂತ್ರ ಸ್ಥಿತಿಗೆ ತಳ್ಳುತ್ತಿದ್ದಾರೆ. ಪ್ರಭುತ್ವಗಳು ಕಾರ್ಪೊರೇಟ್ ಕಂಪನಿಗಳ ಗುಲಾಮರಾಗಿರುವಾಗ ಅವರಿಂದ ಕಾರ್ಮಿಕ ಪರವಾದ ನೀತಿಗಳನ್ನು ನಿರೀಕ್ಷಿಸುವುದು ಮೂರ್ಖತನ. ಸರಕಾರಗಳ ಕಾರ್ಮಿಕ ವಿರೋಧಿ ನೀತಿಗಳನ್ನು ಪ್ರತಿಭಟಿಸಿ ದೇಶದ ಕಾರ್ಮಿಕ ಸಂಘಟನೆಗಳ ಜಂಟಿ ವೇದಿಕೆ (ಜೆ.ಸಿ.ಟಿ.ಯು.) ಹಲವಾರು ಬಾರಿ ಹೋರಾಟ ನಡೆಸಿದೆ. ದೇಶದ ಕೋಟ್ಯಂತರ ಕಾರ್ಮಿಕರು ಬೀದಿಗಿಳಿದು ಹೋರಾಡಿದ್ದಾರೆ, ರಾಜಧಾನಿಗೆ ಮುತ್ತಿಗೆ ಹಾಕಿದ್ದಾರೆ. ಆದರೆ ಬಹುತೇಕ ಕಾರ್ಪೊರೇಟ್ ಕಂಪನಿಗಳು ನಡೆಸುತ್ತಿರುವ ಮಾಧ್ಯಮಗಳು ಈ ಕೋಟ್ಯಂತರ ಕಾರ್ಮಿಕರ ಹೋರಾಟಕ್ಕೆ ಪ್ರಚಾರ ಕೊಡದೇ ಇರುವುದು ಆಕಸ್ಮಿಕವಲ್ಲ, ಅದೊಂದು ವ್ಯವಸ್ಥಿತ ಹುನ್ನಾರ.

ಪ್ರಭುತ್ವಗಳ ಕಾರ್ಮಿಕ ವಿರೋಧಿ ನೀತಿ ದುಡಿವ ವರ್ಗದ ದಿವ್ಯ ನಿರ್ಲಕ್ಷ್ಯವನ್ನು ಎದುರಿಸುವುದು ಇಂದು ಕಾರ್ಮಿಕರ, ಕಾರ್ಮಿಕ ಸಂಘಟನೆಗಳ ಮುಖ್ಯ ಜವಾಬ್ದಾರಿ. ದೇಶದ ಬಹುಜನರ ಧ್ವನಿಯನ್ನು ಕೇಳಲಾರದ ಪ್ರಭುತ್ವಗಳಿಗೆ ಸಾಂಪ್ರದಾಯಿಕ ಹೋರಾಟಗಳು ಬಿಸಿ ತಾಗಿಸಲಾರವು. ಕಲ್ಯಾಣ ರಾಜ್ಯದ ಮಾರ್ಗವನ್ನು ಕೈಬಿಟ್ಟಿರುವ ಸರಕಾರಗಳಿಗೆ ಧರಣಿ, ಮೆರವಣಿಗೆ, ಘೋಷಣೆಗಳು ಕಾಣಿಸುವುದಿಲ್ಲ, ಕೇಳುವುದಿಲ್ಲ. ಕಾರ್ಮಿಕರ ಸಮಸ್ಯೆಗಳ ಪರಿಹಾರ ಸರಕಾರಗಳ ಕಾರ್ಯಸೂಚಿಯ ಭಾಗವಾಗಿ ಉಳಿದಿಲ್ಲ.

**ಹೋರಾಟದ ಭಿನ್ನ ಮಾದರಿ**

ಬಂಡವಾಳಗಾರರ ಮನೆಬಾಗಿಲಿಗೆ ಹೋಗಿ ನಿಲ್ಲುವ ಪ್ರಭುತ್ವಗಳು ತಮ್ಮ ಮನೆ ಬಾಗಿಲಲ್ಲಿ ನಿಂತ ಕಾರ್ಮಿಕರನ್ನು ತಿರುಗಿಯೂ ನೋಡುವುದಿಲ್ಲ. ಇದಕ್ಕಾಗಿ ಸಾಂಪ್ರದಾಯಿಕ ಹೋರಾಟದ ಮಾದರಿಗಳನ್ನು ಬಿಟ್ಟು ತೀವ್ರವಾದ, ಬಿಕ್ಕಟ್ಟು ಸೃಷ್ಟಿಸುವ ಮಾರ್ಗ ಕಾರ್ಮಿಕ ಚಳುವಳಿಗಳಿಗೆ, ಸಂಘಟನೆಗಳಿಗೆ ಅನಿವಾರ್ಯವಾಗಿದೆ. ಇದೇ ಅನಿವಾರ್ಯ ಮಾರ್ಗ ಎಂಬುದನ್ನು ಈ ಒಂದು ವರ್ಷದ ಅವಧಿಯಲ್ಲಿ ಮೂರು ಕಾರ್ಮಿಕ ಹೋರಾಟಗಳು ಸಾಬೀತುಮಾಡಿವೆ. ಕೇಂದ್ರ ಸರಕಾರದ ಭವಿಷ್ಯನಿಧಿ ನೀತಿಯನ್ನು ವಿರೋಧಿಸಿ ಬೆಂಗಳೂರಿನಲ್ಲಿ ಗಾರ್ಮೆಂಟ್ ಕಾರ್ಮಿಕರು, ಅವರಲ್ಲಿಯೂ ಬಹುತೇಕ ಮಹಿಳೆಯರು ಬೀದಿಗಿಳಿದರು. ಲಕ್ಷಾಂತರ ಮಹಿಳೆಯರು ಬೀದಿಗಿಳಿದಾಗ ಬೆಂಗಳೂರೆಂಬ ಮಹಾನಗರ ಬೆಚ್ಚಿಬಿದ್ದಿತು. ಪೊಲೀಸರ ಲಾಠಿಗಳು ಸಾಲದಾದವು, ಬೀದಿಗಿಳಿದವರನ್ನು ತುಂಬುವಷ್ಟು ಜೈಲುಗಳು ಇರಲಿಲ್ಲ. ಆಕಾಶದಲ್ಲಿದ್ದ ಮೋದಿ ನೆಲಕ್ಕಿಳಿಯಬೇಕಾಯಿತು. ಗಾರ್ಮೆಂಟ್ ಕೆಲಸಗಾರರ ಸಮಸ್ಯೆಗಳಿಗೆ ಪರಿಹಾರ ಘೋಷಿಸಬೇಕಾಯಿತು.

**ಸಾರಿಗೆ ಬಂದ್**

ಕರ್ನಾಟಕದ ಸಾರಿಗೆ ನೌಕರರು ಮ್ಯಾನೇಜ್‌ಮೆಂಟ್ ದಬ್ಬಾಳಿಕೆಗೆ

ರೋಸಿಹೋಗಿದ್ದರು. ವೇತನ ಪರಿಷ್ಕರಣೆಯ ಜೊತೆಗೆ ತಮಗಾದ ಅನ್ಯಾಯಗಳನ್ನು ಸರಕಾರದ ಮುಂದಿಟ್ಟರು. ಐ.ಎ.ಎಸ್. ಎಂಬ ಬಿಳಿ ಆನೆಗಳ ಮಾತು ಕೇಳಿದ ಸರಕಾರ ಕಾರ್ಮಿಕರನ್ನು, ಕಾರ್ಮಿಕ ಸಂವೇದನೆಗಳನ್ನು ನಿರ್ಲಕ್ಷಿಸಿತು. ಸಾರಿಗೆ ನೌಕರರು ಮುಷ್ಕರಕ್ಕಿಳಿದರು. ಇಡೀ ಸಾರಿಗೆ ಸಂಸ್ಥೆಗಳಲ್ಲಿನ ಕಾರ್ಮಿಕರು ಒಂದಾದರು. ಬಸ್ ಸಂಚಾರ ಸ್ಥಗಿತಗೊಂಡಿತು. ಮ್ಯಾನೇಜ್‌ಮೆಂಟ್ ಮುಷ್ಕರ ಮುರಿಯಲು ಹೂಡಿದ ಸಂಚುಗಳು ವಿಫಲವಾದವು. ಎಸ್ಮಾ ಬೆದರಿಕೆ, ಸಸ್ಪೆನ್ಷನ್, ಡಿಸ್ಮಿಸಲ್ ಇವು ಯಾವುದಕ್ಕೂ ಕಾರ್ಮಿಕರು ಜಗ್ಗಲಿಲ್ಲ, ಜೈಲಿಗೆ ಹೋಗಲೂ ಸಿದ್ಧರಾದರು. ಸಿದ್ದರಾಮಯ್ಯ ಮುಖ್ಯಮಂತ್ರಿ ಬಂಗಲೆಯ ಬಾಗಿಲು ತೆರೆದರು. ಅಷ್ಟೊತ್ತಿಗೆ ರಾಜ್ಯ ಮಲಗಿ ಮೂರು ದಿನವಾಗಿತ್ತು.

**ಅಂಗನವಾಡಿ ಅಸ್ತ್ರ**

ಮಾರ್ಚ್ ೨೧ರಂದು ಸಿಐಟಿಯು ನಾಯಕತ್ವದ ಸುಮಾರು ೧೦,೦೦೦ ಅಂಗನವಾಡಿ ನೌಕರರು ಬೆಂಗಳೂರಿನ ಸ್ವಾತಂತ್ರ್ಯ ಉದ್ಯಾನವನಕ್ಕೆ ಬಂದಿಳಿದರು. ರಾಜ್ಯದ ವಿಧಾನಸಭಾ ಅಧಿವೇಶನ ನಡೆಯುತ್ತಿತ್ತು. ಮುಖ್ಯಮಂತ್ರಿಗಳು ಒಂದು ಸಾವಿರ ರೂಪಾಯಿ ಕಾರ್ಯಕರ್ತೆಯರಿಗೆ, ಐದುನೂರು ಸಹಾಯಕಿಯರಿಗೆ ಘೋಷಣೆ ಮಾಡಿದ್ದರು. ಚಳುವಳಿಗಾರರು ಅದನ್ನು ಒಪ್ಪಿರಲಿಲ್ಲ. ಸಂಪ್ರದಾಯದಂತೆ ಸಚಿವೆ ಉಮಾಶ್ರೀ ಚಳುವಳಿಯ ಸ್ಥಳಕ್ಕೆ ಬಂದುಹೋದರು. ಚಳುವಳಿಗಾರರು ಸ್ಥಳ ಬಿಟ್ಟು ಕದಲಲಿಲ್ಲ. ಚಳುವಳಿ ಎರಡನೇ ದಿನಕ್ಕೆ ಕಾಲಿಟ್ಟಿತು. ಮತ್ತಷ್ಟು ಚಳುವಳಿಗಾರರು ಸೇರ್ಪಡೆಯಾದರು. ಹತ್ತಾರು ಸಾವಿರ ಜನ ಹಗಲು ರಾತ್ರಿ ಧರಣಿ ನಡೆಸುವುದು ಸಾಮಾನ್ಯ ವಿಷಯವಲ್ಲ. ಸರಕಾರ-ಚಳುವಳಿಗಾರರ ಮಧ್ಯೆ ಮಾತುಕತೆ ಮುರಿದುಬಿತ್ತು. ಮಹಿಳೆಯರು ಬಂದು ಧಿಕ್ಕಾರ ಹೇಳಿ ಸಂಜೆ ಮರಳಿ ಹೋಗುತ್ತಾರೆಂದು ಸರಕಾರ ಎಣಿಸಿತ್ತು. ಅವರ ಎಣಿಕೆ ತಪ್ಪಾಗಿತ್ತು. ಹಗಲು ರಾತ್ರಿ ಧರಣಿ ಮೂರನೇ ದಿನಕ್ಕೆ ಕಾಲಿಟ್ಟಿತ್ತು. ಆಗ ಅಂಗನವಾಡಿ ಕೆಲಸಗಾರರನ್ನು ಮೊದಲಿನಿಂದಲೂ ಸಂಘಟಿಸಿದ್ದ ಎ.ಐ.ಟಿ.ಯು.ಸಿ.ಯ ನಾಯಕರೂ, ಅವರ ಸಂಘಟನೆಯ ಕಾರ್ಯಕರ್ತೆಯರೂ, ಸಹಾಯಕಿಯರೂ ಬೆಂಗಳೂರಿಗೆ ಧಾವಿಸಿದರು. ಅಂಗನವಾಡಿ ಕೆಲಸಗಾರರ ಮಧ್ಯೆ ಕೆಲಸ ಮಾಡುವ ಈ ಎರಡೂ ಪ್ರಮುಖ ಸಂಘಟನೆಗಳು ಕೂಡಿದಾಗ ಚಳುವಳಿಗಾರರ ಬಲ ಇಮ್ಮಡಿಯಾಯಿತು. ಬೆಂಗಳೂರಿನ ಹೃದಯ ಭಾಗ ಸ್ತಬ್ಧವಾಗುವ ಸೂಚನೆ ಸಿಕ್ಕಿತು. ಇನ್ನೊಂದು ದಿನ ಕಳೆದರೆ ೫೦,೦೦೦ಕ್ಕೂ ಹೆಚ್ಚಿನ ಅಂಗನವಾಡಿ ಮಹಿಳೆಯರು ಸೇರುವ ಸೂಚನೆ ಸರಕಾರಕ್ಕೆ ಸಿಕ್ಕಿತು. ತಕ್ಷಣ ನಾಯಕರನ್ನು ಕರೆದು ಮಾತುಕತೆಗೆ ದಿನ ನಿಗದಿ ಮಾಡಲಾಯಿತು.

ಮೇಲಿನ ಮೂರೂ ಘಟನೆಗಳು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿಯೇ ಸರಕಾರ ತಮ್ಮತ್ತ ತಿರುಗಿ ನೋಡುವಂತೆ, ತಮ್ಮ ಮಾತು ಕೇಳುವಂತೆ ಮಾಡಿದ ಕಾರ್ಮಿಕರ ಹೋರಾಟದ ಮಾದರಿಗಳು. ಸಾರಿಗೆ ನೌಕರರು ಆಗಾಗ ಇಂಥ ಹೋರಾಟಗಳನ್ನು ಮಾಡಿದರೂ ಸರಕಾರಗಳು ಬುದ್ಧಿ ಕಲಿತಿಲ್ಲ. ಅಂಗನವಾಡಿ ಕೆಲಸಗಾರರು ಹತ್ತಾರು ಸಾವಿರ ಸಂಖ್ಯೆಯಲ್ಲಿ ಒಗ್ಗಟ್ಟಿನಿಂದ ಒಂದೆಡೆ ಸೇರಿ ತಮ್ಮ ಹೋರಾಟದ ಮಾರ್ಗದಲ್ಲಿ ಹೊಸ ಮೈಲಿಗಲ್ಲು ನೆಟ್ಟಿದ್ದಾರೆ. ಮುಂಬರುವ ಸರಕಾರಗಳು ಇದಕ್ಕಿಂತಲೂ ಸಂವೇದನಾರಹಿತವಾಗಿರುತ್ತವೆ. ಆಗ ಹೋರಾಟ ಹೊಸ ಮಾದರಿಗಳನ್ನು ರೂಪಿಸಿಕೊಳ್ಳಬೇಕಾಗುತ್ತದೆ.



**ಮಳೆ**

ಪಾತಾಳ ತಳ ಕಂಡರೂ ಕಾಣುತ್ತಿಲ್ಲ ನೀರು
ನೀರಿಗಾಗಿ ಅತ್ತು ಒಣಗುತಿದೆ ಇದ್ದ ಕಣ್ಣೀರು
ಗಂಟಲೊಣಗಿ ಬಿರುಕು ಬಿಟ್ಟಿಹುದು ಇಳೆ
ಉಳಿದಿರುವ ಏಕೈಕ ಆಶಯ ಮುಂಗಾರುಮಳೆ
ಸುಡುವ ಭುವನ, ಬೆಂದ ಮನದ ಬಿಸಿ ಉಸಿರು
ಮಳೆ ಸುರಿದು ತಣಿಸು, ಕಂಗೊಳಿಸಲಿ
ಹಚ್ಚ ಹಸಿರು

ಶ್ರೀನಿವಾಸ ಕುಂಡಂತಾಯ
ಸಂಜಯ ನಗರ, ಬೆಂಗಳೂರು - ೯೪

**ಹೋರಾಟದ ಸಾಗರಕ್ಕೆ ಹೊಸ ನದಿ**

೧೯೭೫ ಐ.ಸಿ.ಡಿ.ಎಸ್. ಯೋಜನೆ ಅಡಿಯಲ್ಲಿ ಅಂಗನವಾಡಿಗಳನ್ನು ಸ್ಥಾಪಿಸಲಾಯಿತು. ಮಕ್ಕಳು ಮಹಿಳೆಯರ ಶಿಕ್ಷಣ, ಆರೋಗ್ಯವನ್ನು ಗಮನದಲ್ಲಿ ಇಟ್ಟುಕೊಂಡು ಕೇಂದ್ರ, ರಾಜ್ಯಗಳ ಸಹಯೋಗದಿಂದ ಆರಂಭಗೊಂಡ ಈ ಯೋಜನೆ ಮೊದಲು ಪ್ರಾಯೋಗಿಕವಾಗಿದ್ದಾಗ ನೂರಾರು ಸಂಖ್ಯೆಯಲ್ಲಿ ಕೆಲಸಗಾರರಿದ್ದರು. ೮೦ರ ದಶಕದಲ್ಲಿ ಯೋಜನೆ ವಿಸ್ತಾರವಾಗಿ ಸಾವಿರಾರು ಕೆಲಸಗಾರರಾದರು. ಇಂದು ರಾಜ್ಯದಲ್ಲಿ ೬೫ ಸಾವಿರ ಅಂಗನವಾಡಿ ಕೇಂದ್ರಗಳು, ಕೇಂದ್ರಕ್ಕೊಬ್ಬ ಕಾರ್ಯಕರ್ತೆ, ಸಹಾಯಕಿ ಸೇರಿ ೧,೩೦,೦೦೦ ಕೆಲಸಗಾರರಿದ್ದಾರೆ. ಆರಂಭದಲ್ಲಿ ೫೦,೭೫,೧೦೦ ರೂಪಾಯಿ ಹೀಗೆ ಗೌರವಧನದ ಹೆಸರಿನಲ್ಲಿ ಇವರನ್ನು ದುಡಿಸಿಕೊಳ್ಳಲಾಗುತ್ತಿತ್ತು. ೮೦ರ ದಶಕದಲ್ಲಿ ಎ.ಐ.ಟಿ.ಯು.ಸಿ. ಅಂಗನವಾಡಿ ಕಾರ್ಯಕರ್ತೆಯರ ಸಹಾಯಕಿಯರ ಫೆಡರೇಶನ್ ಮೂಲಕ ಇವರನ್ನು ಸಂಘಟಿಸಿತು. ಅಂದಿನಿಂದ ಹೋರಾಟ ನಡೆಸಿದ ಈ ಮಹಿಳೆಯರು ಸವೆಸಿದ ಹಾದಿ ಕಲ್ಲುಮುಳ್ಳಿನ ಕಣಿವೆ. ೧೯೮೫ರಿಂದ ೧೯೯೫ರವರೆಗಿನ ಹತ್ತು ವರ್ಷಗಳ ಕಾಲ ಅರೆಹೊಟ್ಟೆ, ಹರಕು ಸೀರೆಯೊಂದಿಗೆ ಅವರು ನಡೆಸಿದ ಹೋರಾಟಗಳು ರಾಜ್ಯದ ಕಾರ್ಮಿಕ ಇತಿಹಾಸದಲ್ಲಿಯೇ ದಾಖಲು ಆಗುವಂಥವು. ೧೯೭೫ರವರೆಗೆ ಈ ರಾಜ್ಯದ ಹಳ್ಳಿಗಳಲ್ಲಿ ಕೆಲವು ಶಾಲಾ ಶಿಕ್ಷಕಿಯರು, ಆಸ್ಪತ್ರೆ ನರ್ಸ್‌ಗಳು ಸಾರ್ವಜನಿಕವಾಗಿ ಕೆಲಸ ಮಾಡುತ್ತಿದ್ದರು. ಅವರು ಇಲಾಖೆ ನೌಕರರು, ನಿರ್ದಿಷ್ಟ ಸಂಬಳ, ಸರಕಾರಿ ನೌಕರರ ಸಂಘದ ರಕ್ಷಣೆ ಅವರಿಗಿತ್ತು. ಆದರೆ ೧೦೦, ೧೫೦ ರೂ. ಗೌರವಧನ ಪಡೆದು ಮಕ್ಕಳ, ಗರ್ಭಿಣಿ ಸ್ತ್ರೀಯರ ಆರೈಕೆ ಮಾಡುವ ಈ ಕೆಲಸಕ್ಕೆ ಬಂದವರು ಬಡರೈತರ ಮಕ್ಕಳು, ಕೂಲಿಕಾರರ ಮಕ್ಕಳು, ಸಾಮಾಜಿಕವಾಗಿ ಹಿಂದುಳಿದವರು, ಕೌಟುಂಬಿಕವಾಗಿ ತೊಂದರೆಯಲ್ಲಿದ್ದವರು. ಕೆಳವರ್ಗ, ಕೆಳ ಮಧ್ಯಮ ವರ್ಗದ ಈ ಯುವತಿಯರು ಈ ಕೆಲಸಕ್ಕೆ ಬಂದಾಗ ಸಾರ್ವಜನಿಕರ ದೃಷ್ಟಿಯಲ್ಲಿ ಅವರು ಸರಕಾರಿ ನೌಕರರು, ಸರಕಾರದ ದೃಷ್ಟಿಯಲ್ಲಿ ಅವರು ನೌಕರರಲ್ಲ ಗೌರವ ಕಾರ್ಯಕರ್ತೆಯರು. ಕೇಂದ್ರ ಸರಕಾರ ನಮ್ಮವರೆನ್ನಲಿಲ್ಲ. ರಾಜ್ಯ ಸರಕಾರ ನಮ್ಮವರಲ್ಲ ಎಂದರು. ಕರ್ನಾಟಕ ಇನ್ನೂ ಊಳಿಗಮಾನ್ಯ ವ್ಯವಸ್ಥೆಯಲ್ಲಿ ಇದ್ದಾಗ ಹೆಣ್ಣು



ಅಂಗನವಾಡಿ ಕೆಲಸಗಾರರ ಪ್ರತಿಭಟನಾ ವೇದಿಕೆಯಲ್ಲಿ ಮುಖ್ಯಮಂತ್ರಿ ಧರಂ ಸಿಂಗ್ ಅವರಿಂದ 'ಬೇಲೂರ ಘೋಷಣೆ' ರದ್ದತಿ ಭರವಸೆ

ಭೋಗದ ವಸ್ತು ಎಂದು ಕಾಮುಕ ಕಣ್ಣಿನಲ್ಲೇ ಇವರನ್ನು ನೋಡುವಾಗ ಸಾವಿರಾರು ಸಂಖ್ಯೆಯ ಯುವತಿಯರು ಅಂಗನವಾಡಿ ಕೇಂದ್ರಗಳಲ್ಲಿ ಹಳ್ಳಿ, ನಗರಗಳ ರಸ್ತೆಯಲ್ಲಿದ್ದರು. ಇವರ ಕೆಲಸ ಕೇವಲ ಅಂಗನವಾಡಿ ಕೇಂದ್ರಕ್ಕೆ ಸೀಮಿತವಾಗಿರಲಿಲ್ಲ. ಜನಗಣತಿಯಿಂದ ದನಗಣತಿವರೆಗೆ ಎಲ್ಲ ಸರಕಾರಿ ಕೆಲಸಕ್ಕೆ ಇವರನ್ನು 'ಬಳಸ'ಲಾಯಿತು. ಇವರು ಸರಕಾರಿ ನೌಕರರಲ್ಲದಿದ್ದರೂ ಮಹಿಳಾ ಮತ್ತು ಮಕ್ಕಳ ಇಲಾಖೆ ಸೇರಿ, ಎಲ್ಲ ಇಲಾಖೆಗಳ ಅಧಿಕಾರಿಗಳು ಇವರ ಮೇಲೆ ಅಧಿಕಾರ ಚಲಾಯಿಸಿದ್ದಾರೆ. ಗ್ರಾಮ ಪಂಚಾಯಿತಿ ಸದಸ್ಯನಿಂದ, ಜಿಲ್ಲಾ ಪಂಚಾಯಿತಿ ಅಧ್ಯಕ್ಷನವರೆಗೆ, ಶಾಸಕ, ಸಂಸದ ಎಲ್ಲರೂ ಇವರ ಮೇಲೆ ಅಧಿಕಾರಿಗಳೇ. ಆದರೆ ನಮ್ಮನ್ನೂ ಸರಕಾರಿ ನೌಕರರೆಂದು ಪರಿಗಣಿಸಿ ಎಂದಾಗ ರಾಜ್ಯ ಸರಕಾರ ಕೇಂದ್ರದ ಕಡೆಗೆ, ಕೇಂದ್ರ ಸರಕಾರ ರಾಜ್ಯದ ಕಡೆಗೆ ತೋರಿಸಿದ್ದಾರೆ.

ಎಂಭತ್ತರ ದಶಕದಲ್ಲಿ ಅಂಗನವಾಡಿ ಕಾರ್ಯಕರ್ತೆಯರ ಕೆಲಸದ ಬಗ್ಗೆ ಸರಿಯಾದ ಮಾಹಿತಿ ಇಲ್ಲದೆ ಊರ ಪುಢಾರಿಗಳು ಇವರ ಶೋಷಣೆ ಮಾಡಿದ್ದಾರೆ. ಸಾಮಾಜಿಕವಾಗಿ, ರಾಜಕೀಯವಾಗಿ ಯಾವ ಬಲವೂ ಇಲ್ಲದ ಬಡಕುಟುಂಬಗಳಿಂದ ಬಂದ ಈ ಯುವತಿಯರ ಮೇಲೆ ಹಲ್ಲೆಗಳಾಗಿವೆ, ಅತ್ಯಾಚಾರಗಳಾಗಿವೆ, ಕಳ್ಳತನದ ಆರೋಪ ಹೊರಿಸಿ ಕಂಬಕ್ಕೆ ಕಟ್ಟಿದ್ದಾರೆ. ಇಷ್ಟಾದರೂ ಅವರ ಗೌರವಧನ ವರ್ಷದ ಬಜೆಟ್‌ಗಳಲ್ಲಿ ೨೦೦, ೫೦೦ ಹೆಚ್ಚಳವಾಗಿ ಅರೆಹೊಟ್ಟೆಯೇ ಅವರಿಗೆ ಗತಿಯಾಗಿತ್ತು. ೯೦ರ ದಶಕದಲ್ಲಿ ಎ.ಐ.ಟಿ.ಯು.ಸಿ. ಸಂಘಟನೆ ಅಂಗನವಾಡಿ ನೌಕರರನ್ನು ಸರಕಾರಿ ನೌಕರರೆಂದು ಪರಿಗಣಿಸಬೇಕೆಂದು ಕರ್ನಾಟಕ ಆಡಳಿತ ನ್ಯಾಯಮಂಡಲಿಗೆ ಹೋಯಿತು. ಹಿರಿಯ ನ್ಯಾಯವಾದಿ, ಎ.ಐ.ಟಿ.ಯು.ಸಿ. ಅಧ್ಯಕ್ಷರಾಗಿದ್ದ ಎಂ. ಸಿ. ನರಸಿಂಹನ್ ವಾದ ಮಾಡಿ ಗೆದ್ದರು. ಕೆ.ಎ.ಟಿ. ಆದೇಶದ ಪ್ರಕಾರ ಅಂಗನವಾಡಿ ಕಾರ್ಯಕರ್ತೆಯರನ್ನು, ಸಹಾಯಕಿಯರನ್ನು ಸರಕಾರಿ ನೌಕರರೆಂದು ಪರಿಗಣಿಸಬೇಕಾಗಿತ್ತು. ಆದರೆ ಅಂದಿನ ಜೆ. ಎಚ್. ಪಟೇಲರ ಸರಕಾರ ಕೆ.ಎ.ಟಿ. ಆದೇಶವನ್ನು ಪ್ರಶ್ನಿಸಿ ಸುಪ್ರೀಂ ಕೋರ್ಟಿಗೆ ಹೋಯಿತು. ಅಲ್ಲಿ ಈ ಆದೇಶ ಮಾನ್ಯತೆ ಪಡೆಯಲಿಲ್ಲ. ದೇವೇಗೌಡರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದಾಗ ಅಂಗನವಾಡಿಗಳನ್ನು ಖಾಸಗೀಕರಣಗೊಳಿಸುವ ಯತ್ನ ನಡೆಯಿತು. ಅಂಗನವಾಡಿ ಸಂಘಟನೆಗಳೆಲ್ಲ ಸೇರಿ ದೊಡ್ಡ ಹೋರಾಟ ನಡೆಸಿ ಅದನ್ನು ತಡೆದವು. ಎಸ್. ಎಂ. ಕೃಷ್ಣ ಅವರ ಸರಕಾರದ ಕೊನೆ ಅವಧಿಯಲ್ಲಿ ಅಂಗನವಾಡಿಗಳನ್ನು ಗ್ರಾಮ ಪಂಚಾಯಿತಿಗೆ ವಹಿಸಬೇಕೆಂದು 'ಬೇಲೂರು' ಘೋಷಣೆ ಮಾಡಿದರು. ಅದರ ವಿರುದ್ಧವೂ ಹೋರಾಟ ನಡೆಯಿತು. ಬೆಂಗಳೂರಿನ ಗ್ಯಾಸ್ ಕಾಲೇಜು ಮೈದಾನದಲ್ಲಿ ಎ.ಐ.ಟಿ.ಯು.ಸಿ. ಬ್ಯಾನರ್‌ನಲ್ಲಿ ಸೇರಿದ ಸುಮಾರು ೨೦,೦೦೦ ಅಂಗನವಾಡಿ ಕೆಲಸಗಾರರ ಪ್ರತಿಭಟನಾ ವೇದಿಕೆಗೆ ಬಂದ ಅಂದಿನ ಮುಖ್ಯಮಂತ್ರಿ ಧರಂಸಿಂಗ್ ಅವರು ಬೇಲೂರು ಘೋಷಣೆಯನ್ನು ರದ್ದುಪಡಿಸುವ ತೀರ್ಮಾನ ಕೈಗೊಂಡರು. ಹೀಗೆ ಅಂಗನವಾಡಿ ಕೆಲಸಗಾರರು ಹಲವಾರು ಸಲ ದೆಹಲಿಗೆ ಹೋಗಿದ್ದಾರೆ, ಬೆಂಗಳೂರಿಗೆ ಬಂದಿದ್ದಾರೆ. ಜಿಲ್ಲಾಧಿಕಾರಿ, ಜಿಲ್ಲಾ ಪಂಚಾಯತ್ ಎಲ್ಲ ಕಡೆ ನಿರಂತರ ಹೋರಾಟ ಮಾಡಿದ್ದಾರೆ.



ದೆಹಲಿ ಬೀದಿಯಲ್ಲಿ ಅಂಗನವಾಡಿ ಕೆಲಸಗಾರರ ಪ್ರತಿಭಟನೆ

ಕಳೆದ ೪೦ ವರ್ಷಗಳಿಂದ ಹೋರಾಟದ ಮೂಲಕವೇ ಪ್ರತಿ ಪೈಸೆಯನ್ನು ಪಡೆದಿರುವ ಈ ಅಂಗನವಾಡಿ ಮಹಿಳೆಯರು ರಾಜ್ಯ ಮಹಿಳಾ ಹೋರಾಟಕ್ಕೆ ಹೊಸ ಆಯಾಮವನ್ನೇ ಕೊಟ್ಟಿದ್ದಾರೆ. ಅಂಗನವಾಡಿ ನೌಕರರ ಸಂಘಟಕರಾಗಿದ್ದ ಬಿ. ಕೆ. ಸುಂದರೇಶ ಈ ಸಂಘಟನೆಗಾಗಿ ಪ್ರಾಣ ತೆತ್ತಿದ್ದಾರೆ. ಕೇಂದ್ರ, ರಾಜ್ಯ ಸರಕಾರಗಳು ತಮ್ಮ ಹೊಣೆಯಿಂದ ನುಣುಚಿಕೊಳ್ಳುತ್ತಲೇ ಬಂದಿವೆ. ೪೦ ವರ್ಷದ ಹೋರಾಟದಲ್ಲಿ, ವಿವಿಧ ಸರಕಾರಗಳಿಂದ ಹಂತ ಹಂತವಾಗಿ ಇವರು ಪಡೆದ ವೇತನ ಕಾರ್ಯಕರ್ತೆಯರಿಗೆ ಇಲ್ಲಿಯವರೆಗೆ ೬೦೦೦ ಸಹಾಯಕಿಯರಿಗೆ ರೂ. ೩೦೦೦. ಕಳೆದ ಮಾರ್ಚ್‌ನಲ್ಲಿ ಮುಖ್ಯಮಂತ್ರಿ ಸಿದ್ದರಾಮಯ್ಯನವರು ೧೦೦೦ ರೂ. ಹೆಚ್ಚಳ ಮಾಡಿದ್ದರು. ಸಿ.ಐ.ಟಿ.ಯು. ಸಂಘಟನೆ ಅಹೋರಾತ್ರಿ ಧರಣಿ ನಡೆಸಿ ಕಾರ್ಯಕರ್ತೆಯರಿಗೆ ೧೦,೦೦೦ ಸಹಾಯಕಿಯರಿಗೆ ೫೦೦೦ ಕೊಡಬೇಕೆಂದು ಕೇಳಿತ್ತು. ಕೊನೆಗೆ ಸಿ.ಐ.ಟಿ.ಯು., ಎ.ಐ.ಟಿ.ಯು.ಸಿ., ಇತರ ಅಂಗನವಾಡಿ ಕೆಲಸಗಾರರ ಸಂಘಟನೆಯವರನ್ನು ಕರೆದು ಮಾತನಾಡಿದ ಮುಖ್ಯಮಂತ್ರಿಗಳು ಎರಡು ಸಾವಿರ ಹೆಚ್ಚುವರಿ ವೇತನ ಘೋಷಿಸಿದರು. ಅಲ್ಲಿಗೆ ಕಾರ್ಯಕರ್ತೆಯರಿಗೆ ೮೦೦೦ ರೂ. ಸಹಾಯಕಿಯರಿಗೆ ೪೦೦೦ ರೂ. ದೊರೆಯುತ್ತದೆ. ಇದರಲ್ಲಿ ದೇಶದ ಅಭಿವೃದ್ಧಿ ಬಗ್ಗೆ, ದೇಶವಾಸಿಯೋ ಎಂದೇ ಪ್ರೀತಿಯಿಂದ ಕರೆಯುವ ಮೋದಿಯವರ ಪಾಲು ಏನೂ ಇಲ್ಲ. ಒಟ್ಟು ಈ ಗೌರವಧನದಲ್ಲಿ ಕೇಂದ್ರ ಸರಕಾರ ಕಾರ್ಯಕರ್ತೆಯರಿಗೆ ೧೮೦೦, ಸಹಾಯಕಿಯರಿಗೆ ೯೦೦ ಮಾತ್ರ ಕೊಡುತ್ತದೆ. ಮಾರ್ಚ್ ತಿಂಗಳಲ್ಲಿ ಹೋರಾಟಕ್ಕೊಂದು ಹೊಸ ಆಯಾಮ ಕೊಟ್ಟ ಈ ಅಂಗನವಾಡಿ ಮಹಿಳೆಯರಿಗೆ, ಅವರ ಸಂಘಟಕರಿಗೆ ಮೇ ದಿನ ಶುಭಾಶಯಗಳು.

ಅಂಗನವಾಡಿ ನೌಕರರ ಹೋರಾಟ ಕೇವಲ ವೇತನದ ಪ್ರಶ್ನೆಯಲ್ಲ. ಅದು ಬಡಮಹಿಳೆಯರ ಬದುಕಿನ ಪ್ರಶ್ನೆ. ರಾಜ್ಯದ, ದೇಶದ ಮಹಿಳಾ ಚಳುವಳಿಗಳಲ್ಲಿ ಅಂಗನವಾಡಿ ಕೆಲಸಗಾರರ ಹೋರಾಟವನ್ನು ಪರಿಗಣಿಸಬೇಕು. ಇದು ಬರೀ ಟ್ರೇಡ್ ಯೂನಿಯನ್ ಹೋರಾಟವಲ್ಲ. ಲಕ್ಷಾಂತರ ಮಹಿಳೆಯರ ಸಬಲೀಕರಣದ ಹೋರಾಟ. ಈ ಯೋಜನೆ ಆರಂಭವಾದಾಗಿನಿಂದ ಹುಟ್ಟಿದ ಕೂಸುಗಳ ಸಾವಿನ ಸಂಖ್ಯೆ ಕಡಿಮೆಯಾಗಿದೆ, ಗರ್ಭಿಣಿ ಸ್ತ್ರೀಯರ ಸಾವಿನ ಸಂಖ್ಯೆ ಕಡಿಮೆಯಾಗಿದೆ. ಈ ದೇಶಕ್ಕೆ ಇದಕ್ಕಿಂತಲೂ ಕೊಡುಗೆ ಬೇಕೇ ? ಈ ೮೦೦೦, ೪೦೦೦ದಲ್ಲಿ ಅವರು ಒಂದು ಕುಟುಂಬ ನಡೆಸಲು ಸಾಧ್ಯವೇ ? ಕೇಂದ್ರ ಸರಕಾರ, ರಾಜ್ಯ ಸರಕಾರ ಏಕಾಂಗಿಯಾಗಿ ಅಥವಾ ಸಹಭಾಗಿಯಾಗಿ ಈ ಮಹಿಳೆಯರನ್ನು ಸರಕಾರಿ ನೌಕರರೆಂದು ಪರಿಗಣಿಸಬೇಕು. ಈ ಮಹಿಳೆಯರನ್ನು ಸಂಘಟಿಸುವ ಸಂಘಟನೆಗಳು ಚಂದಾ ವಸೂಲಿ ಮಾಡಿ ವರ್ಷಕ್ಕೊಂದೆರಡು ಪ್ರತಿಭಟನೆ ಮಾಡಿದರೆ ಸಾಲದು. ಅವರಲ್ಲಿ ಸ್ತ್ರೀಪ್ರಜ್ಞೆ, ಕಾರ್ಮಿಕ ಪ್ರಜ್ಞೆ, ರಾಜಕೀಯ ಪ್ರಜ್ಞೆ ಬೆಳೆಸಬೇಕು. ಅವರಲ್ಲಿ ಉತ್ತಮ ನಾಯಕಿಯರಾಗುವ ಗುಣವಿದೆ. ಅವರಿಗೆ ಹೋರಾಟದ ಪರಂಪರೆಯಿದೆ. ಈ ಸಮಾಜದ ಬದಲಾವಣೆಗಾಗಿ ಅವರು ದುಡಿವಂತಾಗಬೇಕು.

**ಡಾ॥ ಸಿದ್ದನಗೌಡ ಪಾಟೀಲ**
ಘಾಟೆಭವನ, ಜಿ. ಡಿ. ಪಾರ್ಕ್, ವೈಯಾಲಿಕಾವಲ್
ಬೆಂಗಳೂರು – ೫೬೦ ೦೦೩



# ಶ್ರಮಿಕ ಸಂಗಾತಿ : ಎಂ. ಸಿ. ನರಸಿಂಹನ್

**ಎಂ. ಸಿ. ನರಸಿಂಹನ್ ಬೆಂಗಳೂರಿನಲ್ಲಿ ಇಂಜಿನಿಯರಿಂಗ್ ವಿದ್ಯಾಭ್ಯಾಸ ಮಾಡುವಾಗಲೇ ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್ (ಎ.ಐ.ಎಸ್.ಎಫ್.) ಸಂಘಟನೆಯ ಮೂಲಕ ಸಾಮಾಜಿಕ ಹೋರಾಟಕ್ಕಿಳಿದವರು. ೧೯೪೨-೪೩ರಲ್ಲಿ ದೇಶದ ಸ್ವಾತಂತ್ರ್ಯ ಹೋರಾಟ ತೀವ್ರವಾಗಿತ್ತು, ಕಾರ್ಮಿಕ ಚಳುವಳಿಗಳು ಶೋಷಣೆಯ ವಿರುದ್ಧ ಹೋರಾಟಕ್ಕಿಳಿದಿದ್ದವು. ಆಗ ಮಾರ್ಕ್ಸ್‌ವಾದಿ ತತ್ವಗಳಿಗೆ ಮಾರುಹೋದ ನರಸಿಂಹನ್ ವಿದ್ಯಾಭ್ಯಾಸವನ್ನೂ ತೊರೆದು ಭಾರತ ಕಮ್ಯುನಿಸ್ಟ್ ಪಕ್ಷದ ಪೂರ್ಣಾವಧಿ ಕಾರ್ಯಕರ್ತನಾಗಿ ದುಡಿವ ವರ್ಗದ ಹೋರಾಟದಲ್ಲಿ ತೊಡಗಿಕೊಂಡರು.**

ಅದೊಂದು ಆಪ್ತವಾದ ಸಭೆ. ಬದುಕಿನ ೯೫ ವರ್ಷಗಳಲ್ಲಿ ೭೫ ವರ್ಷ ಗಳನ್ನು ದುಡಿವ ವರ್ಗದ ಹೋರಾಟಕ್ಕೆ, ಸಾಮಾಜಿಕ ಬದಲಾವಣೆಗೆ ಅರ್ಪಿಸಿದ ತ್ಯಾಗಜೀವಿ ಎಂ. ಸಿ. ನರಸಿಂಹನ್ ಅವರಿಗೆ ಅಭಿವಂದನೆ ಕಾರ್ಯಕ್ರಮ. ಸಾಮಾಜಿಕ ಬದುಕಿನಲ್ಲಿ ಆದರ್ಶಗಳೇ ಮಾಯವಾಗುತ್ತಿರುವಾಗ, ಸ್ವಾರ್ಥವೇ ಮಾದರಿಯಾಗು ತ್ತಿರುವಾಗ ಜನಪರವಾದ ಆಶಯಗಳನ್ನೇ ಬದುಕಿನ ಗುರಿಯಾಗಿಸಿಕೊಂಡು ಬದುಕಿದವರನ್ನು ಅಭಿವಂದಿಸುವುದು ಸಮಾಜದ ಜವಾಬ್ದಾರಿ. ಅಂಥ ಜವಾಬ್ದಾರಿಯನ್ನು ನಿರ್ವಹಿಸಿದ ಕಾರ್ಯಕ್ರಮವದು. ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ, ನವಕರ್ನಾಟಕ ಪ್ರಕಾಶನ ಜಂಟಿಯಾಗಿ ಅಂಥ ಒಂದು ಕಾರ್ಯಕ್ರಮವನ್ನು ದಿನಾಂಕ ೧೬.೪.೨೦೧೭ರಂದು ಬೆಂಗಳೂರಿನ ಗಾಂಧಿ ಭವನದಲ್ಲಿ ನಡೆಸಿಕೊಟ್ಟವು.

ಎಂ. ಸಿ. ನರಸಿಂಹನ್ ಬೆಂಗಳೂರಿನಲ್ಲಿ ಇಂಜಿನಿಯರಿಂಗ್ ವಿದ್ಯಾಭ್ಯಾಸ ಮಾಡುವಾಗಲೇ ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್ (ಎ.ಐ.ಎಸ್.ಎಫ್.) ಸಂಘಟನೆಯ ಮೂಲಕ ಸಾಮಾಜಿಕ ಹೋರಾಟಕ್ಕಿಳಿದವರು. ೧೯೪೨-೪೩ರಲ್ಲಿ ದೇಶದ ಸ್ವಾತಂತ್ರ್ಯ ಹೋರಾಟ ತೀವ್ರವಾಗಿತ್ತು, ಕಾರ್ಮಿಕ ಚಳುವಳಿಗಳು ಶೋಷಣೆಯ ವಿರುದ್ಧ ಹೋರಾಟಕ್ಕಿಳಿದಿದ್ದವು. ಆಗ ಮಾರ್ಕ್ಸ್‌ವಾದಿ ತತ್ವಗಳಿಗೆ ಮಾರುಹೋದ ನರಸಿಂಹನ್ ವಿದ್ಯಾಭ್ಯಾಸವನ್ನೂ ತೊರೆದು ಭಾರತ ಕಮ್ಯುನಿಸ್ಟ್ ಪಕ್ಷದ ಪೂರ್ಣಾವಧಿ ಕಾರ್ಯಕರ್ತನಾಗಿ ದುಡಿವ ವರ್ಗದ ಹೋರಾಟದಲ್ಲಿ ತೊಡಗಿಕೊಂಡರು. ಪಕ್ಷ ಅವರನ್ನು ಕೋಲಾರ ಚಿನ್ನದ ಗಣಿಯ ಕಾರ್ಮಿಕರ ಹೋರಾಟವನ್ನು ಸಂಘಟಿಸಲು ಕಳಿಸಿತು. ಸುಮಾರು ೨೫ ವರ್ಷ ಅಲ್ಲಿ ಕಾರ್ಮಿಕರನ್ನು ಸಂಘಟಿಸಿ ಅವರ ಪರವಾಗಿ ಹೋರಾಡಿದರು. ಪರಿಣಾಮವಾಗಿ ದೇಶದ ಮೊದಲ ಚುನಾವಣೆ ೧೯೫೨ರಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷದ ವಾಸನ್ ಎನ್ನುವವರು ಕೆ.ಜಿ.ಎಫ್.ನಿಂದ ರಾಜ್ಯದ ವಿಧಾನಸಭೆಗೆ ಆಯ್ಕೆಯಾದರು. ಎರಡನೇ ಚುನಾವಣೆ ೧೯೫೭ರಲ್ಲಿ ಕೆ.ಜಿ.ಎಫ್.ನ ಕಾರ್ಮಿಕ ವರ್ಗ ನರಸಿಂಹನ್ ಅವರನ್ನೇ ವಿಧಾನ ಸಭೆಗೆ ಆಯ್ಕೆಮಾಡಿ ಕಳಿಸಿತು. ಕಾರ್ಮಿಕ ವರ್ಗ ತೋರಿದ ಪ್ರೀತಿ, ಕಾರ್ಮಿಕ ವರ್ಗದ ಬಗೆಗಿದ್ದ ನರಸಿಂಹನ್ ಅವರ ಕಾಳಜಿ ಒಂದಕ್ಕೊಂದು ಪೂರಕವಾಗಿದ್ದವು. ೧೯೬೨ರಲ್ಲಿ ಕಮ್ಯುನಿಸ್ಟ್ ಪಕ್ಷದ ನಾಯಕರನ್ನು ನೆಹರೂ ಸರಕಾರ ಜೈಲಿಗೆ ತಳ್ಳಿತು. ಆಗ ಬಂಧಿತರಾಗಿ ಬೆಂಗಳೂರು ಜೈಲಿನಲ್ಲಿದ್ದ ನರಸಿಂಹನ್ ಅವರಿಗೆ ದಾವಣಗೆರೆಯ ಹತ್ತಿಗಿರಣಿ ಕಾರ್ಮಿಕ ಹೋರಾಟದಲ್ಲಿ ಮಾಲೀಕರ ಪಿತೂರಿಯಿಂದಾಗಿ ಜೈಲು ಸೇರಿದ ಕಾರ್ಮಿಕರ ನಾಯಕರು ಜೊತೆಗೂಡಿದರು. ಆಗ ಕಾರ್ಮಿಕರ ಕಾನೂನು ಹೋರಾಟಕ್ಕೆ ನ್ಯಾಯವಾದಿಗಳ ಅವಶ್ಯಕತೆಯನ್ನು ಮನಗಂಡು ತಾವು ಬದುಕಿನುದ್ದಕ್ಕೂ ಕಾರ್ಮಿಕರ ನ್ಯಾಯಕ್ಕಾಗಿ ಹೋರಾಡಬೇಕೆಂದು ತೀರ್ಮಾನಿಸಿ ಜೈಲಿನಿಂದ ಹೊರಬಂದ ಮೇಲೆ ಕಾನೂನು ವ್ಯಾಸಂಗ ಮಾಡಿ ೧೯೬೫ರಲ್ಲಿ ವಕೀಲ ವೃತ್ತಿ ಆರಂಭಿಸಿದರು. ಅವರ ಅಧ್ಯಯನಶೀಲತೆ, ವೃತ್ತಿಪರತೆ, ಕಾರ್ಮಿಕರಿಗೆ ನ್ಯಾಯ ಒದಗಿಸುವ ಬದ್ಧತೆಯಿಂದಾಗಿ ಅವರು ಕಾರ್ಮಿಕರ ನ್ಯಾಯಾಂಗ ಹೋರಾಟದ ಐಕಾನ್ ಆಗಿ ಬೆಳೆದರು. ಅವರ ಕಾನೂನು ಹೋರಾಟದ ಪರಿಶ್ರಮದಿಂದಾಗಿ ಲಕ್ಷಾಂತರ ಕಾರ್ಮಿಕ ಕುಟುಂಬಗಳು ನೆಮ್ಮದಿಯ ಬದುಕನ್ನು ಕಂಡಿವೆ. ಗಣಿ, ಟೆಕ್ಸ್‌ಟೈಲ್, ಪ್ಲ್ಯಾಂಟೇಶನ್ ಬೀಡಿ, ಸಾರಿಗೆ, ಅಂಗನವಾಡಿ, ಸಹಕಾರಿ ಕ್ಷೇತ್ರ ಹೀಗೆ ಹಲವಾರು ವಲಯಗಳಲ್ಲಿ ದುಡಿಯುತ್ತಿರುವ ಕಾರ್ಮಿಕರ ಪರವಾಗಿ, ಮಾಲೀಕವರ್ಗ, ಮ್ಯಾನೇಜ್‌ಮೆಂಟ್‌ಗಳ ಶೋಷಣೆ, ದಬ್ಬಾಳಿಕೆಗೆ ಎದುರಾಗಿ ನ್ಯಾಯಾಲಯದಲ್ಲಿ ವಾದ ಮಂಡಿಸಿ ನ್ಯಾಯ ದೊರಕಿಸಿಕೊಟ್ಟಿದ್ದಾರೆ. ಹಲವಾರು ಕಾರ್ಮಿಕ ಪರ ಕಾನೂನುಗಳು ರೂಪುಗೊಳ್ಳಲು ಕಾರಣಕರ್ತರಾಗಿದ್ದಾರೆ. ಕಾರ್ಮಿಕ ವರ್ಗದ ಕುರಿತ ಅವರ ಬದ್ಧತೆ ಯಾವ ಮಟ್ಟಕ್ಕಿತ್ತೆಂದರೆ ಅವರಿಗೆ ಒಂದು ಸಲ ಹೈಕೋರ್ಟ್ ನ್ಯಾಯಾಧೀಶರಾಗಲು ಆಹ್ವಾನ ಬಂದಿತ್ತು. ಅದನ್ನು ನಯವಾಗಿಯೇ ತಿರಸ್ಕರಿಸಿದ ನರಸಿಂಹನ್ ತಾವು ಬದುಕಿನುದ್ದಕ್ಕೂ ದುಡಿಯುವ ವರ್ಗದ ಪರವಾದ ನ್ಯಾಯವಾದಿ ಯಾಗಿಯೇ ಇರುತ್ತೇನೆಂದು ಹೇಳಿದರು. ಈ ಸಂಗತಿಯನ್ನು ನ್ಯಾಯಮೂರ್ತಿ ವ್ಹಿ. ಎಸ್. ಮಳಿಮಠ ಅವರು ಸಾರ್ವಜನಿಕ ಸಭೆಯಲ್ಲಿಯೇ ಹೇಳಿದರು. ಪ್ರತಿಭಾವಂತ ನ್ಯಾಯವಾದಿ ನರಸಿಂಹನ್ ಅವರು ಅಂದು ಹೈಕೋರ್ಟ್ ನ್ಯಾಯಮೂರ್ತಿಗಳಾಗಲು ಒಪ್ಪಿಕೊಂಡಿದ್ದರೆ ಸುಪ್ರೀಂ ಕೋರ್ಟ್‌ವರೆಗೂ ಹೋಗಿ ದೇಶವೇ ಗಮನಿಸುವಂಥ ಗೌರವಿಸುವಂಥ ನ್ಯಾಯಮೂರ್ತಿಗಳ ಸಾಲಿನಲ್ಲಿರುತ್ತಿದ್ದರು. ಅದನ್ನೆಲ್ಲ ತೊರೆದ ನರಸಿಂಹನ್ ದುಡಿವ ವರ್ಗದ ಹಕ್ಕುಗಳ ಬದುಕಿನ ಕಾವಲುಗಾರನಾಗಿ ಬದುಕಿದರು. ಕೇವಲ ನ್ಯಾಯಾಲಯದಲ್ಲಿ ಮಾತ್ರವಲ್ಲ, ಎ.ಐ.ಟಿ.ಯು.ಸಿ. ಕಾರ್ಮಿಕ ಸಂಘಟನೆಯ ನಾಯಕರಾಗಿ ಬೀದಿಗಿಳಿದು ಹೋರಾಡಿದವರು ನರಸಿಂಹನ್. ಯಾವುದೇ ಕಾರ್ಮಿಕ ಸಂಘವಿರಲಿ, ನೌಕರರಿರಲಿ ಅನ್ಯಾಯವಾಗಿದೆ ಎಂದಾದರೆ ಅವರ ಪರವಾಗಿ ನಿಲ್ಲುತ್ತಿದ್ದ ನರಸಿಂಹನ್ ಸಂಘಟನೆಗಳ ಮಿತಿ ದಾಟಿ ಕಾರ್ಮಿಕ ವರ್ಗದ ಹಿತಾಸಕ್ತಿ ಕಾಪಾಡಲು ತಮ್ಮನ್ನು ತೊಡಗಿಸಿಕೊಂಡವರು. ನರಸಿಂಹನ್ ಅಭಿವಂದನೆ ಕಾರ್ಯಕ್ರಮದಲ್ಲಿ ನ್ಯಾಯಮೂರ್ತಿ ಎ. ಜೆ. ಸದಾಶಿವ ಅವರು ಕಮ್ಯುನಿಸ್ಟ್ ಚಳುವಳಿಗಳು ವಿವಿಧ ಪಂಗಡಗಳಾಗಿ ನಡೆಯುತ್ತಿರುವ ಇಂದಿನ ಸಂದರ್ಭದಲ್ಲಿ ಎಲ್ಲರನ್ನೂ ಒಂದುಗೂಡಿಸಿ ಮುನ್ನಡೆಸುವಂಥ ಪರಿಪೂರ್ಣ ವ್ಯಕ್ತಿತ್ವ ನರಸಿಂಹನ್ ಅವರದು, ಅವರಂಥ ವ್ಯಕ್ತಿಗಳು ಇಂದಿನ ಸಮಾಜಕ್ಕೆ ಅವಶ್ಯ ಎಂದು ಹೇಳಿದ್ದು ನರಸಿಂಹನ್ ಅವರ ವ್ಯಕ್ತಿತ್ವವನ್ನು ಸಾದರಪಡಿಸುತ್ತದೆ. ಅಸಹಾಯಕ ಕಾರ್ಮಿಕರು, ಕಾರ್ಮಿಕ ಸಂಘಟನೆಗಳು ಬಂದಾಗ ಹಣ ಪಡೆಯದೆ ಅವರ ಪರವಾಗಿ ನ್ಯಾಯಾಲಯದಲ್ಲಿ ಕೆಲಸ ಮಾಡಿದ ನರಸಿಂಹನ್ ಅವರ ಮನೋಭಾವವನ್ನು ಅವರ ಒಡನಾಡಿ ನ್ಯಾಯವಾದಿ ಕೆ. ಸುಬ್ಬರಾವ್ ಹೇಳಿದ್ದು ನರಸಿಂಹನ್ ನಿಜವಾದ ಶ್ರಮಿಕ ಸಂಗಾತಿ ಎಂಬುದನ್ನು ಸಾಬೀತುಪಡಿಸಿತ್ತು.

ಎಂ. ಸಿ. ನರಸಿಂಹನ್ ೧೯೫೭ರಿಂದ ೬೨ರವರೆಗೆ ವಿಧಾನಸಭೆಯ ಸದಸ್ಯನಾಗಿದ್ದಾಗ ಒಬ್ಬ ಜನಪರ ಶಾಸಕ ಹೇಗಿರಬೇಕು ಎಂಬುದಕ್ಕೆ ಮಾದರಿಯಾಗಿದ್ದವರು. ಕಲಾಪಗಳಲ್ಲಿ ಅವರು ಮಾಡಿದ ವಾದ, ಕೇಳಿದ ಪ್ರಶ್ನೆಗಳು, ಗುರುತಿಸಿದ ಸಮಸ್ಯೆಗಳು, ಅದಕ್ಕೂ ಅವರು ಮಾಡಿದ ಅಧ್ಯಯನ, ವಾದ ಮಂಡನೆಯ ವಿಷಯಗಳು ಕರ್ನಾಟಕ ಶಾಸನಸಭೆಯ ಬಹುತೇಕ ಶಾಸಕರಿಗೆ

**ಶ್ರೀಸುಮಿತ್ರಾಸುತ ಅಗಸಬಾಳ**

ಅನುಕರಣೀಯವಾಗಿದ್ದವು. ಶಾಸಕರಾಗಿ ಕೆಲಸ ಮಾಡಿದ ನರಸಿಂಹನ್ ಅವರ ಐದು ವರ್ಷದ ಕಾರ್ಯವೈಖರಿ ಹೇಗಿತ್ತೆಂದರೆ ಆಡಳಿತ ಹಾಗೂ ವಿರೋಧ ಪಕ್ಷಗಳ ಶಾಸಕರೂ ಅವರಿಂದ ಪ್ರಭಾವಿತರಾಗಿದ್ದರು. ಅದರ ಪರಿಣಾಮವೇ ೧೯೬೭ರಲ್ಲಿ ವಿಧಾನ ಪರಿಷತ್‌ಗೆ ನಡೆದ ಚುನಾವಣೆಯಲ್ಲಿ ಕಮ್ಯುನಿಸ್ಟ್ ಪಕ್ಷದ ಬಲವಿಲ್ಲದಿದ್ದರೂ ಇತರ ಪಕ್ಷಗಳ ಶಾಸಕರ ಎರಡನೇ ಪ್ರಾಶಸ್ತ್ಯದ ಮತಗಳಿಂದ ಆಯ್ಕೆಯಾಗಿ ವಿಧಾನ ಪರಿಷತ್ ಸದಸ್ಯ ರಾದರು. ಅಂದರೆ ಎಂ. ಸಿ. ನರಸಿಂಹನ್ ಅವರಂಥ ಪ್ರತಿಭಾವಂತ ಶಾಸಕಾಂಗದಲ್ಲಿ ಇರಬೇಕು ಎಂಬುದು ಪಕ್ಷಾತೀತವಾಗಿ ಎಲ್ಲ ಶಾಸಕರ ಅಭಿಮತವಾಗಿತ್ತು. ಇಂದಿಗೂ ವಿಧಾನಸಭೆಯ ಕಲಾಪಗಳ ಇತಿಹಾಸದ ಕಡತಗಳಲ್ಲಿ ನರಸಿಂಹನ್ ಅವರ ಭಾಗವಹಿಸುವಿಕೆಯ ದಾಖಲೆಗಳು ಸಿಗುತ್ತವೆ.




ಎಂ. ಸಿ. ನರಸಿಂಹನ್ ನ್ಯಾಯವಾದಿ ಮಾತ್ರವಲ್ಲ, ಈಗಾಗಲೇ ಹೇಳಿದಂತೆ ಕಾರ್ಮಿಕ ನಾಯಕರಾಗಿ ಕೆಲಸ ಮಾಡಿದವರು ಮಾತ್ರವಲ್ಲ ಪತ್ರಕರ್ತರಾಗಿ, ಮಾರ್ಕ್ಸ್‌ವಾದಿ ಚಿಂತಕರಾಗಿ, ಎಡ ಚಳುವಳಿಯ ರಾಜಕೀಯ ಮಾರ್ಗದರ್ಶಿಯಾಗಿ ಬಹುಮುಖಿ ವ್ಯಕ್ತಿತ್ವವನ್ನು ಹೊಂದಿದವರು. ಬಹುಮುಖಿ ವ್ಯಕ್ತಿತ್ವದ ವಿವರಗಳನ್ನೊಳಗೊಂಡ 'ಶ್ರಮಿಕ ಸಂಗಾತಿ ಎಂ. ಸಿ. ನರಸಿಂಹನ್' ಎಂಬ ಅಭಿವಂದನೆ ಕೃತಿಯನ್ನು ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆಯಿಂದ ಅರ್ಪಿಸ ಲಾಗಿದೆ. "ತಮ್ಮ ಜೀವಮಾನದ ಅತ್ಯಂತ ಅಮೂಲ್ಯ ವಯಸ್ಸಿನಲ್ಲಿ ಈ ದೇಶದ ಬಿಡುಗಡೆಗಾಗಿ ಶ್ರಮಜೀವಿಗಳ ಒಳಿತಿಗಾಗಿ ಅಹರ್ನಿಶಿ ದುಡಿದ ಕಾ॥ ಎಂ. ಸಿ. ನರಸಿಂಹನ್ ತಮ್ಮ ಹೋರಾಟದ ಬದುಕಿನ ೯೫ ವರ್ಷ ದಾಟುವಾಗ ಅವರ ತ್ಯಾಗ, ಶ್ರಮಗಳನ್ನು ಕುರಿತು ಈ ನಾಡು ಅರ್ಪಿಸಬೇಕಾಗಿದ್ದ ಕೃತಜ್ಞತೆಯನ್ನು, ತೀರಿಸಬೇಕಾದ ಋಣವನ್ನು ಈ ಮೂಲಕ ಅದೆಷ್ಟೇ ಸಣ್ಣ ಪ್ರಮಾಣದಲ್ಲಾದರೂ ಮಾಡುವ ಈ ನಮ್ಮ ಪ್ರಯತ್ನ. ನಮ್ಮ ಈ ಕೃತಜ್ಞತೆಯನ್ನು ನರಸಿಂಹನ್ ಅವರು ಸ್ವೀಕರಿಸಬೇಕಾಗಿ ವಿನಂತಿಸುತ್ತೇವೆ" ಎಂದು ಇನ್ನೊಬ್ಬ ಸ್ವಾತಂತ್ರ್ಯ ಹೋರಾಟಗಾರ, ಟ್ರಸ್ಟಿನ ಅಧ್ಯಕ್ಷರಾದ ನಾಡೋಜ ಕೋ. ಚೆನ್ನಬಸಪ್ಪನವರು ಹೇಳುತ್ತಾರೆ.

'ಶ್ರಮಿಕ ಸಂಗಾತಿ ಎಂ. ಸಿ. ನರಸಿಂಹನ್' ಎಂಬ ಈ ಕೃತಿ ನರಸಿಂಹನ್ ಅವರ ಬದುಕು–ಹೋರಾಟ ಕುರಿತು ಅವರ ಸಂಗಾತಿಗಳು, ಸ್ನೇಹಿತರು, ಹಿತೈಷಿಗಳು, ಕುಟುಂಬದ ಸದಸ್ಯರು ತಮ್ಮ ಸ್ಮೃತಿಗಳನ್ನು, ಅನಿಸಿಕೆಗಳನ್ನು 'ನಮ್ಮ ಕಣ್ಣ ನೋಟದಲ್ಲಿ' ಎಂಬ ಅಧ್ಯಾಯದಲ್ಲಿ ಬರೆದಿದ್ದಾರೆ. ನರಸಿಂಹನ್ ಅವರ ಚಲನಶೀಲ ಬದುಕಿನ ಸ್ಥಿರಚಿತ್ರಗಳು ಇನ್ನೊಂದು ಅಧ್ಯಾಯ ದಲ್ಲಿವೆ. ವಿಧಾನಸಭೆಯ ಸದಸ್ಯರಾಗಿ ನರಸಿಂಹನ್ ಮಾಡಿದ ಭಾಷಣಗಳು, ಕೇಳಿದ ಪ್ರಶ್ನೆಗಳಲ್ಲಿ ಕೆಲವನ್ನು, ಆಯ್ದು 'ಶಾಸಕಾಂಗದಲ್ಲಿ ಜನಧ್ವನಿಯಾಗಿ' ಎಂಬ ಅಧ್ಯಾಯದಲ್ಲಿ ಪ್ರಕಟಿಸಲಾಗಿದೆ. ಸ್ವಾತಂತ್ರ್ಯಪೂರ್ವ ಮತ್ತು ನಂತರದ ಕಾಲದ ಕೊಂಡಿಯಾಗಿ, ಒಬ್ಬ ಮಾದರಿ ವ್ಯಕ್ತಿಯಾಗಿ ಮೌಲ್ಯಕ್ಕಾಗಿ, ಮೌಲ್ಯಗಳೊಂದಿಗೆ ಬದುಕಿದ ಎಂ. ಸಿ. ನರಸಿಂಹನ್ ಆರೋಗ್ಯದಿಂದಿದ್ದು ಶತವರ್ಷ ಪೂರೈಸಿ ಮುಂದುವರಿಯಲಿ ಎಂದು ನವಕರ್ನಾಟಕ, ಹೊಸತು ಬಳಗ ಶುಭ ಹಾರೈಸುತ್ತದೆ.

**ಶ್ರೀಸುಮಿತ್ರಾಸುತ ಅಗಸಬಾಳ**
ನಮ್ಮನೆ, ಸಿರಿಬನ, ದೇವಗಿರಿ, ಧಾರವಾಡ ಜಿಲ್ಲೆ

# ಹೃದಯ






ಒಂದು ಹೃದಯದ ಸಾವಿರ ಸಾವಿರ ತುಂಡುಗಳಾದವು
ಕೆಲವು ಇಲ್ಲಿ ಕೆಲವು ಅಲ್ಲಿ ಕೆಲವು ಎಲ್ಲೆಲ್ಲೋ ಬಿದ್ದೋದವು

ಹೃದಯವು ಲೋಹಪಾತ್ರೆಯೋ ಗಾಜಿನ ಗೋಲವೋ ಆಗಿದ್ದರೆ
ಮುರಿದ ತುಂಡುಗಳು ಮುರಿದವರಿಗೆ ನೋವು ಕೊಡುತ್ತಿದ್ದವು

ದೊಡ್ಡ ದೊಡ್ಡ ಭವನಗಳಿದ್ದರೇನು? ಭವನಗಳ ತುಂಬಾ ಜನರಿದ್ದರೇನು?
ನಿರ್ದಯಿ ಬೇಡನಿಗೆ ಹೆದರಿ ಆಶಿಯಾನದ ಹಕ್ಕಿಗಳೆಲ್ಲಾ ಹಾರಿ ಹೋದವು

ಭಾವನೆಗಳ ವಜ್ರಗಳನ್ನಾರಿಸಿ ಕನಸಿನ ಅರಮನೆಯಲ್ಲಿ ಶೃಂಗರಿಸಿದ್ದೆ
ಕೆಲವು ಆಪ್ತರೇ ದೋಚಿಕೊಂಡರು ಕೆಲವು ಶತ್ರುಗಳ ಪಾಲಾದವು

ಬರಿದಾದ ತೋಟದಲ್ಲಿ ತಂಗಾಳಿ ಮತ್ತೇ ಬರುವುದೆಂದು ಕಾಯುತ್ತಿಹೆನು
ಆಸರೆಗಳು ದೂರವಾಗಿ ಸಂಬಂಧಗಳೆಲ್ಲಾ ಸ್ವಾರ್ಥದ ಸಂತೆಯಲ್ಲಿ ಕಳೆದೋದವು

"ಅಲ್ಲಾಹನ ರಹ್ಮತ್"ನಿಂದ ಎಂದಿಗೂ ಮಾಯೂಸ್ ಆಗದಿರು ಸಿರಾಜ್
ಇನ್ಷಾಅಲ್ಲಾಹ್ ಅಸಾಧ್ಯವೇನೂ ಇಲ್ಲ ಸದ್ಭಾವನೆಗಳೆಲ್ಲಾ ಫಲ ಕೊಡುವವು

**ಯು. ಸಿರಾಜ್ ಅಹಮದ್ ಸೊರಬ**
ಕೆ/ಆಫ್ ಅಶ್ವಿನಿ ಮೆಡಿಕಲ್ಸ್, ಶ್ರೀನಿವಾಸ ಕಾಂಪ್ಲೆಕ್ಸ್, ಸೊಂಡೇಕೊಪ್ಪ ರಸ್ತೆ
ನೆಲಮಂಗಲ – ೫೬೨೧೨೩, ಬೆಂಗಳೂರು ಗ್ರಾಮಾಂತರ ಜಿಲ್ಲೆ







**ಸೀತಾ ಚರಿತ** (ವಾಲ್ಮೀಕಿ ರಾಮಾಯಣವನ್ನು ಆಧರಿಸಿದ ಆಧುನಿಕ ನಾಟಕ)

ಎಸ್. ಮಾಲತಿ

**ಪುಟ : ೬೦**

**ಬೆಲೆ : ರೂ. ೪೫**

**ನವಕರ್ನಾಟಕ ಪ್ರಕಾಶನ**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೧

*"ತಿಣುಕಿದನು ಫಣಿರಾಯ ರಾಮಾಯಣಂಗಳ ಭಾರದಲಿ" ಅಂದರೆ ವಿಧ ವಿಧ ರಾಮಾಯಣದ ಕಥೆಗಳು ಹೆಚ್ಚಿ ಭೂಮಿಯ ಭಾರ ಜಾಸ್ತಿಯಾಗಿ ಅದನ್ನು ಹೊತ್ತುಕೊಂಡ ಆದಿಶೇಷನು ಹೊರಲಾರದೆ ತಿಣುಕಾಡಿದನು ಎಂದು ಕವಿ ಶ್ಲೇಷಾಲಂಕಾರದಿಂದ ನಗೆಯಾಡಿದ್ದಾನೆ. ವಾಲ್ಮೀಕಿಯ ಮೂಲಕಥೆಯನ್ನಾಧರಿಸಿ ಅಸಂಖ್ಯ ರಾಮ ಕಥೆಗಳು ಬಂದಿವೆ. ರಾಮಾಯಣ ಎಂದರೆ ಸೀತೆಯ ಪಾತ್ರ ಇದ್ದೇ ಇದೆ. ಸರ್ವಜನ ಮಾನ್ಯವಾಗಿ ಎಲ್ಲರ ಹೃದಯಗಳಲ್ಲಿ ಬೇರಿಳಿಸಿ ಕಾಲಕಾಲಕ್ಕೆ ಬದಲಾಗುತ್ತಾ ಕಥೆ–ಕಾವ್ಯ–ರೂಪಕ–ನಾಟಕ – ಎಂದು ಎಷ್ಟು ಸಲ ಜಪಿಸಿದರೂ ಸಾಲದಷ್ಟು ಬೇಡಿಕೆ ಅದಕ್ಕೆ. ರಾಮಕಥೆಗಳ ಕೃತಿಗಳು ಹಾಗಿರಲಿ, ರಾಮಮಂದಿರಗಳು ಲೆಕ್ಕವಿಲ್ಲದಷ್ಟು ಸ್ಥಾಪನೆಗೊಂಡು ಭಜನೆ – ಹರಿಕಥಾ ಕಾಲಕ್ಷೇಪವೆಂದು ಜನಸಂದಣಿಯೇ ಸೇರುತ್ತಿದೆ. ಸೇವೆಗಳಿಗೆ ಇಂತಿಷ್ಟು ಎಂದು ಫಲಕಗಳೇ ರಾರಾಜಿಸುತ್ತಿವೆ. ಇದನ್ನು ಮನಗಂಡು ಭಕ್ತಿ ಎರಡನೆಯ ಸ್ಥಾನಕ್ಕಿಳಿದು ವ್ಯವಹಾರ ಮೇಲುಗೈಯಾಗಿದೆ. ಇತ್ತೀಚೆಗಂತೂ ಹೊಸ ಹೊಸ ರೀತಿಯಲ್ಲಿ ರಾಮ–ಸೀತೆಯರ ಕಥಾನಕಗಳು ಬಂದಿವೆ. ವಿಮರ್ಶೆಗಳಂತೂ ಒಂದೊಂದು ಪಾತ್ರವನ್ನೂ ಹಿಡಿದು ಜಗ್ಗಾಡಿವೆ. ಇದೀಗ ಶ್ರೀಮತಿ ಎಸ್. ಮಾಲತಿ ತನ್ನ ವಾಕ್ಯಗಳಲ್ಲಿ ರಾಮಾಯಣ ಆಧರಿತ "ಸೀತಾ ಚರಿತ" ನಾಟಕವನ್ನು ರಚಿಸಿದ್ದಾರೆ. ರಂಗಕ್ಕೆ ಅಳವಡಿಸಿ ಅಭಿನಯಿಸಲು ಸೊಗಸಾಗಿದೆ.*

**ಹಕ್ಕಿಗಳ ಸ್ವಾತಂತ್ರ್ಯೋತ್ಸವ** (ಮಕ್ಕಳ ಕಥನ ಕವಿತೆಗಳು)

*ವಿಜಯಕಾಂತ ಪಾಟೀಲ*

**ಪುಟ : ೯೬** **ಬೆಲೆ : ರೂ. ೭೫**

**ಅಭಿನವ ಪ್ರಕಾಶನ,** ವಿಜಯನಗರ, ಬೆಂಗಳೂರು

*ಮಕ್ಕಳಿಗಾಗಿಯೇ ಬರೆದ, 'ಹಕ್ಕಿಗಳ ಸ್ವಾತಂತ್ರ್ಯೋತ್ಸವ' – ಲೇಖಕ ವಿಜಯಕಾಂತ ಪಾಟೀಲರ ಕಥನ ಕವಿತೆಗಳ ಸಂಕಲನ. ಮನುಷ್ಯೇತರ ಜೀವಿಗಳಾದ ಪ್ರಾಣಿ, ಪಕ್ಷಿಗಳಲ್ಲಿ ಮನುಷ್ಯ ಸ್ವಭಾವವಿರುವಂತೆ ಗ್ರಹಿಸಿ, ನಿತ್ಯದ ಬದುಕಿನಲ್ಲಿ ಸಂಭವಿಸಬಹುದಾದ ವಿದ್ಯಮಾನಗಳನ್ನೇ ಇಲ್ಲಿನ ಕಥನ ಕವಿತೆಗಳ ವಸ್ತುವಾಗಿಸಿಕೊಂಡು ನಿಜದಲಿ ಮನುಷ್ಯ, ತನ್ನ ಬದುಕಿನಲ್ಲಿ ಅಳವಡಿಸಿಕೊಂಡಿರಬಹುದಾದ ವರ್ತನೆ, ದುರಾಸೆ, ದ್ವೇಷ, ಅಸೂಯೆ ಮತ್ತು ಅಧಿಕಾರದ ಲಾಲಸೆಗಳಂಥ ಗುಣಗಳನ್ನು ಓದುಗನ ಅರಿವಿಗೆ ತರುವಂತೆ ಇಲ್ಲಿನ ಕವಿತೆಗಳನ್ನು ರಚಿಸಲಾಗಿದೆ. ಒಂದು ರೀತಿಯಲ್ಲಿ, ಇದು ವಿಜಯಕಾಂತರ ಆಲೋಚನಾಕ್ರಮಕ್ಕೆ ಹಿಡಿದ ಕನ್ನಡಿಯಾಗಿದೆ. ಪ್ರಸ್ತುತ ಸಂಕಲನದಲ್ಲಿ ಹತ್ತು ಕಥನ ಕವಿತೆಗಳಿದ್ದು, ನರಿ ಬುದ್ಧಿಯ ರಾಜಕಾರಣಿಗಳ ಬಣ್ಣಬಯಲು ಮಾಡುತ್ತಲೇ ಸಮೂಹ ನಾಯಕತ್ವದ ಮಹತ್ವದ ಬಗ್ಗೆ; ರಾಗ, ದ್ವೇಷ ಮತ್ತು ಅಸೂಯೆಯಂಥ ಗುಣಗಳನ್ನು ತೊರೆದು ಬಾಳುವುದರ ಹಿಂದಿನ ಸುಖದ ಬಗ್ಗೆ, ತಾಯಿಯಾಗಿ ಸಂಸಾರದ ನೊಗ ಹೊರುವುದರ ಹಿಂದಿನ ಕಷ್ಟದ ಬಗ್ಗೆ ಆರ್ದ್ರವಾಗಿ ಓದುಗನಿಗೆ ಎದೆಯನ್ನು ತಟ್ಟುತ್ತವೆ.*




**ಜಾತಿ ವಿನಾಶ** (ಮಾರ್ಕ್ಸ್‌ವಾದಿ ದೃಷ್ಟಿಕೋನ)

*ತೆಲುಗು ಮೂಲ : ಕಂಚ ಐಲಯ್ಯ, ಕನ್ನಡಕ್ಕೆ : ಬಿ. ಸುಜ್ಞಾನಮೂರ್ತಿ*

**ಪುಟ : xx + ೭೪** **ಬೆಲೆ : ರೂ. ೫೦**

**ಲಡಾಯಿ ಪ್ರಕಾಶನ,** ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

*'ಜಾತಿವಿನಾಶ : ಮಾರ್ಕ್ಸ್‌ವಾದಿ ದೃಷ್ಟಿಕೋನ' – ಬಿ. ಸುಜ್ಞಾನಮೂರ್ತಿ ಅನುವಾದಿಸಿರುವ (ತೆಲುಗು ಮೂಲ : ಕಂಚ ಐಲಯ್ಯ) ಜಾತಿವ್ಯವಸ್ಥೆಯ ಕುರಿತಾದ ವೈಚಾರಿಕ ಕೃತಿ. ಇಲ್ಲಿ, ಮೂಲ ಲೇಖಕರು, ತಮ್ಮ ಅನುಭವಗಳ ಮೂಲಕ ಮಾರ್ಕ್ಸ್‌ವಾದಿ ದೃಷ್ಟಿಕೋನದಲ್ಲಿ ಜಾತಿವಿನಾಶದ ಕುರಿತಾಗಿ ಸಾದ್ಯಂತವಾಗಿ ಚರ್ಚಿಸಿದ್ದಾರೆ. ಕನ್ನಡದ ವೈಚಾರಿಕ ಸಾಹಿತ್ಯಕ್ಕೆ ಮುಖ್ಯ ಸೇರ್ಪಡೆಯಾಗಿರುವ ಈ ಕೃತಿಯಲ್ಲಿ ಜಾತಿತಾರತಮ್ಯದಿಂದ ನಷ್ಟ ಹೊಂದುತ್ತ, ಅಜ್ಞಾನಾಂಧಕಾರದಲ್ಲಿ ಮುಗ್ಗುತ್ತ, ಅವಮಾನಗಳಿಗೆ ಸತತವಾಗಿ ಗುರಿಯಾಗುತ್ತ ಕೊನೆಗೆ ಜೀವನಾಧಾರವಾದ ಭೂಮಿಯಿಂದ ದೂರವಾಗುತ್ತಿರುವ ಹಿಂದುಳಿದ ಮತ್ತು ಕೆಳಜಾತಿಗಳವರು ಜಾತಿವ್ಯವಸ್ಥೆಯ ಹಿಡಿತದಿಂದ ಹೊರಬೀಳಲಾರದೆ ಹೋಗುತ್ತಿರುವ ಕುರಿತಾಗಿ ಚರ್ಚಿಸಲಾಗಿದೆ. ಅಂತೆಯೇ, ಸಾವಿರಾರು ವರ್ಷಗಳಿಂದ ಅಸ್ತಿತ್ವದಲ್ಲಿರುವ ಜಾತಿವ್ಯವಸ್ಥೆ ಕೇವಲ ಸಾಮಾಜಿಕ ವ್ಯವಸ್ಥೆಯಷ್ಟೇ ಆಗಿರದೆ ಮೇಲ್ಮಟ್ಟದ ರಚನೆಯಲ್ಲೇ ಅಲ್ಲದೆ ಕೆಳ ರಚನೆಯಲ್ಲಿ ಮಿಳಿತವಾಗಿದೆ. ಈ ಜಾತಿಪದ್ಧತಿಯ ವಿಷವೃಕ್ಷವನ್ನು ಬೇರುಸಹಿತ ಕಿತ್ತು ಹಾಕುವುದಕ್ಕೆ ಜಾತಿ ನಿರ್ಮೂಲನಾ ಹೋರಾಟ ನಿರಂತರವಾಗಿ ನಡೆಯಬೇಕಾದ ಅನಿವಾರ್ಯತೆಯ ಬಗ್ಗೆ ಹೇಳಲಾಗಿದೆ.*

– ***ಕಲ್ಲೇಶ್ ಕುಂಬಾರ್,*** *ಹಾರೂಗೇರಿ, ಬೆಳಗಾವಿ*

**ಭಾರತದ ಮಹಿಳಾ ಚಳವಳಿಯ ಸಂಕ್ಷಿಪ್ತ ಚರಿತ್ರೆ**

*ವಿಮಲಾ ಫರೂಕಿ, ಕನ್ನಡಕ್ಕೆ : ಎ. ಜ್ಯೋತಿ*

**ಪುಟ : ೪೮** **ಬೆಲೆ : ರೂ. ೩೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಬೆಂಗಳೂರು – ೫೬೦ ೦೦೧




*ಭಾರತದಲ್ಲಿ ಬಂಡಾಯ ಪ್ರವೃತ್ತಿಯ ಮಹಿಳೆಯರು ಹಿಂದೆಯೂ ಇದ್ದುದು ಪುರಾಣೇತಿಹಾಸಗಳಿಂದ ತಿಳಿದುಬರುತ್ತದೆ. ಅಂಥವರನ್ನು ತಲೆಯೆತ್ತದಂತೆ ಹತ್ತಿಕ್ಕಲಾಗುತ್ತಿತ್ತು. ಮಾತ್ರವಲ್ಲ, ಸಮಾಜದಲ್ಲಿ ಕೀಳಾಗಿ, ಅನಾದರದಿಂದ ಕಾಣಲಾಗುತ್ತಿತ್ತು. ಹೆಚ್ಚೇಕೆ, ಬಂಡಾಯದ ಸಂಕೇತವಾದ ಮಹಾಭಾರತದ ದ್ರೌಪದಿಯ ಹೆಸರನ್ನೂ ಸಹ ಹೆಣ್ಣುಮಕ್ಕಳಿಗೆ ಇಡಲು ಹಿಂದೂವಾದಿಗಳು ಇಂದಿಗೂ ಹಿಂದೆ ಸರಿಯುತ್ತಾರೆ. ಮಹಿಳೆಯನ್ನು ಪುರುಷರ ಅಧೀನದಲ್ಲಿರಿಸಿಕೊಳ್ಳಲು ಆಕೆಗೆ ಇನ್ನಿಲ್ಲದಂತೆ ನಿಯಮಗಳನ್ನು ರೂಪಿಸಿ, ಅವಳ ಯೋಚನಾಲಹರಿಯನ್ನು ವಿಕಾಸವಾಗದಂತೆ ತಡೆಹಿಡಿದು, ಕತ್ತಲಲ್ಲಿರಿಸಿ ಶೋಷಣೆಗೈಯ್ಯಲಾಯಿತು. ಮಹಿಳೆಯರಿಗೆಂದೇ ನಿಬಂಧನೆಗಳು ರೂಪಿತವಾದವು. ಕಾಲ ಸರಿದಂತೆ ಶಿಕ್ಷಣ ಲಭಿಸಿ ಮಹಿಳಾ ಚಳವಳಿಗಳು ಪ್ರಪಂಚದಾದ್ಯಂತ ರೂಪುಗೊಂಡು ಆಕೆ ಒಂದು ಸ್ಥಾನಮಾನ ಗಳಿಸಲು ಸಾಧ್ಯವಾದುದೂ ಸಹ ಸುದೀರ್ಘ ಹೋರಾಟಗಳ ನಂತರವೇ. ಇಂಥ ಚಳವಳಿ ನಮ್ಮ ದೇಶದ ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಹೆಚ್ಚು ಪ್ರಚುರಗೊಂಡು ಇದರಲ್ಲಿ ಅನೇಕ ಮಹಿಳೆಯರು ಪಾಲ್ಗೊಂಡಿದ್ದಾರೆ. ಭಾರತದ ಮಹಿಳಾ ಚಳವಳಿ ನಡೆದುಬಂದ ದಾರಿಯ ಹೆಜ್ಜೆಗಳನ್ನಿಲ್ಲಿ ಅವಲೋಕಿಸುತ್ತಲೇ ಇನ್ನೂ ಆಗಬೇಕಾದ ಸುಧಾರಣೆಗಳ ಬಗೆಗೂ ಚಿಂತಿಸಲಾಗಿದೆ.*

– ***ಇಂದಿರಾ ಕುಮಾರಿ,*** *ಯಶವಂತಪುರ, ಬೆಂಗಳೂರು – ೨೨*

ಗ್ರಾಮೀಣ ಪ್ರದೇಶದಲ್ಲಿ ಮಹಿಳೆ ಪಶುಸಂಗೋಪನೆಯನ್ನು ಜೀವನಾಧಾರವಾಗಿ ಅವಲಂಬಿಸಿದ್ದು, ಅದರ ಅಭಿವೃದ್ಧಿಯು ಮಹಿಳಾ ಆರ್ಥಿಕ ಸಬಲೀಕರಣವನ್ನು ಮಾಡುತ್ತದೆ. ಹಾಗಾಗಿ ಪಶುಸಂಗೋಪನೆ ಅಭಿವೃದ್ಧಿಯಲ್ಲಿ ಮಹಿಳೆ, ಮಹಿಳಾ ಸಬಲೀಕರಣದಲ್ಲಿ ಪಶುಸಂಗೋಪನೆ ಎರಡೂ ಒಂದನ್ನೊಂದು ಅವಲಂಬಿಸಿವೆ ಎಂಬುದನ್ನು ಈ ಅಧ್ಯಯನವು ನಿರೂಪಿಸುತ್ತದೆ.

ಡಾ|| ಸರೋಜಾ ಎಸ್. ಸಂತಿ

# ಪಶುಸಂಗೋಪನಾಭಿವೃದ್ಧಿ ನೆಲೆಯಲ್ಲಿ ಮಹಿಳಾ ಸಬಲೀಕರಣ

ಭಾರತದ ಅಭಿವೃದ್ಧಿಯ ದೃಷ್ಟಿಯಿಂದ ಪಶು ಸಂಗೋಪನೆಯ ಕೊಡುಗೆ ಅಮೂಲ್ಯವಾದುದು. ಏಕೆಂದರೆ, ದೇಶದ ಗ್ರಾಮೀಣ ಪ್ರದೇಶದಲ್ಲಿ ಶೇ. ೧೫-೨೦ರಷ್ಟು ಜನರು ಭೂಮಿಯನ್ನು ಹೊಂದಿಲ್ಲ, ಶೇ. ೮೦ರಷ್ಟು ಜನರು ಸಣ್ಣ, ಅತಿ ಸಣ್ಣ ಭೂಹಿಡುವಳಿಯನ್ನು ಹೊಂದಿದ್ದಾರೆ. ಸಣ್ಣ, ಅತಿ ಸಣ್ಣ ಮತ್ತು ಭೂರಹಿತರಿಗೆ ಪಶುಸಂಗೋಪನೆ ಜೀವನ ನಡೆಸಲು ಮೂಲಾಧಾರವಾಗಿದೆ. ಇಂಗ್ಲಿಷಿನ 'Live-stock' ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಪಶುಸಂಗೋಪನೆ ಎಂದು ಕರೆಯಲಾಗುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಫಲವತ್ತಾದ ಭೂಮಿ ಇಲ್ಲದೆ ಇರುವುದು, ನೀರಾವರಿ ಸೌಲಭ್ಯದ ಕೊರತೆ, ನಿರುದ್ಯೋಗ ಸಮಸ್ಯೆ ಇವುಗಳಿಂದಾಗಿ ಹೆಚ್ಚು ಕುಟುಂಬಗಳು ಬಡತನದ ಬೇಗೆಯಲ್ಲಿ ಬೇಯುತ್ತಿವೆ. ಇಂತಹ ಕುಟುಂಬಗಳಿಗೆ ಪಶುಸಂಗೋಪನೆಯೇ ಜೀವನಾಧಾರ ಮತ್ತು ಆದಾಯಪೂರಕ ಮೂಲ ವಾಗಿದೆ. ಭೂಮಿ ಹೊಂದಿರುವವರು ಎತ್ತು, ಆಕಳು, ಎಮ್ಮೆಯನ್ನು ಸಾಕಲು ಬಯಸಿದರೆ ಭೂರಹಿತರು ಕುರಿ, ಮೇಕೆ, ಕೋಳಿ ಸಾಕಲು ಆದ್ಯತೆ ನೀಡುತ್ತಾರೆ. ಪಶುಸಂಗೋಪನೆಯ ವಿವಿಧ ಪ್ರಕಾರಗಳಲ್ಲಿ ರಾಷ್ಟ್ರೀಯ ಜಿಡಿಪಿಗೆ ಪ್ರಮುಖವಾದ ಕೊಡುಗೆ ಆಕಳು ಮತ್ತು ಎಮ್ಮೆಯಿಂದ ದೊರೆಯುತ್ತದೆ. ಗ್ರಾಮೀಣ ಆರ್ಥಿಕತೆಯಲ್ಲಿ ಪಶುಸಂಗೋಪನೆಗೆ ಪ್ರಾಮುಖ್ಯತೆ ಇದ್ದರೂ ತಾಂತ್ರಿಕತೆಯ ಕೊರತೆ, ಅಗತ್ಯ ಸಂದರ್ಭದಲ್ಲಿ ಸಹಕಾರದ ಕೊರತೆಯಿಂದಾಗಿ, ಪಶುಸಂಗೋಪನೆ ಮಾಡುವವರು ಇದನ್ನು ಒಂದು ಕೈಗಾರಿಕಾ ಶಕ್ತಿ ಯನ್ನಾಗಿ ಅಭಿವೃದ್ಧಿಪಡಿಸುವಲ್ಲಿ ವಿಫಲರಾಗಿದ್ದಾರೆ. ಇದರ ಜೊತೆಗೆ ಲಿಂಗ ಸಂಬಂಧಿ ಆಯಾಮದ ಪ್ರಮುಖ ಪಾತ್ರವು ಅಧಿಕವಾಗಿ ಕಂಡುಬರುತ್ತದೆ.

ಜಗತ್ತಿನ ಜನಸಂಖ್ಯೆಯಲ್ಲಿ ಮಹಿಳೆಯರು ಅರ್ಧ ಭಾಗದಷ್ಟು ಇದ್ದಾರೆ. ಪುರುಷ ಪ್ರಧಾನ ಸಮಾಜದಲ್ಲಿನ ಸಾಂಪ್ರದಾಯಿಕ ಮೌಲ್ಯಗಳು ಮಹಿಳೆಯನ್ನು ದ್ವಿತೀಯ ದರ್ಜೆಯ ಪ್ರಜೆಯನ್ನಾಗಿ ಮಾಡಿವೆ. ಕಾನೂನಿನ ಪ್ರಕಾರ ಮಹಿಳೆಗೂ ಆಸ್ತಿಯಲ್ಲಿ ಸಮಾನ ಹಕ್ಕು ಇದೆ, ಆದರೆ ಆಸ್ತಿ ಹಕ್ಕು ಎಂಬುದು ಮಹಿಳೆಗೆ ಕಾಗದದ ಮೇಲಿನ ಅಕ್ಷರಗಳು ಮಾತ್ರವಾಗಿದೆ. ಮಹಿಳೆ ವಯಸ್ಸಿಗೆ ಬಂದ ಮೇಲೆ ಅಥವಾ ಇನ್ನು ಪ್ರಾಪ್ತವಯಸ್ಸಿಗೆ ಬರುವ ಮೊದಲೇ ಮದುವೆ ಮಾಡಿ ಮುಗಿಸುವುದು ಗ್ರಾಮೀಣ ಭಾಗದಲ್ಲಿ ಕಂಡುಬರುವ ಸಾಮಾನ್ಯ ಸಂಗತಿಯಾಗಿದೆ. ಆಕೆಯ ಆಸೆ, ಆಕಾಂಕ್ಷೆ, ಭವಿಷ್ಯದ ಬಗ್ಗೆ ಕಿಂಚಿತ್ತು ಕಾಳಜಿ ಇಲ್ಲದೆ ಇರುವುದನ್ನು ಹಲವಾರು ಅಧ್ಯಯನಗಳು ದೃಢಪಡಿಸಿವೆ. ಮದುವೆ ಮಾಡಿಕೊಟ್ಟರೆ ತವರು ಮನೆಯವರ ಜವಾಬ್ದಾರಿ ಮುಗಿಯಿತು. ಆಕೆಯನ್ನು ಚೆನ್ನಾಗಿ ನೋಡಿಕೊಂಡರೆ ಅದೇ ಅದೃಷ್ಟ ಎನ್ನುವುದು, ಸರಿಯಾಗಿ ನೋಡಿ ಕೊಳ್ಳದಿದ್ದರೆ ಅದು ಆಕೆಯ ದುರದೃಷ್ಟ, ಹಣೆಬರಹ, ಆಕೆ ಮಾಡಿದ ಪಾಪ-ಪುಣ್ಯ ಎಂದು ನಂಬಲಾಗಿದೆ. ಹೀಗಾಗಿ ಮಹಿಳೆ ಬಡವರಲ್ಲಿ ಅತಿ ಬಡವಳು, ಸಾಮಾಜಿಕ-ಆರ್ಥಿಕ ಅಶಕ್ತರಲ್ಲಿ ಅತಿ ಅಶಕ್ತಳು, ಭೂಮಿಯ ಹಿಡುವಳಿಯಲ್ಲಿ ಮಹಿಳೆಯ ಹೆಸರು ಕಾಣೆಯಾಗಿದೆ, ಆಸ್ತಿ ಹಕ್ಕು ಇದ್ದರೂ ಮಹಿಳೆ ಅದನ್ನು ಚಲಾಯಿಸಿ ಪಡೆಯುವುದು ಅಷ್ಟು ಸುಲಭ ವಲ್ಲದ ಸಾಮಾಜಿಕ ಪರಿಸರ ಮನೆಮಾಡಿದೆ. ಆದರೆ ಮಹಿಳೆ ಕೃಷಿಯ ಉಗಮಕ್ಕೆ ಹೇಗೆ ಕಾರಣಕರ್ತಳೋ ಹಾಗೆಯೇ ಜೀವನಾಧಾರಕ್ಕಾಗಿ ಪಶುಸಂಗೋಪನೆ ಯಲ್ಲಿ ತೊಡಗಿರುವುದೂ ಕಂಡುಬರುತ್ತದೆ.

ಮಹಿಳೆ ಮತ್ತು ಪಶುಸಂಗೋಪನೆ ಸಹ ಸಂಬಂಧವನ್ನು ವಿಸ್ತರಿಸುವುದಕ್ಕೆ ಮುಂಚೆ ರಾಜ್ಯದಲ್ಲಿ ಪಶುಸಂಗೋಪನೆ ಪರಿಸ್ಥಿತಿಯನ್ನು ಪರಿಶೀಲಿಸುವು ದಾದರೆ ಪಶುಸಂಗೋಪನೆ ಗಣತಿ ೨೦೧೨ರ ಪಟ್ಟಿಯಲ್ಲಿ ೧೫ ವರ್ಗದ ಪ್ರಾಣಿಗಳು ಸೇರಿವೆ. ಅವೆಂದರೆ ಆಕಳು, ಎಮ್ಮೆ, ಆಡು, ಮೇಕೆ, ಹೇಸರಗತ್ತೆ,









ಕುದುರೆ, ಕತ್ತೆ, ಕೋತಿ, ನಾಯಿ ಮತ್ತು ಆನೆಗಳು. ಈ ಪ್ರಾಣಿಗಳ ಅಂಕಿ–ಸಂಖ್ಯೆಗಳ ಮಾಹಿತಿ ಲಭ್ಯವಿದೆ. ಆದರೆ "ಪಶುಸಂಗೋಪನೆಯ ಒಟ್ಟು ಗಣತಿ ಯಲ್ಲಿ ನಾಯಿ, ಮೊಲ ಮತ್ತು ಆನೆಗಳ ಸಂಖ್ಯೆಯನ್ನು ಸೇರಿಸಿಕೊಂಡಿಲ್ಲ. ಆದರೆ ಇವುಗಳ ಸಂಖ್ಯೆಯಲ್ಲಿ ತೀವ್ರವಾದ ಹೆಚ್ಚಳವಾಗಿರುವುದನ್ನು ಪಶುಸಂಗೋಪನಾ ಗಣತಿ ೨೦೧೨ ಉಲ್ಲೇಖಿಸುತ್ತದೆ."

ಈ ಲೇಖನದಲ್ಲಿ ಕರ್ನಾಟಕದ ಪಶುಸಂಗೋಪನೆಯ ಸ್ಥಿತಿ–ಗತಿ, ಪಶುಸಂಗೋಪನೆಗೆ ಇರುವ ಅವಕಾಶಗಳು ಮತ್ತು ಇದರ ಅಭಿವೃದ್ಧಿಯಲ್ಲಿ ಮಹಿಳೆಯರ ಪಾತ್ರ ಆ ಮೂಲಕ ಮಹಿಳಾ ಸಬಲೀಕರಣ ಅಂಶಗಳನ್ನು ಒಳಗೊಂಡಿದೆ. ಪಶುಸಂಗೋಪನೆ ೨೦೧೨ರ ಗಣತಿ ಪ್ರಕಾರ ಕರ್ನಾಟಕದಲ್ಲಿ ಪಶುಸಂಗೋಪನೆ ಒಟ್ಟು ಸಂಖ್ಯೆ ೨೭.೭೦ ಮಿಲಿಯನಷ್ಟಾಗಿದೆ. ೨೦೦೭ರಲ್ಲಿ ನಡೆದ ೧೮ನೆಯ ಪಶುಸಂಗೋಪನೆ ಗಣತಿಯನ್ನು ೨೦೧೨ರಲ್ಲಿ ನಡೆದ ೧೯ನೆಯ ಪಶುಸಂಗೋಪನೆ ಗಣತಿಗೆ ಹೋಲಿಸಿದಾಗ ಕರ್ನಾಟಕದಲ್ಲಿ ಪಶುಸಂಗೋಪನೆ ಸಂಖ್ಯೆಯಲ್ಲಿ ಭಾರಿ ಕುಸಿತ ಕಂಡುಬಂದಿದೆ. ಹಾಗೆಯೇ ದೇಶದಲ್ಲಿಯೂ ಸಹ ಪಶುಸಂಗೋಪನೆಯ ಇದೇ ಪರಿಸ್ಥಿತಿ ಕಂಡುಬರುತ್ತದೆ. ದೇಶದ ಕುಸಿತ ಮಟ್ಟ ಮತ್ತು ರಾಜ್ಯದ ಕುಸಿತದ ಮಟ್ಟ ಸರಾಸರಿ ಅಷ್ಟೇ ಇದೆ. ಕೋಷ್ಟಕ ೧ರಲ್ಲಿ ಈ ಎಲ್ಲ ಸಂಗತಿಗಳನ್ನು ಕಾಣಬಹುದು.

**ಕೋಷ್ಟಕ ೧**

**ಪಶುಸಂಗೋಪನೆಯ ಒಟ್ಟು ಸಂಖ್ಯೆ** (ಮಿಲಿಯನ್)

| ವಿವರ | ೨೦೦೭ರ ಗಣತಿ | ೨೦೧೨ರ ಗಣತಿ |
|---|---|---|
| ಭಾರತ | ೫೧೫.೩೮ | ೫೧೨.೦೫ |
| ಕರ್ನಾಟಕ | ೩೦.೮೫ | ೨೭.೭೦ |

**ನಕ್ಷೆ – ೧**

೨೦೦೭ರಲ್ಲಿ ಕರ್ನಾಟಕದಲ್ಲಿ ೩೦.೮೫ ಮಿಲಿಯನ್‌ಗಳಷ್ಟು ಇದ್ದ ಪಶುಸಂಗೋಪನೆ ಪ್ರಮಾಣವು ೨೦೧೨ರಲ್ಲಿ ೨೭.೭೦ರಷ್ಟಕ್ಕೆ ಇಳಿದಿದೆ. ಅಂದರೆ ೩.೧೫ರಷ್ಟು ಮಿಲಿಯನ್‌ನಷ್ಟು ಕುಸಿತ ಕಂಡುಬಂದರೆ, ದೇಶದಲ್ಲಿಯೂ ಸಹ ೩.೩೩ರಷ್ಟು ಕುಸಿತ ಕಂಡುಬಂದಿದೆ. ಆದರೆ ಬಿಹಾರ, ಛತ್ತೀಸಗಡ, ಗುಜರಾತ, ಲಕ್ಷದ್ವೀಪ, ಪಂಜಾಬ, ರಾಜಸ್ತಾನ, ಸಿಕ್ಕಿಂ, ತ್ರಿಪುರ ರಾಜ್ಯಗಳನ್ನು ಹೊರತುಪಡಿಸಿ, ಉಳಿದ ರಾಜ್ಯಗಳಲ್ಲಿ ಪಶುಸಂಗೋಪನೆ ಸಂಖ್ಯೆ ಕಡಿಮೆ ಯಾಗಿದೆ. ಗುಜರಾತ್‌ನಲ್ಲಿ ೩.೬೧ ಮಿಲಿಯನ್, ಬಿಹಾರದಲ್ಲಿ ೨.೬೦ ಮಿಲಿಯನ್, ರಾಜಸ್ತಾನದಲ್ಲಿ ೧.೦೭ ಮಿಲಿಯನ್, ಪಂಜಾಬ್‌ನಲ್ಲಿ ೧.೭೧ ಮಿಲಿಯನ್ ಪ್ರಮಾಣದಲ್ಲಿ ಪಶುಸಂಗೋಪನೆಯಿದ್ದು, ಇದು ಆಯಾ ರಾಜ್ಯಗಳಲ್ಲಿ ಅಧಿಕ ಹೆಚ್ಚಳವಾಗಿರು ವುದನ್ನು ತಿಳಿಸುತ್ತದೆ. ಛತ್ತೀಸಗಡ, ಲಕ್ಷದ್ವೀಪ, ಸಿಕ್ಕಿಂ, ತ್ರಿಪುರ ರಾಜ್ಯಗಳಲ್ಲಿ ಸಣ್ಣ ಪ್ರಮಾಣದಲ್ಲಿ ಹೆಚ್ಚಳವಾಗಿದೆ.

ಕರ್ನಾಟಕದ ಪಶುಸಂಗೋಪನೆಯ ಪ್ರಮಾಣ ಕಡಿಮೆ ಇದ್ದರೂ ಯಾವ ಯಾವ ಪ್ರಾಣಿಗಳ ಪ್ರಮಾಣದ ಸ್ವರೂಪವನ್ನು ಅವಲೋಕಿಸಿ, ಅದನ್ನು ಈ ಕೆಳಗಿನ ನಕ್ಷೆಯಲ್ಲಿ ಪ್ರಸ್ತುತಪಡಿಲಾಗಿದೆ.

"ಪಶುಸಂಗೋಪನೆಗೆ ಕುರಿ ವರ್ಗದ ಕೊಡುಗೆ ಅತ್ಯಂತ ಹೆಚ್ಚು. ಅಂದರೆ ಶೇ. ೩೪.೬೦ರಷ್ಟು , ಜಾನುವಾರುಗಳು ಸಹ ಶೇ. ೩೪.೩೫ರಷ್ಟು , ಮೇಕೆ (ಆಡು) ಶೇ. ೧೭.೩೧ರಷ್ಟು ಮತ್ತು ಹಂದಿಗಳು ಶೇ. ೧.೧೦ರಷ್ಟು , ಉಳಿದ ಶೇ. ೧೨.೬೪ರಷ್ಟು ಸಂಗೋಪನೆ ಜಾತಿಯ ಇತರ ಪ್ರಾಣಿಗಳಾದ ಒಂಟೆ, ಕೋತಿ, ಕುದುರೆ ಇತ್ಯಾದಿಗಳು ಸೇರಿವೆ" ಎಂಬುದು ನಕ್ಷೆ ೨ರಲ್ಲಿ ಕಂಡುಬರುತ್ತದೆ.

ನಕ್ಷೆ ೩ರಲ್ಲಿ ೨೦೧೨ರ ಗಣತಿ ಪ್ರಕಾರ ಪಶುಸಂಗೋಪನೆಯಲ್ಲಿ ಕುರಿ ಮತ್ತು ಹಂದಿಯನ್ನು ಹೊರತುಪಡಿಸಿದಂತೆ, ದೇಶಿ ತಳಿಗಳಿಗಿಂತ ವಿದೇಶಿ ತಳಿಗಳಲ್ಲಿ ಹೆಚ್ಚಿನ ಮಟ್ಟದ ಏರಿಕೆಯಾಗಿರುವುದು ಕಂಡುಬರುತ್ತದೆ. ಜಾನುವಾರು ವಿದೇಶಿ / ಮಿಶ್ರತಳಿಗಳಲ್ಲಿ ಒಟ್ಟು ಶೇ. ೩೨.೮೧ರಷ್ಟು ಹೆಚ್ಚಳವಾಗಿದ್ದರೆ, ಗಂಡು ಜಾನುವಾರುಗಳಲ್ಲಿ ಶೇ. ೬.೩೫ರಷ್ಟು, ಹೆಣ್ಣು ಜಾನುವಾರುಗಳಲ್ಲಿ ಶೇ. ೩೫.೩೬ರಷ್ಟು ವೃದ್ಧಿಯಾಗಿದೆ. ಕುರಿ ವಿದೇಶಿ ಅಥವಾ ಮಿಶ್ರತಳಿಗಳಲ್ಲಿ ಒಟ್ಟು ಶೇ. ೧೧೯.೬೩ರಷ್ಟು , ಗಂಡು ಕುರಿಗಳಲ್ಲಿ ಶೇ. ೫೪.೫೮ರಷ್ಟು , ಹೆಣ್ಣು ಕುರಿಗಳಲ್ಲಿ ಶೇ. ೧೭೯.೦೫ರಷ್ಟು , ದೇಶಿ ಕುರಿ ತಳಿಗಳಲ್ಲಿ ಒಟ್ಟು ಶೇ. ೦.೦೪ರಷ್ಟು ಪ್ರಮಾಣದಲ್ಲಿ ಇದೆ. ಅದರಲ್ಲಿ ಹೆಣ್ಣು ಕುರಿಗಳಲ್ಲಿ ಶೇ. ೧.೩೯ರಷ್ಟು ಹೆಚ್ಚಳವಾದರೆ, ಗಂಡು ಕುರಿಗಳಲ್ಲಿ ಶೇ. ೫ರಷ್ಟು ಕಡಿಮೆಯಾಗಿದೆ. ಹೇಸರಗತ್ತೆ ಸಂಖ್ಯೆ ಶೇ. ೪೪೦.೪೩ರಷ್ಟು ಹೆಚ್ಚಳವಾಗಿದೆ. ಇತ್ತೀಚಿನ ದಿನಗಳಲ್ಲಿ ಹೇಸರಗತ್ತೆಯ ಹಾಲಿಗೆ ಬೇಡಿಕೆ ಹೆಚ್ಚಿರುವುದರಿಂದ ಸಂಖ್ಯೆಯಲ್ಲಿ ಸಹ ಹೆಚ್ಚಳವಾಗಿರುವುದು ಕಂಡು ಬರುತ್ತದೆ. ಕುದುರೆಗಳ ಒಟ್ಟು ಶೇ. ೨೨.೮೬ರಷ್ಟು ಪ್ರಮಾಣದಲ್ಲಿ ಹೆಚ್ಚಳವಾಗಿದೆ. ಅದರಲ್ಲಿ ಗಂಡು, ಶೇ. ೯.೦೮ರಷ್ಟು , ಹೆಣ್ಣು ಶೇ. ೧೬.೮೮ರಷ್ಟು ಇದ್ದು,

**ನಕ್ಷೆ – ೨**




ಒಟ್ಟಾರೆ ಹೆಚ್ಚಳವಾಗಿರುವುದು ಕಂಡುಬರುತ್ತದೆ.

ವಿದೇಶಿ / ಮಿಶ್ರತಳಿ ಹಂದಿಗಳಲ್ಲಿ ಗಂಡು ಶೇ. ೫೨.೭೪, ಹೆಣ್ಣು ಶೇ. ೭೦.೩೭, ಒಟ್ಟು ಶೇ. ೬೧.೭ ಇದ್ದು, ೨೦೦೭–೧೨ರ ಅವಧಿಯಲ್ಲಿ ಹೆಚ್ಚಳವಾಗಿದೆ. ದೇಶಿ / ಸ್ವದೇಶಿ ಹಂದಿಗಳಲ್ಲಿ ಗಂಡು ಶೇ. ೭.೬೧ರಷ್ಟು ಕಡಿಮೆಯಾಗಿದ್ದರೆ, ಹೆಣ್ಣು ಹಂದಿಗಳಲ್ಲಿ ಶೇ. ೯.೨೧ರಷ್ಟು ಹೆಚ್ಚಳವಾಗಿದೆ, ಒಟ್ಟು ಶೇ. ೨.೯೬ರಷ್ಟು ಹೆಚ್ಚಳವಾಗಿದೆ. ಗಂಡು ಮೊಲಗಳಲ್ಲಿ ಶೇ. ೧೩೯.೫೫, ಹೆಣ್ಣು ಮೊಲಗಳಲ್ಲಿ ಶೇ. ೧೪೫.೨ ಒಟ್ಟು ಶೇ. ೧೪೨.೬೯ರಷ್ಟು ಏರಿಕೆಯಾಗಿದೆ. ಕೋಳಿ ಸಾಕಾಣಿಕೆಯಲ್ಲಿಯೂ ಗಮನಾರ್ಹವಾದ ಏರಿಕೆ ಕಂಡುಬಂದಿದೆ. ಹುಂಜ ಶೇ. ೨೬.೩೯, ಬಾತುಕೋಳಿ ಶೇ. ೧೭೫೩.೧೯, ಟರ್ಕಿ ಮತ್ತು ಇತರೆ ಶೇ. ೫೨.೪೫, ಒಟ್ಟು ಶೇ. ೨೭.೦೪ರಷ್ಟು ಏರಿಕೆ ಕಂಡುಬರುತ್ತದೆ. ೨೦೦೭ ಮತ್ತು ೨೦೧೨ರ ಜನಗಣತಿಯನ್ನು ಹೋಲಿಸಿದಾಗ ಪಶುಸಂಗೋಪನೆಯಲ್ಲಿ ಏರಿಕೆ ಯಾಗಿರುವುದು ಕಂಡುಬರುತ್ತದೆ.




"ಸಮಾಜದಲ್ಲಿ ಪುರುಷಪ್ರಧಾನ ವ್ಯವಸ್ಥೆಯು ಪ್ರತಿಯೊಂದು ವಲಯವನ್ನು ಆವರಿಸಿದೆ. ಪರಿಣಾಮ

**ನಕ್ಷೆ – ೩**




ಸಮಾಜದಲ್ಲಿ ಹೆಣ್ಣು ಸಂತಾನವನ್ನು ನಿರಾಕರಿಸಲಾಗುತ್ತದೆ, ಅದಕ್ಕಾಗಿ ಹೆಣ್ಣು ಭ್ರೂಣ ಹತ್ಯೆ, ಶಿಶು ಹತ್ಯೆಗಳು ಅವ್ಯಾಹತವಾಗಿ ನಡೆಯುತ್ತಲೇ ಇರುತ್ತವೆ." ಆದರೆ ಪಶುಸಂಗೋಪನೆಯ ಕ್ಷೇತ್ರದಲ್ಲಿ ಹೆಣ್ಣು ಸಂಖ್ಯೆಯಲ್ಲಿ ಕುದುರೆ ಮತ್ತು ಕುದುರೆ ಮರಿಯನ್ನು ಹೊರತುಪಡಿಸಿದರೆ, ಉಳಿದ ಎಲ್ಲ ವಿಧದ ಪ್ರಾಣಿಗಳಲ್ಲಿ ಹೆಣ್ಣಿನ ಸಂಖ್ಯೆಯೇ ಅಧಿಕ ಪ್ರಮಾಣದಲ್ಲಿ ಕಂಡುಬರುತ್ತದೆ. ಪಶುಸಂಗೋಪನೆಯಲ್ಲಿ ಹಾಲು ಕೊಡುವ ಸಂತತಿಯನ್ನು ಮುಂದುವರಿಸಲು, ಹಸುವನ್ನು, ಎಮ್ಮೆಯನ್ನು, ಕುರಿಯನ್ನು, ಮೇಕೆಯನ್ನು ಬಯಸುವ ಸಮಾಜ ಪ್ರಾಣಿವರ್ಗದಲ್ಲಿ ಹೆಣ್ಣನ್ನು ನಿರೀಕ್ಷಿಸುತ್ತದೆ, ಹೆಣ್ಣಿನ ಜನನಕ್ಕೆ ಸಂಭ್ರಮಪಡುತ್ತದೆ ಆದರೆ ಮಾನವ ವರ್ಗದಲ್ಲಿ ಹೆಣ್ಣನ್ನು, ಹೆಣ್ಣುಮಗುವಿನ ಜನನವನ್ನು ಸ್ವಾಗತಿಸುವುದಿಲ್ಲ ಅದಕ್ಕೆ ಲಿಂಗಾನುಪಾತವೇ ಸಾಕ್ಷಿ, ಇದು ಪುರುಷ ಪ್ರಧಾನ ವ್ಯವಸ್ಥೆಯ ಲಾಭಕೋರತನವನ್ನು ತಿಳಿಸುತ್ತದೆ. ಕೋಳಿ ಸಾಕಾಣಿಕೆಯಲ್ಲಿಯೂ ಕೇವಲ ಮಾಂಸಕ್ಕಾಗಿ ಮಾತ್ರ ಗಂಡು ಕೋಳಿಗಳನ್ನು ಸಾಕುವುದು ಕಡಿಮೆಯಾಗಿದೆ. ಹೆಣ್ಣು ಕೋಳಿಗಳ ಸಂಖ್ಯೆಯಲ್ಲಿಯೂ ಗಮನಾರ್ಹವಾದ ಏರಿಕೆ ಕಂಡುಬರುತ್ತದೆ.

ಕರ್ನಾಟಕಕ್ಕೆ ಹಾಸನ ಜಿಲ್ಲೆ ಹಸುಗಳ ಕೊಡುಗೆಯನ್ನು ನೀಡಿದೆ. ಇಲ್ಲಿ ಶೇ. ೬.೩೭ರಷ್ಟು ಹಸುಗಳ ಉತ್ಪಾದನೆಯಿದ್ದು, ಇದು ಎಲ್ಲ ಜಿಲ್ಲೆಗಳಿಗಿಂತ ಹೆಚ್ಚಾಗಿದೆ. ಬೆಳಗಾವಿ ಮತ್ತು ಶಿವಮೊಗ್ಗ ಕ್ರಮವಾಗಿ ಅಂದರೆ ಶೇ. ೬.೨೩, ಶೇ. ೫.೯೬ರಷ್ಟು ಪ್ರಮಾಣದ ಹೆಚ್ಚಳದ ಮೂಲಕ ಎರಡನೆಯ ಮತ್ತು ಮೂರನೆಯ ಸ್ಥಾನದಲ್ಲಿವೆ.

೨೦೦೭–೧೨ರ ಜನಗಣತಿಯಲ್ಲಿ ಎಮ್ಮೆಗಳ ಸಂಖ್ಯೆ ಕಡಿಮೆಯಾಗಿದೆ. ಎಮ್ಮೆಗಳ ಸಂಖ್ಯೆ ೨೦೦೩ರಲ್ಲಿ ೩.೫೨ ಮಿಲಿಯನ್ ಇರುವುದು. ೨೦೧೨ರಲ್ಲಿ ೩.೧೧ ಮಿಲಿಯನ್‌ಗೆ ಕುಸಿದಿದೆ. ಕೋಣದ ಸಂಖ್ಯೆಯಲ್ಲಿಯೂ ಸಹ ಇಳಿಕೆ ಕಂಡುಬಂದಿದೆ. ಬೆಳಗಾವಿ ಜಿಲ್ಲೆಯಲ್ಲಿ ಎಮ್ಮೆಗಳು ಹೆಚ್ಚು ಸಂಖ್ಯೆಯಲ್ಲಿದ್ದು, ರಾಜ್ಯದಲ್ಲಿಯೇ ಪ್ರಥಮ ಸ್ಥಾನದಲ್ಲಿದೆ. ನಂತರ ಬಾಗಲಕೋಟ ಮತ್ತು ತುಮಕೂರು ಜಿಲ್ಲೆಗಳು ಕ್ರಮವಾಗಿ ದ್ವಿತೀಯ ಮತ್ತು ತೃತೀಯ ಸ್ಥಾನದಲ್ಲಿವೆ.

**ನಕ್ಷೆ – ೪ : ಜಿಲ್ಲಾವಾರು ಪಶುಸಂಗೋಪನೆ ಚಿತ್ರಣ**




೨೦೦೭–೧೨ರ ಪಶುಸಂಗೋಪನೆಯ ಗಣತಿ ಪ್ರಕಾರ ಕುರಿಗಳ ಒಟ್ಟು ಸಂಖ್ಯೆಯಲ್ಲಿ ಹೆಚ್ಚಳ ವಾಗಿರುವುದು ಕಂಡುಬರುತ್ತದೆ. ಅಂದರೆ ಶೇಕಡ ೦.೨೬ರಷ್ಟು ಹೆಚ್ಚಳ ಕಂಡುಬಂದಿದೆ. ೨೦೦೩ರಲ್ಲಿ ರಾಜ್ಯದಲ್ಲಿ ಕುರಿಗಳ ಸಂಖ್ಯೆ ೯.೫೮ ಮಿಲಿಯನ್. ವಿದೇಶಿ ಅಥವಾ ಮಿಶ್ರತಳಿಗಳು ೦.೦೧ ಮಿಲಿಯನ್ ಇದ್ದರೆ, ೨೦೧೨ರಲ್ಲಿ ೦.೦೪ ಮಿಲಿಯನ್‌ಗಳಷ್ಟು ಹೆಚ್ಚಾಗಿದೆ. ೨೦೦೩ರಲ್ಲಿ ಸ್ಥಳೀಯ/ದೇಶಿ ತಳಿಗಳ ಸಂಖ್ಯೆ ೭.೨೪ ಮಿಲಿಯನ್‌ಗಳಿದ್ದು, ೨೦೧೨ರಲ್ಲಿ ೯.೫೪ ಮಿಲಿಯನ್‌ಗಳಷ್ಟಾಗಿದೆ. ವಿದೇಶಿ/ಮಿಶ್ರತಳಿಗಳ ಹೆಚ್ಚಳ ಶೇ. ೧೧೯.೬೯ರಷ್ಟು ಹೆಚ್ಚಾಗಿದೆ. ದೇಶಿ ತಳಿಗಳು ಶೇ. ೦.೦೪ರಷ್ಟು ಹೆಚ್ಚಾಗಿದೆ. ತುಮಕೂರು ಜಿಲ್ಲೆಯಲ್ಲಿ ಕುರಿಗಳ ಸಂಖ್ಯೆ ರಾಜ್ಯದಲ್ಲಿಯೇ ಹೆಚ್ಚಾಗಿದ್ದು, ಶೇ. ೧೧.೦೭ರಷ್ಟು ಕುರಿಗಳ ಕೊಡುಗೆಯನ್ನು ನೀಡಿದೆ. ಎರಡನೆಯ ಮತ್ತು ಮೂರನೆಯ ಸ್ಥಾನದಲ್ಲಿ ಕ್ರಮವಾಗಿ ಚಿತ್ರದುರ್ಗ ಮತ್ತು ಬೆಳಗಾವಿ ಜಿಲ್ಲೆಗಳು ಇವೆ.

೨೦೧೨ರಲ್ಲಿ ಮೇಕೆಯ ಸಂಖ್ಯೆ ೪.೭೯ ಮಿಲಿಯನ್‌ಗಳಷ್ಟಿದೆ. ಶೇ. ೨೨.೦೫ರಷ್ಟು ಮೇಕೆಯ ಸಂಖ್ಯೆಯಲ್ಲಿ ಇಳಿಮುಖ ಕಂಡುಬಂದಿದೆ. ಹೆಣ್ಣು ಮೇಕೆಗಳ ಸಂಖ್ಯೆಯಲ್ಲಿ ಹೆಚ್ಚಳ ಕಂಡುಬಂದಿದೆ. ೨೦೦೩ರಲ್ಲಿ ೩.೫೨ ಮಿಲಿಯನ್‌ಗಳಷ್ಟಿದ್ದದ್ದು ೨೦೧೨ರಲ್ಲಿ ೩.೭೦ ಮಿಲಿಯನ್‌ನಷ್ಟು ಏರಿಕೆ ಯಾಗಿದೆ. ಶೇ. ೧೮.೮೩ರಷ್ಟು ಗಂಡು ಮೇಕೆಗಳ ಸಂಖ್ಯೆಯಲ್ಲಿ ೨೦೦೭–೧೨ರ ಅಂತರ ಗಣತಿಯಲ್ಲಿ ಇಳಿಕೆ ಕಂಡುಬಂದಿದೆ. ರಾಜ್ಯದಲ್ಲಿ ಬೆಳಗಾವಿ ಜಿಲ್ಲೆಯು ಶೇ. ೧೦.೨೫ರಷ್ಟು, ಮೇಕೆಗಳ ಪ್ರಮಾಣದ ಮೂಲಕ ಪ್ರಥಮ ಸ್ಥಾನದಲ್ಲಿದ್ದು ಗುಲಬರ್ಗಾ ಮತ್ತು ವಿಜಯಪುರ ಜಿಲ್ಲೆಗಳು ಕ್ರಮವಾಗಿ ನಂತರದ ಸ್ಥಾನದಲ್ಲಿವೆ.

೨೦೧೨ರ ಪ್ರಾಣಿಗಳ ಗಣತಿ ಪ್ರಕಾರ ರಾಜ್ಯದಲ್ಲಿ ಮಂಗಗಳು ಅಥವಾ ಕೋತಿಗಳು ೦.೦೧೬ ಮಿಲಿಯನ್ ಇವೆ. ೨೦೦೭–೧೨ರ ಅವಧಿಯಲ್ಲಿ ಶೇ. ೩೭.೪೬ರಷ್ಟು ಇಳಿಕೆಯಾಗಿದೆ. ರಾಜ್ಯದ ಒಟ್ಟು ಮಂಗಗಳ ಸಂಖ್ಯೆಯಲ್ಲಿ ತುಮಕೂರು ಜಿಲ್ಲೆಯು ಶೇ. ೩೧.೧೧ರಷ್ಟು ಪ್ರಮಾಣದ ಮೂಲಕ ಪ್ರಥಮ ಸ್ಥಾನದಲ್ಲಿದ್ದರೆ, ಚಿತ್ರದುರ್ಗ, ಬೀದರ್ ಕ್ರಮವಾಗಿ ದ್ವಿತೀಯ ಮತ್ತು ತೃತೀಯ ಸ್ಥಾನದಲ್ಲಿವೆ.

೨೦೧೨ರ ಗಣತಿ ಪ್ರಕಾರ ಹಂದಿಗಳ ಸಂಖ್ಯೆ ರಾಜ್ಯದಲ್ಲಿ ೦.೩೦ ಮಿಲಿಯನ್ ಇದೆ. ೨೦೦೭–೧೨ರ ಅವಧಿಯಲ್ಲಿ ಹಂದಿಗಳ ಸಂಖ್ಯೆಯಲ್ಲಿ ಶೇ. ೮.೫೯ರಷ್ಟು ಏರಿಕೆ ಕಂಡುಬಂದಿದೆ. ೨೦೦೩ರಲ್ಲಿ ವಿದೇಶಿ/ಮಿಶ್ರತಳಿಗಳ ಸಂಖ್ಯೆಯಲ್ಲಿ ೦.೦೨ ಮಿಲಿಯನ್ ಮತ್ತು ೨೦೧೨ರಲ್ಲಿ ೦.೦೪ ಮಿಲಿಯನ್‌ಗಳಷ್ಟು

ಏರಿಕೆ ಕಂಡುಬಂದರೆ, ೨೦೦೩ರಲ್ಲಿ ಸ್ಥಳೀಯ/ದೇಶಿ ಹಂದಿ ತಳಿಗಳಲ್ಲಿ ೦.೨೮ ಮಿಲಿಯನ್, ೨೦೧೨ರಲ್ಲಿ ೦.೨೬ ಮಿಲಿಯನ್‌ಗಳಷ್ಟು ಇಳಿಕೆಯಾಗಿದೆ. ಜಿಲ್ಲಾವಾರು ಹಂದಿಗಳ ಸಂಖ್ಯೆಯನ್ನು ಅವಲೋಕಿಸಿದಾಗ ಬಾಗಲಕೋಟೆ ಜಿಲ್ಲೆಯು ರಾಜ್ಯದಲ್ಲಿ ಪ್ರಥಮ ಸ್ಥಾನದಲ್ಲಿದೆ. ಈ ಜಿಲ್ಲೆಯ ಹಂದಿಗಳ ಸಂಖ್ಯೆಯಲ್ಲಿ ಶೇ. ೧೦.೯೮ರಷ್ಟಿದೆ. ಬೆಳಗಾವಿ ಮತ್ತು ಗುಲಬರ್ಗಾ ಜಿಲ್ಲೆಗಳು ಕ್ರಮವಾಗಿ ದ್ವಿತೀಯ ಮತ್ತು ತೃತೀಯ ಸ್ಥಾನದಲ್ಲಿವೆ.

'ಪೌಲ್ಟ್ರೀ ಎನ್ನುವುದು ಕೋಳಿ. ಹುಂಜ, ಬಾತುಕೋಳಿ, ಟರ್ಕಿ ಮತ್ತು ಇತರೆ ಪ್ರಾಣಿಗಳನ್ನು ಆಹಾರಕ್ಕಾಗಿ, ಅಂದರೆ ಮಾಂಸ ಮತ್ತು ಮೊಟ್ಟೆಗಾಗಿ ಸಾಕುವುದನ್ನು ಪೌಲ್ಟ್ರೀ ಎಂದು ಸಾಮಾನ್ಯವಾಗಿ ಕರೆಯಲಾಗುತ್ತದೆ." ೨೦೧೨ರಲ್ಲಿ ಪೌಲ್ಟ್ರೀ ಸಂಖ್ಯೆಯು ರಾಜ್ಯದಲ್ಲಿ ೫೩.೪೪ ಮಿಲಿಯನ್‌ಗಳಷ್ಟು ಇದೆ. ೨೦೦೩-೧೨ರ ಅವಧಿಯಲ್ಲಿ ಪೌಲ್ಟ್ರೀ ಸಂಖ್ಯೆಯಲ್ಲಿ ಹೆಚ್ಚಳ ಕಂಡುಬಂದಿದೆ. ೨೦೦೩ರಲ್ಲಿ ೨೫.೫೯ ಮಿಲಿಯನ್ ಪಕ್ಷಿಗಳ ಸಂಖ್ಯೆ ಇದ್ದದ್ದು ೨೦೧೨ರಲ್ಲಿ ೫೩.೪೪ ಮಿಲಿಯನ್‌ನಷ್ಟು ಏರಿಕೆಯಾಗಿದೆ. ಜಿಲ್ಲಾವಾರು ಪೌಲ್ಟ್ರೀ ಸಂಖ್ಯೆಯನ್ನು ಅವಲೋಕಿಸಿದಾಗ ಬೆಂಗಳೂರು ಗ್ರಾಮೀಣ ಜಿಲ್ಲೆಯ ಕೊಡುಗೆ ಶೇ. ೧೫.೨೮ರಷ್ಟು ಪ್ರಮಾಣದ ಮೂಲಕ ಪ್ರಥಮ ಸ್ಥಾನದಲ್ಲಿದೆ. ಕೋಲಾರ ಮತ್ತು ಕೊಪ್ಪಳ ಜಿಲ್ಲೆಗಳು ಕ್ರಮವಾಗಿ ದ್ವಿತೀಯ ಮತ್ತು ತೃತೀಯ ಸ್ಥಾನದಲ್ಲಿವೆ.

**ಪಶುಸಂಗೋಪನಾ ನೆಲೆಯಲ್ಲಿ ಮಹಿಳಾ ಸಬಲೀಕರಣ**

ಗ್ರಾಮೀಣ ಪ್ರದೇಶದಲ್ಲಿ ಪಶುಸಂಗೋಪನೆ ಮತ್ತು ಮಹಿಳೆಯರ ಮಧ್ಯೆ ಅವಿನಾಭಾವ ಸಂಬಂಧ ಇದೆ. ಗ್ರಾಮೀಣ ಭಾಗದಲ್ಲಿ ಕೃಷಿಯ ಜೊತೆಗೆ ಪಶುಸಂಗೋಪನೆಯನ್ನು ಸದಾಕಾಲ ಮಹಿಳೆ ಮಾಡುತ್ತಲೇ ಬಂದಿದ್ದಾಳೆ, ಇದು ಆರ್ಥಿಕ ಬಲವನ್ನು ತಂದುಕೊಡುತ್ತದೆ ಅಲ್ಲದೆ, ಕಷ್ಟದ ಪರಿಸ್ಥಿತಿಯಲ್ಲಿ ನೆರವಾಗುತ್ತದೆ. ಮಳೆಯ ಅಭಾವದಿಂದಾಗಿ ಕೃಷಿ ಬೆಳೆ ನಿರೀಕ್ಷಿತ ಮಟ್ಟವನ್ನು ತಲುಪದೇ ಇದ್ದರೂ ಅಂತಹ ಪರಿಸ್ಥಿತಿಯಲ್ಲಿ ಕೋಳಿ, ಕುರಿ, ಎಮ್ಮೆ, ಹಸು, ಇತ್ಯಾದಿಗಳ ಸಾಕಾಣಿಕೆಯಿಂದ ಮನೆಯನ್ನು ನಡೆಸಿಕೊಂಡು ಮಹಿಳೆ ಹೋಗುತ್ತಿರುವುದು ಕಂಡುಬರುತ್ತದೆ.

ಹಾಗೆಯೇ "ಹೈನುಗಾರಿಕೆ ಮೂಲಕ ಗ್ರಾಮೀಣ ಪ್ರದೇಶದ ಮಹಿಳೆಯರ ಸಾಮಾಜಿಕ, ಆರ್ಥಿಕ, ಅಭಿವೃದ್ಧಿಗಾಗಿ ೨೦೧೪ರಿಂದ ಕ್ಷೀರ ಸಂಜೀವಿನಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ.' ಇದು ರಾಜ್ಯದ ೨೮ ಜಿಲ್ಲೆಗಳಲ್ಲಿ ಒಟ್ಟು ೨೫೦ ಹಾಲು ಉತ್ಪಾದಕರ ಮಹಿಳಾ ಸಹಕಾರಿ ಸಂಘಗಳಿಂದ ಒಟ್ಟು ರೂ. ೧೦,೦೦೦/- ಆದ್ಯತಾ ಗುಂಪಿನ ಸದಸ್ಯರನ್ನು ಗುರಿಯಾಗಿಸಿಕೊಂಡಿದೆ. ದುರ್ಬಲ ವರ್ಗದ ಬಡತನ ರೇಖೆಗಿಂತ ಕೆಳಗಿರುವ ಗ್ರಾಮೀಣ ಪ್ರದೇಶದ ಮಹಿಳಾ ಸ್ವಸಹಾಯ ಗುಂಪಿನ ಸದಸ್ಯರು, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ವಿಕಲಚೇತನರು, ಭೂರಹಿತರು, ವಿಧವೆಯರು, ಮಹಿಳಾ ಲೈಂಗಿಕ ವೃತ್ತಿನಿರತರು, ವಲಸೆನಿರತ ಕೂಲಿ ಕಾರ್ಮಿಕರು ಈ ಯೋಜನೆಯ ಫಲಾನುಭವಿಗಳಾಗಿರುತ್ತಾರೆ.

ಮಹಿಳಾ ಸ್ವ-ಸಹಾಯ ಗುಂಪುಗಳ ಆದ್ಯತಾ ವಲಯದ ಸದಸ್ಯರಿಗೆ ಹೈನುಗಾರಿಕೆಯಲ್ಲಿ ತೊಡಗಿಸಿಕೊಂಡು ಆರ್ಥಿಕ ಅಭಿವೃದ್ಧಿಹೊಂದಲು ಹೈನುರಾಸು ಖರೀದಿಗಾಗಿ ತಲಾ ರೂ. ೧೦,೦೦೦/-ಗಳಷ್ಟು ಬಡ್ಡಿರಹಿತ ಸಾಲ ಕೊಡಲಾಗುತ್ತಿದೆ. ಸಾಲ ಪಡೆದ ಸದಸ್ಯರು ಹಸು ಖರೀದಿಸಿ ಮಹಿಳಾ ಹಾಲು ಉತ್ಪಾದಕರ ಸಹಕಾರಿ ಸಂಘಗಳಿಗೆ ಹಾಲು ಹಾಕುವ ಮೂಲಕ ಸಾಲ ತೀರಿಸುತ್ತಾರೆ. ಈ ಆವರ್ತ/ಸುತ್ತು ನಿಧಿಯು ದುರ್ಬಲ ವರ್ಗದ ಮಹಿಳೆಯರ ಅಗತ್ಯತೆಗಳಿಗೆ ನಿರಂತರವಾಗಿ ಸಾಲ ಪಡೆಯಲು ಅವಕಾಶ ಇದೆ. ಇದರೊಂದಿಗೆ ಹೈನುರಾಸು ಖರೀದಿಸಲು ಬೇಕಾಗುವ ಉಳಿದ ಹಣಕ್ಕೆ ಹಣಕಾಸು ಸಂಸ್ಥೆಗಳು, ಸರ್ಕಾರದ ನಿಗಮಗಳು ಹಾಗೂ ಸ್ವ-ಸಹಾಯ ಗುಂಪು ಅಥವಾ ಬ್ಯಾಂಕುಗಳಿಂದ ಸಾಲ ಪಡೆಯಲು ಸಹಕರಿಸಲಾಗುವುದು.

ಹಾಲು ಉತ್ಪಾದಕರ ಮಹಿಳಾ ಸಹಕಾರಿ ಸಂಘಗಳನ್ನು ಮಹಿಳೆಯರೇ ನಡೆಸ ಬೇಕಾಗಿದ್ದು, ಕಾರ್ಯದರ್ಶಿ, ಹಾಲು ಪರೀಕ್ಷಕರು, ಕಾರ್ಯಕಾರಿ ಸಮಿತಿ ಸದಸ್ಯರುಗಳಿಗೆ ತರಬೇತಿ, ಅಧ್ಯಕ್ಷರುಗಳಿಗೆ ತರಬೇತಿ, ಕಂಪ್ಯೂಟರ್ ತರಬೇತಿ, ಸ್ವ-ಸಹಾಯ ಗುಂಪಿನ ಪ್ರತಿನಿಧಿಗಳ ತರಬೇತಿ, ಹೈನುರಾಸುಗಳ ನಿರ್ವಹಣೆ, ಪ್ರಥಮ ಚಿಕಿತ್ಸೆ, ಕೃತಕ ಗರ್ಭಧಾರಣೆ ಮತ್ತು ಕೃತಕ ಗರ್ಭಪರೀಕ್ಷೆ ತರಬೇತಿಯನ್ನು ನೀಡಲಾಗುವುದು. ಇವರಿಗೆ ಗುಜರಾತಿನ ಅಮೂಲ್ ಡೇರಿಗೆ ಭೇಟಿ ನೀಡಿ ಪ್ರತ್ಯಕ್ಷವಾಗಿ ನೋಡಿ ತಿಳಿದುಕೊಳ್ಳಲು ಅವಕಾಶವನ್ನು ಒದಗಿಸಲಾಗಿದೆ. ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘದ ಸದಸ್ಯರು ಮತ್ತು ಅವರ ಕುಟುಂಬದ ಇತರೆ ಸದಸ್ಯರ ಕಲ್ಯಾಣಕ್ಕಾಗಿ ಆರೋಗ್ಯ ಶಿಕ್ಷಣ ಮತ್ತು ಶುಚಿತ್ವ, ಸಮತೋಲನಾ ಪೌಷ್ಟಿಕ ಆಹಾರ ತಯಾರಿಕೆ, ತಾಯಿ ಮತ್ತು ಮಗುವಿನ ಆರೋಗ್ಯ ಪಾಲನೆ-ಪೋಷಣೆ, ಶುದ್ಧ ಕುಡಿಯುವ ನೀರು, ಲಸಿಕೆ/ಚುಚ್ಚು ಮದ್ದು ಹಾಕಿಸುವುದು, ರೋಗ ನಿರೋಧಕ ಕ್ರಮಗಳ ಅನುಸರಿಸುವಿಕೆ, ಸ್ಥಳೀಯವಾಗಿ ಲಭ್ಯವಿರುವ ತರಕಾರಿಗಳ ಬಳಕೆ, ಮೂಢನಂಬಿಕೆ ಹಾಗೂ ಕಂದಾಚಾರಗಳ ಆಚರಣೆಯನ್ನು ತೊಲಗಿಸುವುದು ಮತ್ತು ಪೌಷ್ಟಿಕಾಂಶ ಕೊರತೆ ತಡೆಯುವಿಕೆ ಬಗ್ಗೆ ಯೋಜನೆವತಿಯಿಂದ ಅರಿವು ಮೂಡಿಸುವ ಕಾರ್ಯಕ್ರಮ ಹಮ್ಮಿಕೊಳ್ಳಲಾಗುತ್ತಿದೆ. ಆರೋಗ್ಯ ತಪಾಸಣೆ ಶಿಬಿರ, ನೇತ್ರ / ರಕ್ತಪರೀಕ್ಷೆ ಮತ್ತು ರಕ್ತದಾನ ಶಿಬಿರಗಳನ್ನು ಏರ್ಪಡಿಸುವುದು ಹಾಗೂ ಸ್ಥಳೀಯವಾಗಿ ಲಭ್ಯ ಇರುವ ತರಕಾರಿ, ಸೊಪ್ಪು ಇತರೆ ಆಹಾರ ಪದಾರ್ಥಗಳನ್ನು ಬಳಸಿ ತಾಯಿ ಮತ್ತು ಮಕ್ಕಳಿಗೆ ಸಮತೋಲನ ಆಹಾರ ತಯಾರಿಸುವ ವಿಧಾನಗಳ ಕುರಿತು ಪ್ರಾತ್ಯಕ್ಷಿತೆ ಕಾರ್ಯಕ್ರಮ ಕೈಗೊಳ್ಳಲಾಗುತ್ತಿದೆ. ಪ್ರತಿ ಸಂಘದಲ್ಲಿ ೪ ಶಿಬಿರಗಳನ್ನು ಏರ್ಪಡಿಸಲಾಗುವುದು. ಒಂದು ಶಿಬಿರಕ್ಕೆ ರೂ. ೨,೫೦೦/-ಗಳಂತೆ ಅನುದಾನ ಮೀಸಲಿರಿಸಲಾಗಿದೆ.

ಗ್ರಾಮೀಣ ಭಾಗದ ಮಹಿಳೆಯರಿಗೆ ಕಾನೂನಿನ ಅರಿವು ಇಲ್ಲದೆ ಈ ಮಹಿಳೆಯರು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ, ಆದ ಕಾರಣ ಕಾನೂನಿನ ಬಗ್ಗೆ ಅರಿವು ಮೂಡಿಸುವುದು ಈ ಯೋಜನೆಯಲ್ಲಿ ಬಹಳ ಮುಖ್ಯ. ಈ ನಿಟ್ಟಿನಲ್ಲಿ ಯೋಜನೆ ವತಿಯಿಂದ ಕಾನೂನು ಅರಿವು ನೀಡುವ ಕಾರ್ಯಕ್ರಮಗಳನ್ನು ಆಯೋಜಿಸಿ, ಹಿರಿಯ ನ್ಯಾಯವಾದಿ ಅಥವಾ ಮಹಿಳಾ ನ್ಯಾಯವಾದಿಗಳನ್ನು ಆಹ್ವಾನಿಸಿ, ಮಹಿಳೆಯರಿಗೆ ಆಸ್ತಿ ಹಕ್ಕು, ವರದಕ್ಷಿಣೆ ನಿಷೇಧ, ಸಾಮಾಜಿಕವಾಗಿ, ಕೌಟುಂಬಿಕವಾಗಿ ಶೋಷಿಸಲ್ಪಡುವ ಮಹಿಳೆಯರಿಗೆ ಕಾನೂನು ನೆರವಿನ ಬಗ್ಗೆ ಅರಿವು ಮೂಡಿಸಲಾಗುತ್ತಿದೆ. ಅದೇ ಸಂದರ್ಭದಲ್ಲಿ ಅವರಿಗೆ ತಾಲ್ಲೂಕು ಪಂಚಾಯತ್, ನ್ಯಾಯಾಲಯ, ಆರಕ್ಷಕ ಠಾಣೆ, ತಹಸೀಲ್ದಾರ್ ಕಛೇರಿ ಮತ್ತು ಬ್ಯಾಂಕುಗಳಿಗೆ ಭೇಟಿ ಮಾಡಿಸುವ ಮೂಲಕ ಸದರಿ ಸಂಸ್ಥೆಗಳು / ಕಛೇರಿಗಳು ಕೆಲಸ ನಿರ್ವಹಿಸುವ ರೀತಿ ನೀತಿಗಳು, ಅವುಗಳಿಂದಾಗುವ ಅನುಕೂಲಗಳ ಬಗ್ಗೆ ಅರಿವು ಮೂಡಿಸಲಾಗುವುದು. ಪ್ರತಿ ಸಂಘದಲ್ಲಿ ೩ ಶಿಬಿರಗಳನ್ನು ಏರ್ಪಡಿಸಲಾಗುವುದು. ಒಂದು ಶಿಬಿರಕ್ಕೆ ರೂ. ೨,೫೦೦/-ಗಳಂತೆ ಅನುದಾನ ನೀಡಲಾಗುತ್ತಿದೆ.

ಲಿಂಗಸೂಕ್ಷ್ಮತೆ ಬಗ್ಗೆ ಅರಿವು ಮೂಡಿಸುವುದು, ಗಂಡುಮಕ್ಕಳಿಗೆ ಸಿಗುವ ಸರಿಸಮಾನ ವಿದ್ಯಾಭ್ಯಾಸವನ್ನು ಹೆಣ್ಣುಮಕ್ಕಳಿಗೂ ಕೊಡಿಸುವುದು. ವಿಧವೆಯರ ಪುನರ್ ವಿವಾಹಗಳ ಬಗ್ಗೆ ಅರಿವು ಮೂಡಿಸುವುದು, ಮಹಿಳೆಯರ ಶಿಕ್ಷಣದ ಬಗ್ಗೆ ಮನವರಿಕೆ ಮಾಡಿ, ಸರ್ಕಾರಿ ಸಂಸ್ಥೆಗಳು, ಬ್ಯಾಂಕುಗಳು / ಸ್ವಸಹಾಯ ಗುಂಪುಗಳು ಹಾಗೂ ಇತರೆ ಸಂಸ್ಥೆಗಳಿಂದ ಸಿಗುವ ಸಾಮಾಜಿಕ, ಆರ್ಥಿಕ ಸೌಲಭ್ಯಗಳ ಬಗ್ಗೆ ಮಹಿಳೆಯರಿಗೆ ತಿಳುವಳಿಕೆ ಮುಂತಾದ ಯೋಜನೆಗಳಿವೆ. ಇಂತಹ ೩ ದಿನಗಳ ಶಿಬಿರಗಳನ್ನು ಏರ್ಪಡಿಸುವುದರೊಂದಿಗೆ ಒಂದು ದಿನದ ಪುರುಷ ಚೇತನ ಶಿಬಿರಗಳಲ್ಲಿ ಮಹಿಳೆಯರು ಅನುಭವಿಸುವಂತಹ ಸಮಸ್ಯೆಗಳ ಬಗ್ಗೆ ಗಂಡಸರಿಗೆ ತಿಳುವಳಿಕೆ ನೀಡಲಾಗುವುದು. ಈ ಶಿಬಿರಗಳನ್ನು ಆಯೋಜಿಸಲು ರೂ. ೭೫೦೦/- ರೂಪಾಯಿಗಳ ಅನುದಾನ ಒದಗಿಸಲಾಗಿದೆ.

ಮಹಿಳೆಯರು ತಮ್ಮ ಬಿಡುವಿನ ವೇಳೆಯಲ್ಲಿ ಎರೆಹುಳು ಗೊಬ್ಬರ ಘಟಕವನ್ನು ಸುಲಭ ರೀತಿಯಲ್ಲಿ ತಯಾರಿಸಬಹುದು. ಇದರಿಂದ ಸ್ವ-ಉದ್ಯೋಗವನ್ನು ಕಲ್ಪಿಸಿದಂತಾಗುತ್ತದೆ. ಎರೆಹುಳು ಗೊಬ್ಬರ ತಯಾರಿಕಾ ಘಟಕದ ಅಳತೆ ೧೦ ಅಡಿ ಉದ್ದ x ೪ ಅಡಿ ಅಗಲ x ೩ ಅಡಿ ಆಳದ ತೊಟ್ಟಿ ನಿರ್ಮಾಣಕ್ಕೆ ರೂ. ೭೦೦೦/-

**ವ್ಯತ್ಯಾಸ**

ಗೆದ್ದರೆ
ನೀ ಯಾರೆಂದು
ಜಗಕೆ ಗೊತ್ತಾಗುತ್ತೆ !
ಸೋತರೆ
ನಿನ್ನವರು ಯಾರೆಂದು
ನಿನಗೆ ಗೊತ್ತಾಗುತ್ತೆ !

**ದ್ವಾರನಕುಂಟೆ ಪಾತಣ್ಣ**
ಬೆಂಗಳೂರು – ೭೩

ಅನುದಾನ ನೀಡಲಾಗುವುದು. ಈ ಘಟಕದಿಂದ ೬೦೦ ಕೆ.ಜಿ. ಎರೆಹುಳು ಗೊಬ್ಬರವನ್ನು ೮೦–೯೦ ದಿನಗಳಲ್ಲಿ ತಯಾರಿಸಬಹುದಾಗಿದೆ. ಎರೆಹುಳು ಗೊಬ್ಬರ ಉತ್ಪಾದನಾ ಘಟಕಗಳು ಸ್ವಸಹಾಯ ಗುಂಪಿನ ಸದಸ್ಯರ ಮೂಲಕ ಮಹಿಳಾ ಹಾಲು ಉತ್ಪಾದಕರ ಸಹಕಾರ ಸಂಘಗಳಲ್ಲಿ ಸ್ಥಾಪಿಸಲಾಗುತ್ತಿದೆ. ಇದರ ನಿರ್ವಹಣೆಯು ಸಂಬಂಧಪಟ್ಟ ಸ್ವ–ಸಹಾಯ ಗುಂಪುಗಳದ್ದಾಗಿದ್ದು, ಇದು ಸ್ವ–ಸಹಾಯ ಗುಂಪುಗಳ ಆದಾಯ ಹೆಚ್ಚಿಸಲು ಸಹಾಯವಾಗುವುದು.

ಸಾಮಾನ್ಯವಾಗಿ ಮೇವು ಬೆಳೆ ಬೆಳೆಯಬೇಕಾದರೆ ಮಣ್ಣು, ನೀರು ಮತ್ತು ಸೂರ್ಯನ ಬೆಳಕು ಅತ್ಯಾವಶ್ಯಕ. ಇತ್ತೀಚಿನ ದಿನಗಳಲ್ಲಿ ನೀರಿನ ಅಭಾವವಿರುವುದರಿಂದ ಹೈನುರಾಸುಗಳಿಗೆ ಮೇವಿನ ಪೂರೈಕೆಯಲ್ಲಿ ವ್ಯತ್ಯಯವಾಗಿದೆ. ಈ ಸಮಸ್ಯೆಯನ್ನು ಸರಿದೂಗಿಸುವ ನಿಟ್ಟಿನಲ್ಲಿ, ಮಣ್ಣು ಮತ್ತು ಸೂರ್ಯನ ಬೆಳಕಿಲ್ಲದೆ ಕೇವಲ ಒಂದೇ ವಾರದಲ್ಲಿ ಪೌಷ್ಟಿಕ ಮೇವನ್ನು ಉತ್ಪಾದಿಸುವ ತಂತ್ರಜ್ಞಾನವನ್ನು ಹೈಡ್ರೋಫೋನಿಕ್ ಯಂತ್ರದಲ್ಲಿ ಅಳವಡಿಸಲಾಗಿದೆ. ಈ ಯಂತ್ರವನ್ನು ಎಲ್ಲಾ ಅರ್ಹ ಸ್ವಸಹಾಯ ಗುಂಪು, ಪ್ರಗತಿಪರ ಮಹಿಳೆಯರು ಉಪಯೋಗಿಸಲು ಅನುಕೂಲವಾಗುತ್ತಿದೆ. ಇದು ಪ್ರಾತ್ಯಕ್ಷಿಕೆ ಪೂರಕವಾಗಿ ಕೆಲಸ ನಿರ್ವಹಿಸುತ್ತದೆ. ಅಲ್ಲದೆ, ಇದರಿಂದ ಮೇವು ಅಭಾವ ನೀಗಿಸಲು ಸಹ ಅನುಕೂಲಕರವಾಗಿದೆ. ಹೈಡ್ರೋಫೋನಿಕ್ ಮೇವು ಬೆಳೆಸುವ ಯಂತ್ರಗಳು ಜಿಲ್ಲೆಗೆ ಒಂದರಂತೆ ಯೋಜನೆಯಿಂದ ಒದಗಿಸಲಾಗುವುದು. ಪ್ರತಿ ಜಿಲ್ಲೆಯ ಕೇಂದ್ರ ಸ್ಥಾನದಲ್ಲಿರುವ ಉತ್ತಮ ಮಹಿಳಾ ಸಹಕಾರಿ ಹಾಲು ಉತ್ಪಾದಕರ ಸಂಘದಲ್ಲಿ ಅಳವಡಿಸಲಾಗುವುದು. ಇದರ ಉಸ್ತುವಾರಿ ಮತ್ತು ಇದರಿಂದ ಬರುವ ಆದಾಯ ಸದರಿ ಸಂಘದ್ದಾಗಿರುತ್ತದೆ, ಇದರಿಂದ ಸಂಘದ ಲಾಭ ಹೆಚ್ಚಾಗಿ ಹಾಲು ಹಾಕುವ ಸ್ವ–ಸಹಾಯ ಗುಂಪುಗಳ ಫಲಾನುಭವಿಗಳಿಗೆ ಬೋನಸ್ ರೂಪದಲ್ಲಿ ಕೊಡಲಾಗುವುದು ಮತ್ತು ಕಡಿಮೆ ದರದಲ್ಲಿ ಸ್ವ–ಸಹಾಯ ಗುಂಪಿನ ಸದಸ್ಯರುಗಳಿಗೆ ಹಸಿರು ಮೇವು ಕೊಡಲಾಗುತ್ತದೆ.

ಬಹುತೇಕ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘಗಳು ಗ್ರಾಮೀಣ ಪ್ರದೇಶದಲ್ಲಿವೆ. ಗ್ರಾಮೀಣ ಪ್ರದೇಶಗಳಲ್ಲಿ ವಿದ್ಯುತ್ ಸಮಸ್ಯೆ ವಿಪರೀತವಾಗಿರುತ್ತದೆ. ಅದರಲ್ಲೂ ಬೇಸಿಗೆ ಸಮೀಪಿಸುತ್ತಿದ್ದಂತೆ ದಿನಕ್ಕೆ ೮–೯ ತಾಸು ಲೋಡ್‌ಶೆಡ್ಡಿಂಗ್ ಇರುತ್ತದೆ. ಬೆಳಿಗ್ಗೆ ಮತ್ತು ಸಂಜೆ ವೇಳೆ ಗ್ರಾಮೀಣ ಜನರು ಸಂಘಗಳಿಗೆ ಹಾಲು ತಂದಾಗ ವಿದ್ಯುತ್ ಸಮಸ್ಯೆಯಿಂದ ಗಂಟೆಗಟ್ಟಲೆ ಕಾಯಬೇಕು. ಇಂತಹ ಸಮಸ್ಯೆಗೆ ಕಡಿವಾಣ ಹಾಕಲು ಸೋಲಾರ್ ವಿದ್ಯುತ್ ಅಳವಡಿಸಲಾಗುವುದು. ಪ್ರತಿ ಸಂಘಕ್ಕೆ ಎರಡು ಸೋಲಾರ್ ಪ್ಯಾನೆಲ್‌ಗಳನ್ನು ಅಳವಡಿಸಿ ಬ್ಯಾಟರಿ ಜೋಡಣೆ ಮಾಡಲಾಗುತ್ತದೆ. ಇದರಿಂದ ಮಿಲ್ಕ್ ಟೆಸ್ಟರ್ ಮತ್ತು ಎಲೆಕ್ಟ್ರಾನಿಕ್ ವೇಯಿಂಗ್ ಸ್ಕೇಲ್‌ಗಳನ್ನು ಬಳಸಲಾಗುವುದು. ಮಹಿಳಾ ಹಾಲು ಉತ್ಪಾದಕರ ಸಹಕಾರ ಸಂಘಗಳಿಗೆ ಹಾಲು ತಂದ ಗ್ರಾಮೀಣದ ಜನರು ಇನ್ನು ಮುಂದೆ ಕರೆಂಟ್ ಇಲ್ಲ ಎಂದು ಪೇಚಾಡಬೇಕಿಲ್ಲ, ಸೌರ ವಿದ್ಯುತ್ ಮೂಲಕ ಕ್ಷಣದಲ್ಲಿಯೇ ಹಾಲಿನ ಗುಣಮಟ್ಟ ಮತ್ತು ಪ್ರಮಾಣ ಅಳತೆ ಮಾಡಬಹುದು.

ಬಡತನ ರೇಖೆಗಿಂತ ಕೆಳಗಿರುವ ಮತ್ತು ಪರಿಶಿಷ್ಟ ಜಾತಿ ಹಾಗೂ ವರ್ಗದ ಕುಟುಂಬ ಮಹಿಳೆಯರಲ್ಲಿ ಸುಮಾರು ೧.೧೦ ಲಕ್ಷ ಮಂದಿ ಸ್ಟೆಪ್ ಯೋಜನೆಯ ಫಲಾನುಭವಿಗಳಾಗಿರುತ್ತಾರೆ. ಒಟ್ಟಾರೆ ಇದುವರೆಗೂ ೩,೧೫೧ ಮಹಿಳಾ ಹಾಲು ಉತ್ಪಾದಕರ ಸಂಘಗಳನ್ನು ರಚಿಸಲಾಗಿದ್ದು, ಇದರಿಂದ ೬,೨೦೦ ಮಹಿಳೆಯರಿಗೆ ಉದ್ಯೋಗ ಅವಕಾಶ ದೊರಕಿಸಲಾಗಿದೆ. ಇದರಲ್ಲಿ ೧೭೦ ವಿಧವೆಯರು, ೩೮ ವಿಚ್ಛೇದಿತ ಮಹಿಳೆಯರು ಮತ್ತು ೪೦ ವಿಕಲಚೇತನ ಮಹಿಳೆಯರೂ ಸೇರಿರುತ್ತಾರೆ. ಇವರಿಗೆ ಸರಾಸರಿ ವೇತನ ಮಾಹೆಯಾನ ರೂ. ೩,೦೦೦/–ರಷ್ಟನ್ನು ಮಹಿಳಾ ಸಂಘಗಳಿಂದ ನೀಡಲಾಗುತ್ತಿದೆ. ಡಿಸೆಂಬರ್ ೨೦೧೪ರ ಅಂತ್ಯಕ್ಕೆ ಸ್ಟೆಪ್ ಯೋಜನೆ ಅಂಚಿನ ಹಣದಿಂದ ಸುಮಾರು ೫೬,೫೪೪ ಫಲಾನುಭವಿಗಳು ಹೈನುರಾಸುಗಳನ್ನು ಖರೀದಿಸಿರುತ್ತಾರೆ. ಸ್ಟೆಪ್ ಮಹಿಳಾ ಸಂಘಗಳಿಂದ ದಿನವೊಂದಕ್ಕೆ ಸರಾಸರಿ ೬.೫೦ ಲಕ್ಷ ಲೀಟರ್ ಹಾಲು ಶೇಖರಣೆಯಾಗುತ್ತಿದ್ದು, ದಿನವೊಂದಕ್ಕೆ ಸುಮಾರು ರೂ. ೧.೭೯ ಕೋಟಿ ಹಣ (ಇದರಲ್ಲಿ ಕರ್ನಾಟಕ ಸರ್ಕಾರದ ರೂ. ೪.೦೦ ಧನಸಹಾಯ ಸೇರಿರುತ್ತದೆ). ಅಂದರೆ ತಿಂಗಳಿಗೆ ರೂ. ೫೫.೭೩ ಕೋಟಿ ಹಣ ಲಭ್ಯವಾಗುತ್ತಿದೆ. ಈ ಹಣ ಮಹಿಳೆಯರ ಕೈ ಸೇರುತ್ತಿದೆ. ಸ್ಟೆಪ್ ಸಂಘಗಳಲ್ಲಿ ಇದುವರೆಗೂ ಸುಮಾರು ೨೫೭೯ ನಂದಿನಿ ಮಹಿಳಾ ಸ್ವಸಹಾಯ ಗುಂಪುಗಳನ್ನು ರಚಿಸಿದ್ದು, ಇದರ ಉಳಿತಾಯ ೧೩.೪೪ ಕೋಟಿ ರೂ.ಗಳು. ಈ ನಂದಿನಿ ಸ್ವಸಹಾಯ ಗುಂಪುಗಳು ಗ್ರಾಮೀಣ ಮಹಿಳೆಯರ ಆರ್ಥಿಕ ಮತ್ತು ಸಾಮಾಜಿಕ ಸಬಲೀಕರಣದ ಮುಖ್ಯ ಕೇಂದ್ರಗಳಾಗಿವೆ. ಸ್ಟೆಪ್ ಕಾರ್ಯಕ್ರಮವು ಮಹಿಳೆಯರನ್ನು ಸಶಕ್ತ ಗುಂಪುಗಳಲ್ಲಿ ಸಂಘಟಿಸಿ, ಅವರ ವೃತ್ತಿ ಕೌಶಲ್ಯತೆಯನ್ನು ಅಭಿವೃದ್ಧಿಪಡಿಸಿ ಉತ್ಪಾದಕ ಆಸ್ತಿಗಳಿಗೆ ವ್ಯವಸ್ಥೆ ಮಾಡಿದೆ. ಇದರಿಂದ ಮಹಿಳೆಯರು ಆರ್ಥಿಕ ಸಬಲೀಕರಣಗೊಂಡು, ಚುನಾವಣೆಗಳಲ್ಲಿ ಸ್ಪರ್ಧಿಸಿ, ಸಮುದಾಯದ ಒಳ್ಳೆಯ ನಾಯಕರಾಗಿ ರೂಪುಗೊಂಡಿದ್ದು, ಇವರು ಸಮುದಾಯದ ಸಮಾಜ ಕಲ್ಯಾಣ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುತ್ತಿದ್ದಾರೆ.




ಮಾನವ ಅಭಿವೃದ್ಧಿ ವರದಿಯಲ್ಲಿ ಉಲ್ಲೇಖಿಸಿದಂತೆ ಲಕ್ಕವ್ವಾ ನಿಂಗಪ್ಪಾ ಹೆಗಡೆ ಎಂಬಾಕೆ ಬಡತನದ ಕುಟುಂಬದಿಂದ ಬಂದವಳು, ಈಕೆ ಮೆಟಗುಡ್ಡ ಗ್ರಾಮ, ಮುಧೋಳ ತಾಲೂಕು ಬಾಗಲಕೋಟೆ ಜಿಲ್ಲೆಯ ಶ್ರೀ ಶಾರದಾ ಸ್ತ್ರೀಶಕ್ತಿ ಗುಂಪಿನ ಸದಸ್ಯರು. ತನ್ನ ಗುಂಪಿನಿಂದ ರೂ. ೧೦೦೦ವನ್ನು ಸಾಲ ಪಡೆದು ಮೇಕೆಯನ್ನು ಖರೀದಿಸುತ್ತಾರೆ. ಅದು ಮರಿ ಹಾಕುತ್ತದೆ. ಮೇಕೆ ಮತ್ತು ಮೇಕೆ ಮರಿಯನ್ನು ಕಡಿಮೆ ಲಾಭಕ್ಕಾಗಿ ಮಾರುತ್ತಾರೆ. ನಂತರ ಮತ್ತೆ ಸ್ತ್ರೀಶಕ್ತಿ ಗುಂಪಿನಿಂದ ರೂ. ೩೦೦೦/– ಸಾಲ ಪಡೆದುಕೊಂಡು ಹಸುವನ್ನು ಖರೀದಿಸುತ್ತಾರೆ. ಹಾಲು ಮತ್ತು ಹಾಲಿನ ಉತ್ಪನ್ನಗಳನ್ನು ಮಾರಿ ಸಾಲ ತೀರಿಸುತ್ತಾರೆ. ಮೂರನೆಯ ಸಾಲವಾಗಿ ರೂ. ೫೦೦೦/–ವನ್ನು ಪಡೆದುಕೊಂಡು ಎಮ್ಮೆಯನ್ನು ಖರೀದಿಸುತ್ತಾರೆ, ಹಿಂದಿನ ರೀತಿಯಂತೆ ಮಾರಿ ಸಾಲ ತೀರಿಸುತ್ತಾರೆ. ಮತ್ತೆ ರೂ. ೭೦೦೦/–ನಷ್ಟು ಸಾಲವಾಗಿ ಪಡೆದುಕೊಂಡು ಮನೆಯ ನಿವೇಶನವನ್ನು ಖರೀದಿಸುತ್ತಾರೆ. ಐದನೆಯ ಸಾಲವಾಗಿ ರೂ. ೮೦೦೦/– ಪಡೆದುಕೊಂಡು ಒತ್ತೆ ಇಟ್ಟ ಜಮೀನನ್ನು ಬಿಡಿಸಿಕೊಳ್ಳುತ್ತಾರೆ. ಆರನೆಯ ಸಾಲವಾಗಿ ರೂ. ೬೦೦೦/–ವನ್ನು ಪಡೆದು ತನ್ನ ಗಂಡ ಮತ್ತು ಮಾವನಿಗೆ ನೀಡಿ ಕೃಷಿಯನ್ನು ಪ್ರಾರಂಭಿಸಲು ಸಹಾಯ ಮಾಡುತ್ತಾಳೆ. ಹೀಗೆ ಸ್ತ್ರೀ ಶಕ್ತಿ ಮತ್ತು ಪಶುಸಂಗೋಪನೆಯ ಮೂಲಕ ಗ್ರಾಮದಲ್ಲಿಯೇ ಮಾದರಿ ಮಹಿಳೆ ಆಗುತ್ತಾಳೆ.

ಸುಂದರಮ್ಮ ಐದು ವರ್ಷಗಳಿಂದ ಸ್ತ್ರೀಶಕ್ತಿ ಸಂಘದ ಸದಸ್ಯಳು. ಗಂಡ ಮತ್ತು ಇಬ್ಬರ ಮಕ್ಕಳ ಜೊತೆ ಹೊಳಲ್ಕೆರೆ ಗ್ರಾಮ ಚಿತ್ರದುರ್ಗ ಜಿಲ್ಲೆಯಲ್ಲಿ ವಾಸಿಸುತ್ತಾಳೆ. ಈ ಕುಟುಂಬಕ್ಕೆ ವಾಸಿಸಲು ಮನೆ ಇಲ್ಲ, ದುಡಿಮೆ ಮಾಡಲು ಜಮೀನು ಇಲ್ಲ. ಇಂತಹ ಪರಿಸ್ಥಿತಿಯ ನಡುವೆಯೂ ಒಂದು ಚಿಕ್ಕ ಕಿರಾಣಿ ಅಂಗಡಿಯನ್ನು ಪ್ರಾರಂಭಿಸುತ್ತಾಳೆ. ಕಿರಾಣಿ ಅಂಗಡಿಯ ಜೊತೆಗೆ ಹಸು–ಎಮ್ಮೆಯನ್ನೂ ಸಾಕಲು ಪ್ರಾರಂಭಿಸಿದರು. ಹಸು ಮತ್ತು ಎಮ್ಮೆ ಎರಡೂ ಹಾಲು ಕೊಡುತ್ತಿರುವುದರಿಂದ ಇವರ ಜೀವನಮಟ್ಟ ಸ್ವಲ್ಪ ದಿನದಲ್ಲಿಯೇ ಉತ್ತಮವಾಗಲು ಪ್ರಾರಂಭಿಸಿತು. ಇಂದು ೧೦ ಕುರಿ ಮತ್ತು ೧೦ ಮೇಕೆಯ ಒಡತಿ ಇವರಾಗಿದ್ದು ದಿನದಿಂದ ದಿನಕ್ಕೆ ಇವರ ಪಶುಸಂಗೋಪನೆ ಅಭಿವೃದ್ಧಿಯಾಗುತ್ತಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ, ಗ್ರಾಮೀಣ ಪ್ರದೇಶದಲ್ಲಿ ಮಹಿಳೆ ಪಶುಸಂಗೋಪನೆಯನ್ನು ಜೀವನಾಧಾರವಾಗಿ ಅವಲಂಬಿಸಿದ್ದು, ಅದರ ಅಭಿವೃದ್ಧಿಯು ಮಹಿಳಾ ಆರ್ಥಿಕ ಸಬಲೀಕರಣವನ್ನು ಮಾಡುತ್ತದೆ. ಹಾಗಾಗಿ ಪಶುಸಂಗೋಪನೆ ಅಭಿವೃದ್ಧಿಯಲ್ಲಿ ಮಹಿಳೆ, ಮಹಿಳಾ ಸಬಲೀಕರಣದಲ್ಲಿ ಪಶುಸಂಗೋಪನೆ ಎರಡು ಸಹ ಒಂದನ್ನೊಂದು ಅವಲಂಬಿಸಿವೆ ಎಂಬುದನ್ನು ಈ ಅಧ್ಯಯನವು ನಿರೂಪಿಸುತ್ತದೆ.

**ಡಾ|| ಸರೋಜಾ ಎಸ್. ಸಂತಿ**
ಪೋಸ್ಟ್ ಡಾಕ್ಟರಲ್ ಫೆಲೋ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ – ೫೮೩ ೨೨೨, ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ



# ಗುರುಗ್ರಹದ ಆಗಮನ

ರಾತ್ರಿಯ ಆಕಾಶದಲ್ಲಿ ಆಗಲೇ ಮೋಡಗಳ ಪ್ರಭಾವ ಕಾಣುತ್ತಿದೆ. ನೀಲಿ ಬಣ್ಣದ ಆಕಾಶ ಸಂಜೆಗೆ ಬೂದು ಬಣ್ಣಕ್ಕೆ ತಿರುಗುತ್ತದೆ. ಪ್ರಕಾಶಮಾನವಾದ ನಕ್ಷತ್ರಗಳು ಮಾತ್ರ ನೋಡಲು ಸಿಗುತ್ತವೆ. ಪಶ್ಚಿಮದ ಅಂಚಿನಲ್ಲಿ ಮಹಾವ್ಯಾಧ (ಒರೈಯನ್) ಮತ್ತು ವಿಜಯಸಾರಥಿ (ಆರಿಗಾ) ಇವನ್ನು ಗುರುತಿಸಬಹುದು. ಮಂಗಳವನ್ನು ರೋಹಿಣಿಯ ಸಮೀಪ ಗುರುತಿಸಿದಲ್ಲಿ ಕೆಂಪು ನಕ್ಷತ್ರ ಮತ್ತು ಕೆಂಪು ಗ್ರಹಗಳ ವ್ಯತ್ಯಾಸವನ್ನು ತಿಳಿಯಬಹುದು. ನೆತ್ತಿಯ ಮೇಲೆ ಸಿಂಹ ರಾಶಿ ಇದೆ. ಪೂರ್ವದಲ್ಲಿ ಪ್ರಖರವಾಗಿ ಹೊಳೆಯುವ ಗ್ರಹ ಗುರು. ಇದು ಚಿತ್ರಾ ನಕ್ಷತ್ರದ ಪಕ್ಕದಲ್ಲಿಯೇ ಇದೆ. ಕೆಂಪು ನಕ್ಷತ್ರ ಸ್ವಾತಿ ಇದರ ಉತ್ತರಕ್ಕೆ ಇದೆ. ಉತ್ತರದಲ್ಲಿ ಸಪ್ತರ್ಷಿ ಮಂಡಲ, ದಕ್ಷಿಣದಲ್ಲಿ ಲುಬ್ಧಕ (ಸಿರಿಯಸ್), ಅಗಸ್ತ್ಯ (ಕೆನೋಪಸ್). ಇವುಗಳ ಮೂಲಕ ಹಾದುಹೋಗುವ ಆಕಾಶಗಂಗೆಯ ಭಾಗವನ್ನು ಕಾಣಬಹುದು. ತ್ರಿಶಂಕು (ದಕ್ಷಿಣ ಶಿಲುಬೆ) ಸಹ ಈ ನದಿಯ ಹರವಿನಲ್ಲೇ ಇದೆ. ಪೂರ್ವ ದಿಕ್ಕಿನಲ್ಲಿ ನಕ್ಷತ್ರಗಳೇ ಇಲ್ಲವೇನೋ ಎನ್ನುವಷ್ಟು ಖಾಲಿ ಕಾಣುತ್ತದೆ. ಆದರೆ ಅಲ್ಲಿ ಕ್ಷೀಣ ನಕ್ಷತ್ರಗಳಿವೆ. ಹುಣ್ಣಿಮೆಯಂದು ಚಂದ್ರನ ಸನಿಹದಲ್ಲಿ ಇರುವ ವಿಶಾಖಾ ಬಹಳ ಕ್ಷೀಣವಾದದ್ದು; ಚಂದ್ರನ ಬೆಳಕೂ ಪ್ರಖರವಾಗಿರುವುದರಿಂದ ಕಾಣುವುದೇ ಇಲ್ಲ.

ಈ ತಿಂಗಳ ಮುಂಜಾವಿನಲ್ಲಿ ಬುಧ, ಶುಕ್ರ ಮತ್ತು ಶನಿಗಳನ್ನು ನೋಡಬಹುದು. ಪೂರ್ವದಲ್ಲಿ ಶುಕ್ರವನ್ನು ಗುರುತಿಸುವುದು ಏನೂ ಕಷ್ಟವಿಲ್ಲ. ೧೭ರಂದು ಬುಧಗ್ರಹದ ಗರಿಷ್ಠ ಕೋನೋನ್ನತಿ, ಶುಕ್ರಗ್ರಹಕ್ಕೂ ದಿಗಂತದ ಅಂಚಿಗೂ ಮಧ್ಯೆ ಬುಧವನ್ನು ಕಾಣಬಹುದು. ಇವೆರಡೂ ಮೀನ ರಾಶಿಯಲ್ಲಿವೆ. ಮಧ್ಯರಾತ್ರಿಗೆ ಸ್ವಲ್ಪ ಮುಂಚೆ ಉದಯಿಸುವ ಶನಿಗ್ರಹ ಮುಂಜಾವಿನಲ್ಲಿ ಪಶ್ಚಿಮಕ್ಕೆ ಸರಿದಿರುತ್ತದೆ. ಅದರ ಸನಿಹದಲ್ಲೇ ಕೆಂಪು ನಕ್ಷತ್ರ ಜ್ಯೇಷ್ಠ ಕಾಣುತ್ತದೆ.

ಈಟಾ ಅಕ್ವಾರಿಡ್ಸ್ ಎಂಬ ಹೆಸರಿನ ಉಲ್ಕಾವೃಷ್ಟಿ ತಿಂಗಳುದ್ದಕ್ಕೂ ಕ್ರಿಯಾಶೀಲವಾಗಿರುತ್ತದೆಯಾದರೂ ೬ರ ಬೆಳಗಿನ ಜಾವ ಉಲ್ಕೆಗಳು ಗರಿಷ್ಠ ಸಂಖ್ಯೆಯಲ್ಲಿ ಕಾಣಬಹುದು. ಗಂಟೆಗೆ ೩೦ರಿಂದ ೪೦ ಉಲ್ಕೆಗಳು ಬೀಳಬಹುದು.

ಭೂಮಿಯಿಂದ ಚಂದ್ರನ ದೂರ ದಿನ ದಿನಕ್ಕೂ ವ್ಯತ್ಯಾಸವಾಗುವುದು. ಅದರ ಕಕ್ಷೆ ವೃತ್ತವಲ್ಲದೆ ದೀರ್ಘವೃತ್ತವಾಗಿರುವುದೇ ಇದಕ್ಕೆ ಕಾರಣ (ಅದರ ಸರಾಸರಿ ದೂರ ೩೮೪,೦೦೦ ಕಿ. ಮೀ.). ಕೆಲವು ಬಾರಿ ಹುಣ್ಣಿಮೆಯಂದು ಅದು ಹತ್ತಿರವಿದ್ದಾಗ ಶೇಕಡಾ ೧೦ – ೧೪ರಷ್ಟು ದೊಡ್ಡದಾಗಿ ಕಾಣುವುದನ್ನು "ಸೂಪರ್ ಮೂನ್" ಎಂದು ಕರೆದು 'ಹೈಪ್' ಮಾಡುತ್ತಾರೆ. ಈ ಬಾರಿ ಅಮಾವಾಸ್ಯೆಯಂದು ಅದು ಭೂಮಿಗೆ ಕನಿಷ್ಠ ದೂರದಲ್ಲಿ ಇರುತ್ತದೆ (೩೬೩,೩೦೫ ಕಿ. ಮೀ). ಇದನ್ನು ನೋಡುವುದಂತೂ ಸಾಧ್ಯವಿಲ್ಲ. ಆದರೆ ಅದರ ಪ್ರಭಾವವನ್ನು ಕಡಲ ತೀರದಲ್ಲಿ ಕಾಣಬಹುದು. ಪ್ರತಿ ಅಮಾವಾಸ್ಯೆಗಿಂತ ಈ ಬಾರಿ ಭರತ–ಇಳಿತಗಳ ಅಬ್ಬರ ಜೋರು ಇರುತ್ತದೆ.

೨೨ರ ಮುಂಜಾನೆ
ಶುಕ್ರ ಮತ್ತು ಚಂದ್ರ

### ಖಗೋಳ ದಿನಚರಿ

ಮೇ ೩ ಚಾಂದ್ರಮಾಸದ ಮೊದಲಪಾದ (ಚಂದ್ರಾಸ್ತ ನಡು ರಾತ್ರಿಗೆ)
೬ ಮಂಗಳ – ರೋಹಿಣಿ ಜೋಡಿ (ಸಂಜೆ)*
ಗುರು – ಚಂದ್ರ ಜೋಡಿ (ಸಂಜೆ)*
ಈಟಾ ಅಕ್ವಾರಿಡ್ಸ್ ಉಲ್ಕಾವೃಷ್ಟಿ ಗರಿಷ್ಠ (ಮುಂಜಾವು)
೧೧ ಹುಣ್ಣಿಮೆ ೪:೧೨ಕ್ಕೆ
೧೨ ಚಂದ್ರ – ಭೂಮಿ ನಡುವೆ ಗರಿಷ್ಠ ದೂರ
೧೩ ಶನಿ – ಚಂದ್ರ ಜೋಡಿ (ಮುಂಜಾವು)
೧೭ ಬುಧಗ್ರಹದ ಗರಿಷ್ಠ ಕೋನೋನ್ನತಿ (ಮುಂಜಾವು)
೧೯ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೨೨ ಶುಕ್ರ – ಚಂದ್ರ ಜೋಡಿ (ಮುಂಜಾವು)*
೨೪ ಬುಧ – ಚಂದ್ರ ಜೋಡಿ (ಮುಂಜಾವು)*
೨೬ ಅಮಾವಾಸ್ಯೆ ೦೧:೧೪ಕ್ಕೆ
ಚಂದ್ರ – ಭೂಮಿ ನಡುವೆ ಕನಿಷ್ಠ ದೂರ ೦೧:೨೧ಕ್ಕೆ
೨೭ ಮಂಗಳ – ಚಂದ್ರ ಜೋಡಿ (ಸಂಜೆ)*

*(* ಛಾಯಾಗ್ರಹಣಕ್ಕೆ ಸದವಕಾಶ)*

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

**ಕೆ. ಎಸ್. ಪಾರ್ಥಸಾರಥಿ**

ಇತ್ತೀಚೆಗೆ ಶಿವಮೊಗ್ಗದಲ್ಲಿ "ದಕ್ಷಿಣಾಯನ" ಹೆಸರಿನಲ್ಲಿ ಕರ್ನಾಟಕದ ಮೂಲೆಮೂಲೆಗಳಿಂದ ಕವಿಗಳು, ಬರಹಗಾರರು, ನಾಟಕ, ಜನಪದ ಮುಂತಾಗಿ ಹಲವಾರು ಸೃಜನಶೀಲರ ಕ್ಷೇತ್ರದ ಪ್ರತಿಭಾನ್ವಿತರು, ಅಧ್ಯಾಪಕರು, ಬುದ್ಧಿಜೀವಿಗಳು, ಕಾರ್ಮಿಕ ವಲಯ, ಮಹಿಳಾ ಚಳುವಳಿ, ದಲಿತ ಚಳುವಳಿ ಮುಂತಾಗಿ ವಿಸ್ತಾರವಾದ ಹರವಿನ ಐನೂರಕ್ಕೂ ಮೀರಿ ಗೆಳೆಯರು ಸಮಾವೇಶಗೊಂಡಿದ್ದರು. ಸಾಕಷ್ಟು ಯುವಜನರೂ ಇದ್ದದ್ದು ಸಂತೋಷ. ಪ್ರೊ॥ ರಾಜೇಂದ್ರ ಚೆನ್ನಿ ನೇತೃತ್ವದಲ್ಲಿ ಕಾರ್ಯಕ್ರಮ ನಿರ್ದೇಶಿತವಾಗಿತ್ತು. ಪ್ರೊ॥ ಗಣೇಶ್ ದೇವಿಯವರು ಈ ಕಾರ್ಯಕ್ರಮದ ಹಿಂದಿನ ಪ್ರೇರಣೆ, ನಿರ್ದೇಶನ ನೀಡುತ್ತಿದ್ದರು. ಎಲ್ಲರೂ ಅವರವರ ವೈಯಕ್ತಿಕ ನೆಲೆಯಲ್ಲಿ ಬಂದವರಾಗಿದ್ದು, ಅವರು ಸಂಬಂಧ ಇಟ್ಟುಕೊಂಡಿರಬಹುದಾದ ಸಂಸ್ಥೆಗಳ ಹೆಸರು ಗೌಣ. ಎಲ್ಲರ ಮನಸ್ಸಿನಲ್ಲಿ ದುಗುಡ–ಆತಂಕವಿದ್ದದ್ದೂ ಸ್ಪಷ್ಟ . ನಾನೂ, ಸಂಗಾತಿ ಡಾ॥ ಸಿದ್ದನಗೌಡ ಪಾಟೀಲರೂ ಹಾಜರಿದ್ದೆವು. ಈ ಕಾರ್ಯಕ್ರಮಕ್ಕೆ ಯಾವುದೇ ಆಹ್ವಾನ ಪತ್ರಿಕೆ ಇರಲಿಲ್ಲ. ಆದರೂ ಎಲ್ಲರಿಗೂ ಸುದ್ದಿ ತಿಳಿದು ಸ್ವಯಂಪ್ರೇರಿತರಾಗಿ, ಸಂಘಟಿಸಿದವರ ಕರೆಗೆ ಓಗೊಟ್ಟು ಧಾವಿಸಿದ್ದು ವಿಶೇಷ. ಬಂದಿದ್ದವರಲ್ಲಿ ಯಾರಲ್ಲೂ ಹಿರಿಯ ಕಿರಿಯ ಭೇದಭಾವಗಳಿರಲಿಲ್ಲ. ಯಾವುದೇ ಪೂರ್ವನಿಯೋಜಿತ ಕಾರ್ಯಸೂಚಿ ಇರಲಿಲ್ಲ. ಔಪಚಾರಿಕ ಉದ್ಘಾಟನೆಯ ಕಾರ್ಯಕ್ರಮಕ್ಕೆ ಗೆಳೆಯ ಚಂಪಾ ಅಧ್ಯಕ್ಷರಾಗಿದ್ದರು. ಸಂಜೆಯವರೆಗೂ ನಡೆದ ಕಾರ್ಯಕ್ರಮದಲ್ಲಿ ಹಲವರು ಮಾತನಾಡಿದರು. ಪ್ರಶ್ನೋತ್ತರಗಳು ಇದ್ದುವು. ಮುಖ್ಯ ಸಂಗತಿ ಎಂದರೆ ಇದಕ್ಕೆ ಒಂದು ಅಜೆಂಡ ಇಲ್ಲ, ತೀರ್ಮಾನವೂ ಇಲ್ಲ, ಇದು ಒಂದು ಸಂಘಟನೆಯೂ ಅಲ್ಲ, ಸಂಘಟನೆಯನ್ನು ರಚಿಸುವ ಉದ್ದೇಶವೂ ಅಲ್ಲ. ಕೇವಲ ಅಭಿಪ್ರಾಯ ಹಂಚಿಕೊಳ್ಳುವುದು ಎಂದು ವಿವರಿಸಲಾಯ್ತು. ಯಾವುದೇ ರಾಜಕೀಯ ವಿಮರ್ಶೆ, ಟೀಕೆ, ತೀರ್ಮಾನ, ಖಂಡಿತ ಇಲ್ಲ ಎನ್ನಲಾಯ್ತು. ಇಡೀ ಕಾರ್ಯಕ್ರಮದ ಉದ್ದೇಶ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಬಂದೊದಗಿರುವ ಆತಂಕ ಕುರಿತು ತಮ್ಮ ತಮ್ಮ ತಿಳುವಳಿಕೆಯನ್ನು, ಅನುಭವವನ್ನು ಪರಸ್ಪರ ಹಂಚಿಕೊಳ್ಳುವುದು ಅಷ್ಟೇ ಎನ್ನಲಾಯಿತು. ಯಾವುದೇ ಸಂರಚನೆಯ ಹೊರೆ ಇಲ್ಲದೆ, ಮುಂದೇನು ಮಾಡಬೇಕು ಎನ್ನುವ ಬದ್ಧತೆಯನ್ನು ಕೈಗೊಳ್ಳುವ ಒತ್ತಾಯವಿಲ್ಲದೆ, ಮುಕ್ತವಾಗಿ ಆದರೂ ಅದರ ತಿಳಿವು ಪಡೆದು ತಮಗೆ ತೋರಿದಂತೆ ಈ ವಿಷಯವನ್ನು ಊರೂರಿಗೂ ಮೂಲೆಮೂಲೆಗೂ ಒಯ್ದು ಹರಡುವುದು ಅನ್ನುವುದು ಈ ಸಮಾವೇಶ ಸಂಘಟಕರ ನಿಲುವಾಗಿತ್ತು.

ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಹಲವು ರೀತಿಯ ಆಘಾತ ಪ್ರತಿದಿನವೂ ಉಂಟಾಗುತ್ತಿದೆ. ಆಳುವ ವರ್ಗದ ಯೋಜಿತ ನೀತಿ ಇದು ಎಂದು ನಮಗೆಲ್ಲರಿಗೂ ಅನುಭವಕ್ಕೆ ಬಂದಿದೆ. ಅಂದರೆ ಆ ಸ್ವಾತಂತ್ರ್ಯ ಯಾರಿಗೂ ಇಲ್ಲವೆಂದೇನಲ್ಲ. ಆಳುತ್ತಿರುವ ಅಧಿಕಾರಕ್ಕೆ ಬೆಂಬಲಿಸುವ ಅಭಿವ್ಯಕ್ತಿಗಳಿಗೇನೂ ಅಂಥ ಅಡಚಣೆಗಳಿಲ್ಲವಲ್ಲ. ಆರ್.ಎಸ್.ಎಸ್. ಮತ್ತು ಅದರ ಸಾವಿರಾರು ಮರಿ ಸಂಘಗಳು ಭಯಂಕರವಾಗಿ, ನಿರ್ಭಿಡೆಯಾಗಿ ತಮ್ಮ ಅಭಿವ್ಯಕ್ತಿಯನ್ನು ವ್ಯಕ್ತಪಡಿಸುತ್ತವೆ. ಏನೆಂದರೂ ವೇಮುಲಗೆ, ಕನ್ಹಯ್ಯಗೆ ಅದನ್ನು ಇಲ್ಲವೆನ್ನಲಾಗುತ್ತದೆ. ಈ ಸಮಾವೇಶದಲ್ಲಿ ಹಾಜರಿದ್ದವರದ್ದು ತಮ್ಮದೇ ಅಭಿವ್ಯಕ್ತಿ, ಆಳುತ್ತಿರುವ ಅಧಿಕಾರದ ಅಭಿವ್ಯಕ್ತಿಯ ಸ್ವಭಾವಕ್ಕೆ ವಿರುದ್ಧವಾದುದು. ಅದೇ ಕಾರಣ ಆಳುತ್ತಿರುವ ಅಧಿಕಾರ ನಮ್ಮ ವಿರುದ್ಧ ಟೀಕೆ, ಟೀಕೆಗೆ ಮೀರಿದ ಹಿಂಸೆಗೂ ನೇರವಾಗೋ ಪರೋಕ್ಷವಾಗೋ ಕುಮ್ಮಕ್ಕು ನೀಡುತ್ತದೆ. ಅದರ ಆಳ್ವಿಕೆಯಲ್ಲಿ ಪ್ರಭುತ್ವದ ಎಲ್ಲ ಬಲವೂ ಯಾವುದೇ ಎಗ್ಗಿಲ್ಲದೇ ಬಳಕೆಯಾಗುತ್ತದೆ ಎನ್ನುವ ಆತಂಕ ಹುದುಗಿದೆ. ಇದು ಗಂಭೀರ ವಿಷಯ. ವಿರುದ್ಧ ನಿಂತವರು ಪ್ರಭುತ್ವದ ಬಿಸಿಗೆ ಸಿಕ್ಕಿ, ಹಲವು ರೀತಿಯ ಸಂಕಷ್ಟಗಳನ್ನು ಎದುರಿಸಬೇಕಾಗಬಹುದು. ಈ ಆತಂಕದ ಹಿನ್ನೆಲೆಯಲ್ಲಿ ಗೆಳೆಯರೆಲ್ಲ ನೆರೆದಿದ್ದರು. ಓ ! ನಿಮ್ಮೂರಲ್ಲೂ ಹಾಗೇನಾ ನಮ್ಮೂರಲ್ಲಿ ಹೀಗೆ ಆಯ್ತು ಅನ್ನುವ ವಿನಿಮಯಗಳು ನಡೆದುವು.

ಹಲವಾರು ಭಾಷಣಗಳಾದುವು. ಎಲ್ಲದರಲ್ಲೂ ಹಾಲಿ ದೇಶದಲ್ಲಿ ನಡೆಯುತ್ತಿರುವುದು ಫ್ಯಾಸೀವಾದದ ಮುನ್ಸೂಚನೆಗಳು ಎನ್ನುವ ವಿಷಯದಲ್ಲಿ ಒಪ್ಪಿಗೆಯಿತ್ತು. ಅದರ ನಿಮಿತ್ತ ಫ್ಯಾಸೀವಾದದ ಹಲವು ರೂಪದ ವಿವರಣೆಗಳು ಲಭ್ಯವಾದುವು. ಐತಿಹಾಸಿಕ ಘಟನೆಗಳೂ ನೆನಪಿಗೆ ಬಂದುವು. ತಮ್ಮ ತಮ್ಮ ಕ್ಷೇತ್ರದಲ್ಲಿ ನಮ್ಮದೇ ರೀತಿಯಲ್ಲಿ ಇದನ್ನು ಎದುರಿಸಲು ಹಿಮ್ಮೆಟ್ಟಿಸಲು ನಾವು ನಾವೇ ಪ್ರಯತ್ನಿಸಬೇಕು ಎನ್ನುವುದು ಒಂದು ಒಪ್ಪಿತ ವಿಷಯ.

ದಕ್ಷಿಣಾಯನ ಪದವನ್ನು ದೇವಿಯವರು ಪ್ರಯೋಗಿಸಿದುದರ ಹಿನ್ನೆಲೆ ಏನು ಎನ್ನುವ ಚರ್ಚೆಯಲ್ಲಿ ತಿಳಿದುಬಂದದ್ದು ಸೂರ್ಯ ದಕ್ಷಿಣ ದಿಕ್ಕಿಗೆ ಚಲಿಸಲು ಪ್ರಾರಂಭಿಸಿದ ಕಾಲದಿಂದ ನಾವು ವಾಸಿಸುತ್ತಿರುವ ತಾಣ ಕತ್ತಲೆಡೆಗೆ ಸಾಗುವಂತೆ

# ಕವಿಯುತ್ತಿರುವ ಫ್ಯಾಸೀವಾದ ಸೃಜನಶೀಲರ ಆತಂಕ



ಅನಿಸಿದರೂ, ಅದರ ಕೊನೆ ಉತ್ತರಾಯಣದ ಬೆಳಕಿನಲ್ಲೇ ಎನ್ನುವ ಖಾತ್ರಿ ಇರುವಂತೆ, ಪ್ರಕಟಗೊಳ್ಳುತ್ತಿರುವ ಫ್ಯಾಸೀವಾದದ ಮುಂದಿನ ಬೆಳವಣಿಗೆಗಳು ಎಂಥವೇ ಇರಲಿ, ಇದಕ್ಕೂ ಒಂದು ಕೊನೆ ಇದ್ದೇ ಇದೆ. ಇಂದಿನದು ಶಾಶ್ವತವಲ್ಲ ಎನ್ನುವ ಆಶಾವಾದವಿದೆ ಎನ್ನುವ ಧೈರ್ಯವನ್ನು ದೇವಿಯವರು ತುಂಬ ತೆಗೆಸಿದರು. ಇನ್ನು ಚರ್ಚೆಯಲ್ಲಿ ಹೊರಬಂದಂತೆ ಫ್ಯಾಸೀವಾದವನ್ನು, ಅದರ ಪರಿಣಾಮವನ್ನು ಸಾಹಿತ್ಯ ಇನ್ನಿತರ ಸೃಜನಶೀಲ ಬೌದ್ಧಿಕ ಕ್ಷೇತ್ರಕ್ಕೆ ಬಂದ ಆಘಾತವೆಂದೂ, ಅದರ ಪರಿಣಾಮ ಈ ಎಲ್ಲ ಕ್ಷೇತ್ರಗಳ ಜೀವಾಳವೇ ಆದ ಅಭಿವ್ಯಕ್ತಿ ಸ್ವಾತಂತ್ರ್ಯದ ಅಪಹರಣ ಎಂದೂ ಪ್ರತಿಪಾದಿಸಲಾಯಿತು. ಒಂದು ಸಣ್ಣ ಪ್ರಶ್ನೆ ಎಂದರೆ ಸೃಜನಶೀಲ ಕ್ಷೇತ್ರದಲ್ಲಿ ಸ್ವತಂತ್ರವಾಗಿ ಕೆಲಸ ಮಾಡುವ ಎಲ್ಲರಿಗೂ ಫ್ಯಾಸೀವಾದದ ಈ ಸ್ವರೂಪ ಅನುಭವಗಮ್ಯವಾಗಿ ಪರಿಚಿತವೇ. ಉತ್ತಮ ಬರಹಗಾರರು, ಕಲಾವಿದರೆಲ್ಲ ತಮ್ಮ ಅಭಿವ್ಯಕ್ತಿಯಿಂದಾಗಿ ಯಾರಿಗೆ ಆತಂಕ ಆಗಬಹುದು, ಅವರು ಅದಕ್ಕೆ ಹೇಗೆ ಪ್ರತಿಕ್ರಿಯಿಸಿಯಾರು, ಎನ್ನುವ ತಿಳಿವು ಇದ್ದು, ಅದನ್ನು ಎದುರಿಸಲು ಮಾನಸಿಕವಾಗಿ ಪೂರ್ವಸಿದ್ಧತೆ ನಡೆಸಿಯೇ ಇರುತ್ತಾರೆ. ಕಲಬುರಗಿ, ಪಾನಸರೆ, ದಾಭೋಲಕರ್ ಅವರಿಗೆ ತಮ್ಮ ವಿರೋಧದ, ಅದು ಯಾವ ಮಟ್ಟಕ್ಕೆ ಹೋಗಬಹುದೆಂಬ ತಿಳಿವು ಇತ್ತು. ಆದರೂ ಇದು ತಮ್ಮ ಕರ್ತವ್ಯ ಎಂದು, ಸಮಕಾಲೀನ ಪರಿಸ್ಥಿತಿಯಲ್ಲಿ ತಾವು ನಿರ್ವಹಿಸಬೇಕಾದ ಹೊಣೆಗಾರಿಕೆ ಎನ್ನುವ ಪ್ರಜ್ಞೆ ಇದ್ದು, ಅದರಂತೆ ನಡೆದುಕೊಂಡ ಧೀರರು; ಸಾವಿಗಂಜದ ಸಮಾಜ ಜೀವಿಗಳು. ಅವರ ಜೀವಂತ ಉದಾಹರಣೆಗಳು ನಮ್ಮ ಸೃಜನಶೀಲರಿಗೂ ಸತತ ಲಭ್ಯವಿದೆ. ಆದರೆ ಇಂದು ನಮ್ಮ ಮುಂದೆ ಒದಗಿಬಂದಿರುವ ಪರಿಸ್ಥಿತಿಯ ರೂಪರೇಷೆಗಳೇನು, ಅವುಗಳು ಒಡ್ಡುವ ಸವಾಲುಗಳೇನು, ಅವನ್ನ ಹೇಗೆ ಪ್ರತಿರೋಧಿಸಬೇಕು, ವೈಯಕ್ತಿಕ ನೆಲೆಯಿಂದ ಎಷ್ಟು, ಸಾಮೂಹಿಕವಾಗಿ ಎಷ್ಟು ಎನ್ನುವುದು ಮುಖ್ಯ ವಿಷಯ. ನಡೆದ ವಿಶ್ಲೇಷಣೆಯಲ್ಲಿ ಈ ಕುರಿತು ಯಾವುದೇ ಸ್ಪಷ್ಟ ಸೂಚನೆ, ನಿಲುವು, ದಿಗ್ದರ್ಶನ, ತಿಳಿವಳಿಕೆ ದೊರೆಯಲಿಲ್ಲ; ಎಚ್ಚರ ವಹಿಸಬೇಕು ಅನ್ನುವುದು ಸ್ಪಷ್ಟವಾಗಿತ್ತು. ಫ್ಯಾಸೀಮೃಗ ನನ್ನ ಮನೆಯ ಮುಂದೆ ನನ್ನ ಸಮೂಹದ ಮಧ್ಯೆ ಬಂದು ನಿಂತು ಗುಟುರು ಹಾಕುತ್ತ, ಬೆದರಿಸುವಾಗ ನಾನು, ನಾವು ಏನು ಮಾಡಬೇಕು ? ಅದು ಹಾಗೆ ನಮ್ಮ ಮುಂದೆ ಬರುವುದನ್ನು ಮೊದಲೇ ತಡೆಯಲಾದೀತೆ ಎನ್ನುವ ಪ್ರಶ್ನೆಗಳು ನಮ್ಮ ಮುಂದಿವೆ. ಇದು ಕೇವಲ ಸೃಜನಶೀಲ ಕ್ಷೇತ್ರದವರ ಸಮಾವೇಶ ಆ ಕ್ಷೇತ್ರಕ್ಕೆ ಸೀಮಿತ, ರಾಜಕೀಯದ ಪ್ರಸ್ತಾಪ ಇಲ್ಲಿ ಬೇಡ ಎಂದಿದ್ದು ಇದರ ಕೊರತೆ. ಈಗಾಗಲೇ ಈ ಭಯ ಅರಿಯದ ಎಳೆಯರಿಗೆ ಇದು ಭಯದ ತಿಳುವಳಿಕೆ ನೀಡಿತು, ಆದರೆ ಪರಿಹಾರ ಮಾರ್ಗ ಸೂಚಿಸಲಿಲ್ಲ. ಅದು ತಮ್ಮ ಉದ್ದೇಶವೂ ಅಲ್ಲ ಎಂದಿದ್ದರು ಸಂಘಟಕರು. ಇದು ಈ ಸಮಾವೇಶದ ಮಿತಿ. ಜೀವನದ ಅಡಿಪಾಯ ಕಲೆ ಕಾವ್ಯ ಅಲ್ಲ. ಅದು ಒಂದು ನಿರ್ದಿಷ್ಟ ಸಮಾಜದ ರಚನೆಯೊಳಗಿನ ಇರುವ ಸುಖ, ಸಮಾಧಾನ, ಆತಂಕ, ಹಿಂಸೆಗಳ ಮಧ್ಯದಲ್ಲಿ, ಅವುಗಳ ಸ್ವರೂಪವನ್ನು ಬೆದಕುವ ಸಾಂಸ್ಕೃತಿಕ ಜೀವನದ ಅಂತರಂಗ. ಹಾಗಾಗಿ ಅದೇ ಸಮಾಜದ ಸಾಮಾಜಿಕ ರಾಜಕೀಯಗಳ ಪ್ರಭಾವಗಳಿಂದ ಅದನ್ನು ಹೊರಹಾಕಲು ಆಗುವುದಿಲ್ಲ. ಅವನ್ನು ಪ್ರಭಾವಿಸಿ, ರಚನಾತ್ಮಕತೆಗೆ, ದೂಡುವ ಸೈದ್ಧಾಂತಿಕ ಹೋರಾಟಗಳಲ್ಲಿ ಸೃಜನಶೀಲವಾಗಿ ಭಾಗವಹಿಸಲೇ ಬೇಕಾಗುತ್ತದೆ. ಕಲೆಗಾಗಿ ಕಲೆ ಪೊಳ್ಳು ಮಾತು ಅನ್ನುವುದು ಕಲೆಗಾರನಿಗೇ ತಿಳಿದಿರುತ್ತದೆ. ಚಿಂತನೆಯನ್ನು ಚಿಂತಕರನ್ನು ಹತ್ತಿಕ್ಕುವುದು, ಹತ್ಯೆಗೈಯುವುದು, ಮತಧರ್ಮಗಳ ತಿಕ್ಕಾಟವನ್ನು ಹೆಚ್ಚಿಸಿ, ತಾರಕಕ್ಕೆ ಒಯ್ಯುವುದು, ಹುಸಿ ದೇಶಭಕ್ತಿಯ ಪ್ರಚಾರ, ಬಡತನದಿಂದ ಕಂಗಾಲಾಗಿರುವ ಯುವಕರನ್ನು ಇವುಗಳ ಆವೇಶಕ್ಕೆ ಹಚ್ಚಿ ಹಿಂಸೆಗೆ ಹಚ್ಚುವುದು ನಮ್ಮ ಪರಿಸ್ಥಿತಿಯಲ್ಲಿ ಈ ಎಲ್ಲವೂ ಕಾಣುತ್ತಿವೆ.

ಇದೇ ಸಮಯ ಜನಮನದಲ್ಲಿ ಅಡಗಿರುವ ಹಳೆಯ ನೋವುಗಳು, ಅತೃಪ್ತಿ, ಕೋಪ ಇವುಗಳನ್ನು ಪ್ರಚೋದಿಸಿ ಹೊರಗೆ ಎಳೆದು ಪ್ರಕ್ಷುಬ್ಧ ಸ್ಥಿತಿ ಉಂಟುಮಾಡುವುದು. ಉದಾಹರಣೆಗೆ ದೇಶವಿಭಜನೆಗೆ ಮುಸ್ಲಿಮರು ಕಾರಣ ಎನ್ನುವ ಹಳೆಯ ಅನುಮಾನ ಜನಮನದಲ್ಲಿ ಅಡಗಿದೆ. ಆ ಅತೃಪ್ತಿಗಳನ್ನೇ ಅನುಮಾನವನ್ನೇ ಹೊಸದಾಗಿ ವರ್ಣಿಸುತ್ತ, ಪ್ರಚೋದಿಸುತ್ತ, ಅದನ್ನೇ ರಾಷ್ಟ್ರಭಕ್ತಿಗೆ ತೇಪೆಹಾಕಿ, ಪ್ರಗತಿಶೀಲರನ್ನು ದೇಶದ್ರೋಹಿಗಳೆನ್ನುವುದು, ಅವರು ನಾಸ್ತಿಕರೆನ್ನುವುದು, ಅಲ್ಲಲ್ಲೇ ಕೊಲೆ ಮಾಡುವುದು ಇವೆಲ್ಲ ನಡೆಯುತ್ತವೆ. ಗೋರಕ್ಷಣೆ ಗೋಮಾಂಸದ ವಿಷಯವನ್ನು ಕೋಮುದ್ವೇಷಕ್ಕೆ ಪ್ರಯೋಗಿಸುವುದು ಮುಂತಾಗಿ. ಗೋಹತ್ಯೆ ವಿಷಯವೇ ಗಮನಿಸಿ. ಗೋಮಾಂಸದ ರಫ್ತುದಾರರು ಹಿಂದೂ ಮತ್ತು ಜೈನಮತಕ್ಕೆ

**ಅಭಿನಂದನೆ...**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ಕೊಡಮಾಡುವ 'ಅಕ್ಕಮಹಾದೇವಿ ಪ್ರಶಸ್ತಿ'ಯು ಹಂಪಿ ಕನ್ನಡ ವಿಶ್ವವಿದ್ಯಾಲಯದ ಕುಲಪತಿಯಾದ ಡಾ॥ ಮಲ್ಲಿಕಾ ಘಂಟಿ ಅವರಿಗೆ ಲಭಿಸಿದ್ದಕ್ಕಾಗಿ 'ಹೊಸತು' ಹಾಗೂ 'ನವಕರ್ನಾಟಕ' ಬಳಗ ಅಭಿನಂದನೆ ಸಲ್ಲಿಸುತ್ತದೆ.

ಸೇರಿದ ಉದ್ಯಮಿಗಳು ಅದನ್ನು ಉತ್ಪಾದಿಸುವವರು ಮುಸ್ಲಿಮರು. ಇದು ಸಾಂಪ್ರದಾಯಿಕವಾಗಿ ನಡೆದುಬಂದಿರುವುದು. ಈ ವಸ್ತುಸ್ಥಿತಿಯನ್ನು ಮುಚ್ಚಿ, ಗೋವನ್ನು ಕೊಲ್ಲುತ್ತಾರೆಂದು ಮುಸ್ಲಿಮರನ್ನು ದ್ವೇಷಿಸುವಂತೆ ಪ್ರಚೋದಿಸುವಾಗ ಅಲ್ಲಿ ಬಹುಸಂಖ್ಯಾತ ಹಿಂದೂಗಳ ಮತವನ್ನು ಚುನಾವಣೆಯಲ್ಲಿ ಗೆದ್ದುಕೊಳ್ಳುವ ಸಂಚು ಅಡಗಿದೆ. ಹಾಗೇ ಇಡೀ ಉದ್ಯಮವನ್ನು ಹಿಂದೂಗಳೇ ನಿಯಂತ್ರಿಸಬೇಕು ಅನ್ನುವ ಹುನ್ನಾರವಿದೆ. ಆದರೂ ಅದನ್ನು ಹಿಂದೂ ರಕ್ಷಣೆಯ ವಿಷಯವೆನ್ನುವಂತೆ ಪ್ರಚಾರ ಮಾಡುವುದು. ಇಂತಹ ಭ್ರಷ್ಟ ಕೆಲಸಗಳಿಗೆ ಪ್ರಚಾರ ನೀಡಲು ನೆರವಾಗುವಂತೆ ನಾಡಿನ ಎಲ್ಲ ಮಾಧ್ಯಮಗಳನ್ನು ತಮ್ಮದೇ ವಶಕ್ಕೆ ತೆಗೆದುಕೊಳ್ಳುವುದು ನಡೆದಿದೆ. ವೃತ್ತಪತ್ರಿಕೆಗಳ ಬಹುಭಾಗ, ದೃಶ್ಯಮಾಧ್ಯಮದ ಬಹುಭಾಗ ಕೆಲವೇ ಉದ್ಯಮಪತಿಗಳ ಸ್ವತ್ತಾಗಿದೆ. ಈ ಉದ್ಯಮಪತಿಗಳು ತಮ್ಮದೇ ಆತ್ಮರಕ್ಷಣೆಗೆ, ತಮ್ಮ ಅನೀತಿಯ ಅಪಾರ ಸಂಪತ್ತಿನ ರಕ್ಷಣೆಗೆ ಅಗತ್ಯವಿದ್ದಂತೆ ಹಿಂಸೆ, ಕೋಮುವಾದ, ದ್ವೇಷದ ರಾಜಕೀಯವನ್ನು ಬೆಳೆಸುತ್ತಾರೆ. ಪೋಷಿಸುತ್ತಾರೆ. ಸಂಗ್ರಹವಾಗಿ ಹೇಳುವುದಾದರೆ ಏಕಸ್ವಾಮ್ಯ ಬಂಡವಾಳ ತನ್ನದೇ ನ್ಯಾಯಯುತ ವಲ್ಲದ ಸಂಪತ್ತಿನ ರಕ್ಷಣೆಗಾಗಿ, ಸಮಾಜದ, ಜನಸಾಮಾನ್ಯರ ಮೇಲೆ ಪ್ರಯೋಗಿಸಲು ಮುಂದಾಗುವ ಹಿಂಸೆಯೇ ಫ್ಯಾಸೀವಾದ. ಇಂದು ಜಗತ್ತಿನ ಮುಂದುವರಿದ ಬಂಡವಳಿಗ ರಾಷ್ಟ್ರಗಳಲ್ಲೆಲ್ಲ ಇಂಥದೇ ರಾಜಕೀಯ ಶಕ್ತಿಗಳು ಅಧಿಕಾರಕ್ಕೆ ಬಂದಿವೆ. ಇದರ ಬೆನ್ನಿಗೇ ಈ ರಾಷ್ಟ್ರಗಳು ಹಲವು ರೀತಿಯ ಮಹಾಯುದ್ಧ ಸ್ವರೂಪದ ಜಾಗತಿಕ ಸಮಸ್ಯೆಗಳನ್ನು ಸೃಷ್ಟಿಸಿವೆ. ಜಗತ್ತಿನ ಬಹುಮುಖ್ಯ ಸಮಸ್ಯೆಗಳಾದ ಪರಿಸರ ನಾಶ, ನಿರುದ್ಯೋಗ, ಸಂಪತ್ತಿನ ಕೇಂದ್ರೀಕರಣ, ವಲಸೆ, ಇವುಗಳಿಗೆ ಪರಿಹಾರವನ್ನು ಸೂಚಿಸಲು ಏಕಸ್ವಾಮ್ಯ ವರ್ಗ ಅಸಮರ್ಥ. ಆದರೆ ಅದನ್ನು ಅದು ಒಪ್ಪದೇ ತನ್ನದೇ ಆಧಿಪತ್ಯ ಉಳಿಸಿಕೊಳ್ಳಲು ಫ್ಯಾಸೀವಾದದ ಪ್ರಯೋಗಕ್ಕೆ ಮುಂದಾಗಿದೆ. ಯುದ್ಧದ ಭೀತಿಯನ್ನು ಹೊತ್ತಿಸಿದೆ.

'ದಕ್ಷಿಣಾಯನ' ಸಮಾವೇಶದಲ್ಲಿ ನೆರೆದಿದ್ದ ಬುದ್ಧಿಜೀವಿಗಳು, ಸೃಜನಶೀಲರು, ತಮ್ಮ ಆತಂಕಗಳನ್ನು ವ್ಯಕ್ತಪಡಿಸಿದರು. ಅದು ಸರಿ. ಅದು ವಾಸ್ತವ. ಅದು ಒಳ್ಳೆಯ ನಡೆ. ಆದರೆ ಅವರ್‍ಯಾರೂ ಪರಿಹಾರ ಮಾರ್ಗದ ಬಗ್ಗೆ ಏನೂ ಹೇಳಲಿಲ್ಲ. ಬುದ್ಧಿಜೀವಿಗಳಿಗೆ ಈ ಕುರಿತು ಹಲವು ಅನಿಸಿಕೆಗಳು ಇಲ್ಲವೇ ? ಆದರೆ ಅವರಲ್ಲಿ ಸ್ವಲ್ಪ ಅಳುಕು ಇದ್ದಂತೆ ತೋರುತ್ತದೆ. ಕಾರಣ ಏನೇ ಹೇಳಿದರೂ ಅದು ಅನಿವಾರ್ಯವಾಗಿ ರಾಜಕೀಯ ಚರ್ಚೆಯಾಗುತ್ತದೆ. ರಾಜಕೀಯ ಕುರಿತಂತೆ ಮಡಿವಂತಿಕೆ ಇದ್ದರೆ ಆಗುವುದು ಹೀಗೆಯೇ. ಚಂಪಾರವರು ಕಮ್ಯುನಿಸ್ಟರದ್ದು ಇಂದು ನಗಣ್ಯ ಪಾತ್ರ – ಅವರು ಮಾರ್ಜಿನ್‌ನಲ್ಲಿ ಇರುವವರು ಅಂದರು. ಅವರೂ ಸೇರಿ ಹಲವಾರು ಗಣ್ಯ ಬರಹಗಾರರು, ಚಿಂತಕರು ಅಂದು ಇಂದಿರಾ ವಿರುದ್ಧದ ನ್ಯಾಯಯುತವೇ ಆದ ರಾಜಕೀಯ ಹೋರಾಟದಲ್ಲಿ ತಿಳಿದೋ ತಿಳಿಯದೆಯೋ ಕೈಜೋಡಿಸಿ, ಅವರೊಡನೆಯೇ ಜೈಲಿನಲ್ಲಿದ್ದವರಿಗೆ ಅವರೊಡನೆ ಅವಕಾಶವಾದಿಯಾಗಿ ಒಳ ನುಸುಳಿದ್ದ ಜನಸಂಘದ ಫ್ಯಾಸೀ ಉದ್ದೇಶಗಳು ತಿಳಿಯಲೇ ಇಲ್ಲ. ಇಂದು ಇದೇ ಚಂಪಾ ಅವರು ಭಾಜಪದ ವಿರುದ್ಧ ಫ್ಯಾಸೀ ಆಪಾದನೆ ಮಾಡುವಾಗ, ಅಂದಿನ ತಮ್ಮ, ತಮ್ಮ ಗೆಳೆಯರ ನಡೆ ತಪ್ಪಾಗಿತ್ತು, ಅವರಿಂದಲೇ ಆ ಫ್ಯಾಸೀ, ಅಂದು ಪ್ರಚ್ಛನ್ನವಾಗಿ ನುಸುಳಿ, ಆಳುವ ಯಂತ್ರದ ಪ್ರಮುಖ ಭಾಗಗಳಲ್ಲಿ ನೆಲೆಸಿ, ಬೆಳೆದು, ಇಂದು ದೇಶವನ್ನು ಸವಾಲಿಲ್ಲದೆ ಆಳುವ ಮಟ್ಟಕ್ಕೆ ಬೆಳೆದಿದೆ ಎಂದೂ ಮನಗಾಣಬೇಕು. ಈ ತಿಳಿವಳಿಕೆ ಉಂಟಾದರೆ ಪ್ರಗತಿಶೀಲರ ಪಾತ್ರ ಅರ್ಥವಾದೀತು. ಬರುವ ದಿನಗಳಲ್ಲಿ ದಿನೇ ದಿನೇ ಹೆಚ್ಚು ಹೆಚ್ಚು ಹಿಂಸಕವಾಗಿ, ಪ್ರಾಣಕಂಟಕವಾಗಿ ವ್ಯಕ್ತವಾಗುತ್ತಿರುವ, ಅಲ್ಲಿದ್ದವರೆಲ್ಲ ಒಪ್ಪಿಕೊಂಡ, ಭಾಜಪದ ಫ್ಯಾಸೀ ಆಳ್ವಿಕೆಯ ವಿರುದ್ಧ ಉಳಿದುದೆಲ್ಲ, ಪರಸ್ಪರ ಮಡಿವಂತಿಕೆಯನ್ನು ಬಿಟ್ಟು ಒಗ್ಗಟ್ಟಾಗಿ ಹೋರಾಟಕ್ಕೆ ಇಳಿಯದೇ ಅನ್ಯಥಾಮಾರ್ಗವಿಲ್ಲ. ಎಡಪಕ್ಷಗಳು

ಈಗ ಅಸಂಘಟಿತ ಕಾರ್ಮಿಕರನ್ನು ಸಂಘಟಿಸಲು ಸಶಕ್ತವಾಗಿದೆ. ರೈತರು, ಕಾರ್ಮಿಕರು, ಅಸಂಘಟಿತ ಕಾರ್ಮಿಕರು, ಭೂಹೀನರು ಇವರೆಲ್ಲರನ್ನು ಒಳಗೊಂಡ ಪ್ರತಿರೋಧವನ್ನು ನಿರ್ಮಿಸಲು ನಾವು ಮುಂದಾದಂತೆ, ಆಳುತ್ತಿರುವ ಫ್ಯಾಸೀ ಶಕ್ತಿಯ ದಬ್ಬಾಳಿಕೆಯೂ ಹೆಚ್ಚುತ್ತಾ ಹೋಗುತ್ತದೆ. ಇನ್ನು ಅದೆಷ್ಟು ಕಲಬುರ್ಗಿಯವರ ಹತ್ಯೆಯಾಗುತ್ತದೋ ಹೇಳಲಾಗದು. ದಕ್ಷಿಣಾಯನದ ಸಮಾವೇಶದಲ್ಲಿ ಗಮನಿಸಿದ ಒಂದು ಗೊಂದಲ ಆರ್.ಎಸ್.ಎಸ್. ಬಿಟ್ಟು, ಭಾಜಪದ ಮೇಲೆ ಟೀಕೆ ಪ್ರಹಾರ ಮಾಡಿದ್ದು, ಇದು ಸರಿಯಾದ ತಿಳಿವಳಿಕೆಯಲ್ಲ. ಮೋಹನ್ ಭಾಗವತರು ಮೊನ್ನೆ ಮಾತನಾಡುತ್ತಾ ಹೇಳಿದ್ದೇನು ? ನಮ್ಮ ಸ್ವಯಂಸೇವಕರು ಆಳುತ್ತಿರುವ ರಾಜ್ಯಗಳಲ್ಲಿ ಗೋಹತ್ಯೆ ನಿಷೇಧ ಕಾನೂನು ಆಗಿದೆ ಅಂತ. ಅದರ ಅಧೀನ ಭಾಜಪ ತಾನು ಸೃಷ್ಟಿಸಿದ ಪಕ್ಷ ಅಂತ ಅಲ್ಲವೇ ? ಈ ಹಿಂದೆ ಜನಸಂಘವಿದ್ದಂತೆ ಮುಂದೊಮ್ಮೆ ಇನ್ನೊಂದು ಹೆಸರಿನ ಪಕ್ಷ ಬರುತ್ತದೆ. ಆದರೆ ಆರ್.ಎಸ್.ಎಸ್. ಅವುಗಳ ಮಾತೃಸಂಸ್ಥೆ. ಅದೇ ಸರಸಂಘ ಚಾಲಕ ಎನ್ನುವ ಸರ್ವಾಧಿಕಾರಿ.

ಫ್ಯಾಸಿ ಶಕ್ತಿಯ ಹಲವು ತಂತ್ರಗಳಲ್ಲಿ ಬಹುಮುಖ್ಯವಾದ ಒಂದು ವಿಷಯ, ಯಾವುದು ಜನಮನದಲ್ಲಿ ಆದರ್ಶಮಯವಾಗಿ ನೆಲೆಯೂರಿದೆಯೋ, ಅದನ್ನು ತಾನು ಈ ಹಿಂದೆ ವಿರೋಧಿಸಿದ್ದು ಎಲ್ಲರಿಗೂ ತಿಳಿದಿದ್ದರೂ, ತಾವೇ ಅವುಗಳ ಬೆಂಬಲಿಗರು, ಕಾರ್ಯಕರ್ತರು ಎನ್ನುವಂತೆ ಆ ಆದರ್ಶವನ್ನು ಆಕ್ರಮಿಸಿಕೊಳ್ಳುವುದು ತಮ್ಮದಾಗಿಸಿಕೊಳ್ಳುವುದು. ಅದಕ್ಕಾಗಿ ಸುಳ್ಳು ಹೇಳುವುದು, ಆರ್.ಎಸ್.ಎಸ್. ಎಂದೂ ಸ್ವಾತಂತ್ರ್ಯ ಸಂಗ್ರಾಮದ ಭಾಗವಾಗಲಿಲ್ಲ. ಇಂದು ಪ್ರಧಾನಿ ಕೆಲವೇ ಜನ ತಾವೇ ಸ್ವಾತಂತ್ರ್ಯ ಸೇನಾನಿಗಳೆಂದುಕೊಳ್ಳುತ್ತಾರೆ ಅಂತ ಕುತ್ಸಿತವಾಗಿ ಹೇಳಿದರು. ಭಗತ್ ಸಿಂಗ್‌ನ ಬಗ್ಗೆ ಆ ಕಾಲದಲ್ಲಿ ಒಂದು ಬೆಂಬಲವನ್ನೂ ನೀಡದ ಆರ್.ಎಸ್.ಎಸ್. ಇಂದು ಆತನನ್ನು ತನ್ನದು ಎನ್ನುತ್ತಾರೆ. ಗಾಂಧಿಯವರನ್ನು ರಾಷ್ಟ್ರಪಿತನೆಂದು ಒಪ್ಪದ, ಅವರೇ ವಿಭಜನೆಗೆ ಕಾರಣರು, ಅವರು ಮುಸ್ಲಿಂಪರ ಎಂದೆಲ್ಲ ಅಪಪ್ರಚಾರ ಮಾಡಿದ ಆರ್.ಎಸ್.ಎಸ್. ಇಂದು ಗಾಂಧೀಜಿ ತಮ್ಮದೇ ಆದರ್ಶವೆಂದು ಪ್ರಚಾರ ಮಾಡುತ್ತಿದ್ದಾರೆ. ಪುಣೆಯಲ್ಲಿ ಗಾಂಧಿ ಹತ್ಯೆಯಾದ ಇವರು ಸಕ್ಕರೆ ಹಂಚಿದ್ದು ವರದಿಯಾಗಿದೆ. ಗಾಂಧಿಯನ್ನು, ಪಟೇಲರನ್ನು ಬೇರ್ಪಡಿಸಿ, ನೆಹರೂರವರನ್ನು ಬಯ್ಯುತ್ತಾರೆ. ಬುದ್ಧ ಬಸವ ಅಂಬೇಡ್ಕರ್ ಹೀಗೆ ಅವರದೇ ಸಿದ್ಧಾಂತಗಳಿಗೆ ವಿರುದ್ಧವಾದವರನ್ನೆಲ್ಲ, ಅವರು ಜನಮನದ ಸ್ಫೂರ್ತಿಯ ಸೆಲೆ ಎನ್ನುವ ಕಾರಣಕ್ಕೆ ಅವರೆಲ್ಲರೂ ಪ್ರತ್ಯೇಕವಾಗಿ ತಮ್ಮವರೇ ಎಂದು ಬಿಂಬಿಸಲು ಕತೆ ಕಟ್ಟುತ್ತಾರೆ. ಇವೆಲ್ಲ ಫ್ಯಾಸೀ ಶಕ್ತಿಗಳು ಆಚರಿಸುವ ಕೃತ್ರಿಮಗಳು. ಹಿಟ್ಲರನ ತಂತ್ರಗಳು ತನ್ನದೇ ದೇಶದ ಸತ್ಪ್ರಜೆಗಳಾಗಿದ್ದ ೧೩೦ ಲಕ್ಷ ಜ್ಯೂಗಳನ್ನು ಜರ್ಮನರ ಶತ್ರುವೆಂದು, ಪರಕೀಯರೆಂದು ವರ್ಣಿಸಿ, ೭೦ ಲಕ್ಷಕ್ಕೂ ಹೆಚ್ಚು ಜನ ಜ್ಯೂಗಳನ್ನು ಭಯಾನಕವಾಗಿ ಕೊಂದ ಹಿಟ್ಲರನ ಜನಾಂಗ ದ್ವೇಷ ಜಗತ್ತಿನಲ್ಲಿ ಪುನಃ ತಲೆಯೆತ್ತಲು ಯತ್ನಿಸುತ್ತಿದೆ. ಅದರಲ್ಲಿ ಭಾರತವೂ ಸೇರಿದೆ.

ಸಾಂಪ್ರದಾಯಿಕವಾಗಿ ದಕ್ಷಿಣಾಯನದ ಕಾಲವನ್ನು ಪುಣ್ಯಕಾಲ ಅನ್ನುತ್ತೇವೆ. ಆ ಆರು ತಿಂಗಳು ಶುಭಕಾರ್ಯಗಳನ್ನು ನಡೆಸುವಂತಿಲ್ಲ ಅನ್ನುತ್ತೆ ಪಂಚಾಂಗ. ಭೀಷ್ಮ ಸಾಯಲೂ ಸಿದ್ಧವಿರಲಿಲ್ಲ ಆ ಕಾಲದಲ್ಲಿ! ಅವನು ಉತ್ತರಾಯಣಕ್ಕಾಗಿ ಕಾಯುತ್ತಿದ್ದನಂತೆ. ಇಂಗ್ಲಿಷ್‌ನ ಮೌರ್ನಿಂಗ್ ಕಾಲ. ಶೋಕದ ಕಾಲ. ಹೋರಾಟಕ್ಕೆ ಪ್ರಚೋದನೆಯಾಗಬೇಕಾದ ಬೆಳವಣಿಗೆಗೆ ಸೂತಕದ ದಕ್ಷಿಣಾಯನ ಹೆಸರು ಬೇಡವೇನೋ ಅನಿಸುತ್ತದೆ. ಆ ಪದದ ವೈದಿಕತೆಯ ಸೊಗಡು ನಮ್ಮ ಇಂದಿನ ಕನ್ನಡದ ಸೊಗಡಿಗೆ ಒಗ್ಗದು.

**ಕೆ. ಎಸ್. ಪಾರ್ಥಸಾರಥಿ**
ಪ್ಲಾಟ್ ನಂ. ೧೧೦೫, 'ಪೂರ್ವ ಏಟ್ರಿಯ ಪ್ಲಾಟೀನ', ಅಶ್ವಥ್‌ನಗರ
ಆರ್.ಎಂ.ವಿ. ಬಡಾವಣೆ, ಬೆಂಗಳೂರು – ೫೬೦ ೦೯೪

# ಸ್ವ ವಿಮರ್ಶೆ

ತನ್ನನ್ನು ತಾನು ಸಮರ್ಥಿಸಿಕೊಳ್ಳುವುದು ಮನುಷ್ಯನ ಸಹಜವಾದ ಸ್ವಭಾವವೋ ಎಂಬಂತೆ ಸ್ವ ಸಮರ್ಥನೆ ನಮ್ಮ ಬದುಕಿನಲ್ಲಿ ಹಾಸುಹೊಕ್ಕಾಗಿದೆ. ಮೇಲ್ನೋಟಕ್ಕೇ ತಪ್ಪು ಎಂದು ಪರಿಗಣಿಸಲ್ಪಡುವ ಅಪರಾಧವನ್ನೇ ಆದರೂ ನೇರಕ್ಕೆ ನೇರವಾಗಿ ಅಪರಾಧವೆಂದು ಒಪ್ಪಿಕೊಳ್ಳುವುದಕ್ಕೆ ಸಿದ್ಧರಾಗುವವರು ಎಷ್ಟು ಮಂದಿ ಇದ್ದಾರೆ ಎಂದು ಕೇಳಿದರೆ ಉತ್ತರಿಸುವುದು ಕಷ್ಟ. ಅನೇಕ ಸಬೂಬುಗಳನ್ನು ಹೇಳಿ ಏನೇ ಆದರೂ ಆ ತಪ್ಪು ತನ್ನದಲ್ಲ, ಅದಕ್ಕೆ ತಾನು ಕಾರಣನಲ್ಲ ಎಂದು ವಿಚಿತ್ರವಾದ ರೀತಿಯಲ್ಲಿ ಸಮರ್ಥನೆಗಳನ್ನೊಡ್ಡುವುದು ನಿಜಕ್ಕೂ ಒಂದು ಸೋಜಿಗವೇ ಸರಿ. ಈ ಸೋಜಿಗದಲ್ಲಿರುವ ಮತ್ತೊಂದು ಸ್ವಾರಸ್ಯವೆಂದರೆ ಯಾರು ಇಂತಹ ಸ್ವ ಸಮರ್ಥನೆಯನ್ನು ಆಕ್ಷೇಪಿಸುತ್ತಾರೋ ಅವರೇ ಸ್ವತಃ ತಮ್ಮ ಸರದಿ ಬಂದಾಗ ಅದಕ್ಕಿಂತಲೂ ವಿಚಿತ್ರವಾದ ರೀತಿಯಲ್ಲಿ ತಮ್ಮನ್ನು ತಾವು ಸಮರ್ಥಿಸಿಕೊಳ್ಳುತ್ತಿರುವುದು.

ಕುಟುಂಬ ಕಲಹಕ್ಕೆ, ಸಂಘ ಕಲಹಕ್ಕೆ, ಸಮಾಜ ಕಲಹಕ್ಕೆ ಈ ಸ್ವ ಸಮರ್ಥನೆಯ ಪಿಡುಗು ನಿಜವಾದ ಕಾರಣ ಎಂದರೆ ತಪ್ಪಾಗಲಾರದು. ಗಂಡ–ಹೆಂಡಿರ, ಅಪ್ಪ–ಮಕ್ಕಳ, ಅಣ್ಣ ತಮ್ಮಂದಿರ ನಡುವೆ, ಪಕ್ಷ–ಪಕ್ಷಗಳ, ವರ್ಗ–ವರ್ಗಗಳ ನಡುವೆ, ಮತ–ಮತಗಳ ನಡುವೆ ಕಾಣಿಸಿಕೊಳ್ಳುವ ವಿರಸ, ಬಿರುಕು, ಬಿಕ್ಕಟ್ಟುಗಳಿಗೆ ಬೀಜಾರೋಪ ಆಗುವುದಾದರೂ ಹೇಗೆ ? ದಯಮಾಡಿ ಒಂದು ನಿಮಿಷ ಗಂಭೀರವಾಗಿ ಚಿಂತಿಸಿ.

ಸಮಾಜದ ಯಾವ ಕ್ಷೇತ್ರವೇ ಆದರೂ ಸರಿ, ಅಲ್ಲಿ ಸರಿ ತಪ್ಪುಗಳ ನಿರ್ಣಯದಲ್ಲಿ ಸ್ವ ಸಮರ್ಥನೆಯೇ ವಿಜೃಂಭಿಸುವುದನ್ನು ನಾವು ನೋಡುತ್ತೇವೆ. ಅಧ್ಯಾಪಕರು, ವಿದ್ಯಾರ್ಥಿಗಳು, ವೈದ್ಯರು, ರೋಗಿಗಳು, ಅಧಿಕಾರಿಗಳು ಮತ್ತು ಸಾಮಾಜಿಕರು ಹೀಗೆ ಯಾವ ಘಟಕವನ್ನು ವಿಶ್ಲೇಷಣೆಗೆ ಒಡ್ಡಿದರೂ ಅದು ಸ್ವ ಸಮರ್ಥನೆಗೆ ಹೊರತಾಗಿಲ್ಲ.

ಧಾರ್ಮಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಂತೂ ಈ ರೋಗ ಅತ್ಯಂತ ಉಲ್ಬಣಗೊಂಡಿದೆ. ಒಂದು ಪಕ್ಷದಿಂದ ಮಂಡಿಸಲ್ಪಟ್ಟ ಮುಂಗಡ ಪತ್ರವನ್ನು ತೆಗಳಿ ಬರುವ ಅಭಿಪ್ರಾಯಗಳು ಆಡಳಿತ ಪಕ್ಷದವರದ್ದೇ ಎಂದು ನಾವು ಹೆಸರು ನೋಡದೆಯೆ ತಪ್ಪಿಲ್ಲದೆ ಊಹಿಸಬಹುದಾಗಿದೆ ಎಂದಾದರೆ ಈ ಮಂಡನೆ–ಖಂಡನೆಗಳ ಔಚಿತ್ಯವಾದರೂ ಏನು ?

ರಸವೇ ಜನನ, ವಿರಸವೇ ಮರಣ, ಸಮರಸವೇ ಜೀವನ ಎಂದು ಸಾರುವ ಸಂದೇಶದ ಸಾರವೇ ಆತ್ಮವಿಮರ್ಶೆಯ ಅಡಿಗಲ್ಲು. ಒಂದು ಬೆರಳು ಎದುರಿನವನಿಗೆ ಬೊಟ್ಟು ಮಾಡಿದರೆ ಮೂರು ಬೆರಳುಗಳು ನಮ್ಮತ್ತಲೇ ಬೊಟ್ಟು ಮಾಡುತ್ತವೆ ಎನ್ನುವ ಅನುಭವದ ನೀತಿ ಅದರ ಕೋಡುಗಲ್ಲು.

ಇಲ್ಲಿ ನನ್ನ ಗಮನಕ್ಕೆ ಬಂದ ಒಂದು ಸಣ್ಣ ನಿದರ್ಶನವನ್ನು ಉದಾಹರಿಸಬಯಸುತ್ತೇನೆ. ನನ್ನ ಒಳ್ಳೆಯ ಸ್ನೇಹಿತರೊಬ್ಬರು ರಾಜಕೀಯ ಧುರೀಣರು–ವೈದ್ಯರೂ ಹೌದು. ಪಕ್ಷದ ಕಾರ್ಯಕರ್ತರನ್ನುದ್ದೇಶಿಸಿ ಅವರು ಮಾತಾಡುತ್ತಿದ್ದಾಗ ಕಾರ್ಯಕರ್ತರೊಬ್ಬರು ಅವರ ಮೇಲೆ ರೇಗಿಬಿದ್ದರು. ಇದರಿಂದ ಕುಪಿತರಾದ ಕೆಲವರು ತರಾಟೆಗೆ ತೆಗೆದುಕೊಳ್ಳಲು ಮುಂದಾದರು. ಆಗ ನನ್ನ ಮಿತ್ರರು ಅವರನ್ನು ತಡೆದು ಅವರು ರೇಗಿದ್ದರಲ್ಲಿ ನನ್ನದೂ ತಪ್ಪಿದೆ ಎಂದು ಹೇಳಿದಾಗ ಎಲ್ಲರೂ ಸ್ತಬ್ಧರಾದರು. ಪರಿಸ್ಥಿತಿ ತಾನಾಗಿಯೇ ತಿಳಿಯಾಯಿತು.

ಸ್ವ ವಿಮರ್ಶೆಯ ಈ ತತ್ವವನ್ನು ಪೂರ್ಣವಾಗಿ ಅಲ್ಲವಾದರೂ ಯಥಾಶಕ್ತಿ ನಮ್ಮ ಜೀವನದಲ್ಲಿ ಅಳವಡಿಸುವುದು ಸಾಧ್ಯವಾದರೆ ವೈಯಕ್ತಿಕವಾಗಿ, ಕೌಟುಂಬಿಕವಾಗಿ, ಸಾಮಾಜಿಕವಾಗಿ, ಪವಾಡ ಸದೃಶ ಪರಿವರ್ತನೆಗಳು ಸಂಭವಿಸಬಹುದು. ಇದಕ್ಕೆ ಆತ್ಮಸಾಕ್ಷಿ, ಆತ್ಮವಿಶ್ವಾಸ, ಧೈರ್ಯ–ಸ್ಥೈರ್ಯಗಳಿಂದ ಒಡಗೂಡಿದ ಇಚ್ಛಾಶಕ್ತಿ ಮಾತ್ರವೇ ನಮಗೆ ಬೇಕಾಗಿರುವುದು.

**ಡಾ॥ ರಮಾನಂದ ಬನಾರಿ ಮಂಜೇಶ್ವರ**
ಗಣರಾಜ ಚಿಕಿತ್ಸಾಲಯ, ಮಂಜೇಶ್ವರ – ೬೭೧ ೩೨೩

# ಸಿರಿಯಾದ ಮೇಲೆ ಅಮೆರಿಕದ ದಾಳಿ ಖಂಡನೀಯ


ಅಸ್ಸಾದ್




ಸಿರಿಯಾದ ಅಧ್ಯಕ್ಷ ಅಸ್ಸಾದ್‌ಅನ್ನು ಪದಚ್ಯುತಗೊಳಿಸುವ ಉದ್ದೇಶದಿಂದ ಅಮೆರಿಕ ಮತ್ತೆ ಮಿಸೈಲ್ ದಾಳಿ ಪ್ರಾರಂಭಿಸಿದೆ. ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಕೆಲವೇ ದಿನಗಳ ಹಿಂದೆ ಸಿರಿಯಾದಲ್ಲಿ ಆಡಳಿತ ಬದಲಿಸುವುದು ತಮ್ಮ ಉದ್ದೇಶವಲ್ಲ ಎಂದು ಹೇಳಿದ್ದುದನ್ನು ತಿರುಗುಮುರುಗು ಮಾಡಿದ್ದಾರೆ. ಇದಕ್ಕೆ ಅವರು ನೀಡಿರುವ ನೆಪ ಮಾತ್ರ ನಿರಾಧಾರವಾದ್ದು. ಕೆಲದಿನಗಳ ಹಿಂದೆ ಸಿರಿಯಾದ ಬಂಡುಕೋರರ ವಶದಲ್ಲಿರುವ ಖಾನ್ ಷೇಕುನ್ ನಗರದಲ್ಲಿ ನಡೆದ ರಾಸಾಯನಿಕ ಅಸ್ತ್ರದ ದಾಳಿಯಲ್ಲಿ ಸಣ್ಣ ಮಕ್ಕಳೂ ಸೇರಿದಂತೆ ೫೮ ಮಂದಿ ನಾಗರಿಕರು ಅಸುನೀಗಿದ್ದರು. ರಾಸಾಯನಿಕ ಅಸ್ತ್ರ ಉಪಯೋಗಿಸಿದ್ದು ಯಾರೇ ಆಗಿರಲಿ ಅದು ಖಂಡನೀಯ. ಆದರೆ ಅದೇ ಸಮಯದಲ್ಲಿ ಯಾವ ಪುರಾವೆ ಇಲ್ಲದೆ ಸಿರಿಯಾದ ಆಡಳಿತವನ್ನು ಆರೋಪಿ ಸ್ಥಾನದಲ್ಲಿರಿಸಿ ಅಮೆರಿಕ ದಾಳಿ ನಡೆಸಿರುವುದೂ, ಅಧ್ಯಕ್ಷ ಅಸ್ಸಾದ್‌ನನ್ನು ಪದಚ್ಯುತಗೊಳಿಸುವ ಉದ್ದೇಶ ಹೊಂದಿರುವುದೂ ಕೂಡ ಖಂಡನೀಯವೆ. ಸಿರಿಯಾದ ಆಡಳಿತ ಅಮೆರಿಕದ ದಾಳಿಯನ್ನು ಮೂರ್ಖತನ ಎಂದು ಕರೆದಿದೆ. ರಷ್ಯ ಇದು ಅಂತರರಾಷ್ಟ್ರೀಯ ನಿಯಮದ ಉಲ್ಲಂಘನೆ ಎಂದು ಪ್ರತಿಕ್ರಿಯಿಸಿದೆ. ಹಾಗಾಗಿ ಪಶ್ಚಿಮ ಏಶಿಯದಲ್ಲಿ ಈ ಪ್ರದೇಶ ಮತ್ತೊಮ್ಮೆ ರಣರಂಗವಾಗಿದೆ.

ಅಮೆರಿಕ ಈ ಪ್ರದೇಶದಲ್ಲಿ ಆಡಳಿತ ಬದಲಾವಣೆಯ ಕೈಂಕರ್ಯ ಕೈಗೊಂಡಿರುವುದು ಇದೇ ಮೊದಲ ಸಲವೇನಲ್ಲ. ಇರಾಕಿನಲ್ಲಿ ಸದ್ದಾಮ್ ಹುಸೇನ್‌ಅನ್ನು ಪದಚ್ಯುತಗೊಳಿಸಲು, ಕೊಂದುಹಾಕಲು ಅಮೆರಿಕ ನಿರ್ಧರಿಸಿದ್ದು ಕೂಡ ಆತ ರಾಸಾಯನಿಕ ಅಸ್ತ್ರಗಳನ್ನು ಸಂಗ್ರಹಿಸಿದ್ದಾನೆ ಎಂದು ಆರೋಪಿಸಿಯೇ. ಗೊತ್ತುಗುರಿಯಿಲ್ಲದೆ ಅರಬ್ ದೇಶಗಳಲ್ಲಿ ಎದ್ದ ಬಂಡಾಯದ ಪರಿಣಾಮವಾಗಿ ಈಜಿಪ್ಟ್ ಮೊದಲಾದ ದೇಶಗಳಲ್ಲಿನ ಆಡಳಿತದಲ್ಲಿ ಮಾರ್ಪಾಟಾದದ್ದು, ಲಿಬಿಯಾದಲ್ಲಿ ಗಡಾಫಿ ಪದಚ್ಯುತಿ ಇತಿಹಾಸದ ಪುಟ ಸೇರಿಯಾಯಿತು. ಸಿರಿಯ ಮತ್ತು ಇರಾನ್‌ಗಳನ್ನು ಮಣಿಸಲು ಮಾತ್ರ ಅಮೆರಿಕಾಗೆ ಈವರೆಗೆ ಸಾಧ್ಯವಾಗಿಲ್ಲ. ಎರಡೂ ಪ್ರಬಲ ರಾಷ್ಟ್ರಗಳಷ್ಟೇ ಅಲ್ಲದೆ ಅರ್ಧ ಶತಮಾನಕ್ಕೂ ಹೆಚ್ಚು ಕಾಲದಿಂದ ರಷ್ಯಾದ ಸಖ್ಯ ಹೊಂದಿವೆ.

ಪಶ್ಚಿಮ ಏಶಿಯಾದಲ್ಲಿ ಸಿರಿಯಾ ಯಾವತ್ತೂ ಪ್ಯಾಲಸ್ತೈನ್ ಅರಬ್ಬರ ಹೋರಾಟಕ್ಕೆ ಬೆಂಬಲ ನೀಡುತ್ತ ಬಂದಿದೆ. ಇದರಿಂದ ಇಸ್ರೇಲಿನ ಕೆಂಗಣ್ಣಿಗೆ ಗುರಿಯಾಗಿದೆ. ಅಮೆರಿಕ ಈ ಭೂಭಾಗದ ಮೇಲೆ ಹಿಡಿತ ಸ್ಥಾಪಿಸಿಕೊಳ್ಳಲು, ಅಲ್ಲಿನ ತೈಲಸಂಪತ್ತಿನ ಮೇಲೆ ಸ್ವಾಮ್ಯ ಸಾಧಿಸಲು ನೋಡುತ್ತಿದೆ. ೨೦೦೦ದ ವರ್ಷದಲ್ಲಿ ಬಷಾರ್ ಅಸ್ಸಾದ್ ಅಧಿಕಾರಕ್ಕೆ ಬಂದಾಗ ಅಮೆರಿಕ ಸ್ವಾಗತಿಸಿತ್ತು. ೨೦೧೦ರ ನಂತರ ಸಿರಿಯಾದ ಅಧ್ಯಕ್ಷ ಅಸ್ಸಾದ್‌ನನ್ನು ಪದಚ್ಯುತಗೊಳಿಸಲು ಸಂಚುಹೂಡಿತು. ಅಮೆರಿಕದ ರಾಯಭಾರಿ ಕಚೇರಿಗೆ ಕಳಿಸಲಾಗಿದ್ದ ರಹಸ್ಯ ಸಂದೇಶಗಳಿಂದ ಇದು ತಿಳಿದುಬಂತು. ೨೦೧೧ರಲ್ಲಿ 'ಅರಬ್ ಸ್ಪ್ರಿಂಗ್' ನಂತರ ಅಮೆರಿಕ ಬಹಿರಂಗವಾಗಿಯೇ ಅಸ್ಸಾದ್ ಆಡಳಿತದ ವಿರುದ್ಧವಾಗಿ ನಿಂತಿತು. ಸಿರಿಯಾದಲ್ಲಿ ಉದ್ಭವಿಸಿದ್ದ ಅಂತರ್ಯುದ್ಧದ ಪರಿಸ್ಥಿತಿಯನ್ನು ಬಳಸಿಕೊಂಡು ಆಡಳಿತವನ್ನು ಪದಚ್ಯುತಿಗೊಳಿಸಲು ಬಾಂಬು ದಾಳಿ ನಡೆಸಿತ್ತು. ಹಾಗಾಗಿ, ಸಿರಿಯಾದ ಮೇಲೆ ಬಾಂಬು ದಾಳಿ ಮೊದಲ ಬಾರಿಯೇನಲ್ಲ.

ಇರಾಕ್ ಯುದ್ಧಾನಂತರ ಸಿರಿಯಾದ ಮೇಲೆ ಕಣ್ಣಿರಿಸಿರುವ ಅಮೆರಿಕದ ವಿರುದ್ಧವಾಗಿ ರಷ್ಯ ಅಸ್ಸಾದ್‌ಗೆ ಬೆಂಬಲವಾಗಿ ನಿಂತಿದೆ. ಗಡಿಯಲ್ಲಿ ಸ್ಥಾಪನೆಯಾಗಿರುವ ಇಸ್ಲಾಮಿಕ್ ಕ್ಯಾಲಿಫೇಟ್ ವಿರುದ್ಧವಾಗಿ ನಡೆಯುತ್ತಿರುವ ಸಮರದಲ್ಲಿ ಸಿರಿಯಾ ಆಡಳಿತಕ್ಕೆ ರಷ್ಯ ಪೂರ್ಣ ಬೆಂಬಲ ನೀಡಿದೆ. ಜಾಗತಿಕ ಭಯೋತ್ಪಾದನೆಗೆ ಕೇಂದ್ರವಾಗಿ ರೂಪುಗೊಳ್ಳುತ್ತಿರುವ ಐಎಸ್ ವಿರುದ್ಧವಾಗಿ ಅಮೆರಿಕ ಕೂಡ ಸಮರದಲ್ಲಿ ರಷ್ಯದೊಂದಿಗೆ ಕೈಜೋಡಿಸಿದ್ದಾಗ್ಯೂ ಸಿರಿಯಾದ ಆಡಳಿತದಲ್ಲಿ ಬದಲಾವಣೆ ತರಲು ಪ್ರಯತ್ನವನ್ನು ಮಾತ್ರ ಅಮೆರಿಕ ಬಿಟ್ಟಿಲ್ಲ. ಈಚೆಗೆ ಜರುಗಿದ ರಾಸಾಯನಿಕ ಅಸ್ತ್ರ ಬಳಕೆಯ ಪ್ರಕರಣಕ್ಕೆ ಕಾರಣ ಯಾರು ಎಂಬುದು


ರಾಸಾಯನಿಕ ಅಸ್ತ್ರದ ದಾಳಿಯಲ್ಲಿ ಸಣ್ಣ ಮಕ್ಕಳೂ ಸೇರಿದಂತೆ ೫೮ ಮಂದಿ ನಾಗರಿಕರು ಅಸುನೀಗಿದ್ದು

ಸ್ಪಷ್ಟವಾಗಿಲ್ಲ. ಈ ಪ್ರದೇಶಕ್ಕೆ ನಿಷೇಧಿತ ರಾಸಾಯನಿಕ ಅಸ್ತ್ರಗಳನ್ನು ರವಾನಿಸಿದ್ದು ಕೂಡ ಅಮೆರಿಕವೆ. ಸಾಮೂಹಿಕ ವಿನಾಶ ತರುವ ಇಂಥ ಅಸ್ತ್ರಗಳು ಭಯೋತ್ಪಾದಕರ ಕೈಗೆ ಸೇರುವುದು ಸುಲಭ. ಹಾಗಾಗಿ ಪೂರ್ವಾಗ್ರಹ ಪೀಡಿತ ಅಮೆರಿಕ ಸಿರಿಯಾದ ಅಸ್ಸಾದ್ ಆಡಳಿತವೇ ಹೊಣೆ ಎಂದು ಹಿಂದುಮುಂದು ನೋಡದೆ ದಾಳಿ ನಡೆಸುತ್ತಿದೆ. ಇದು ಅತ್ಯಂತ ಅಪಾಯಕಾರಿಯಾದ ಕ್ರಮ. ಈ ಪ್ರದೇಶದಲ್ಲಿ ಈಗಾಗಲೇ ಇರುವ ಅಶಾಂತ ಪರಿಸ್ಥಿತಿಯನ್ನು ಮತ್ತಷ್ಟು ಉದ್ರಿಕ್ತಗೊಳಿಸಲಿದೆ. ಸಿರಿಯಾದ ಆಡಳಿತಕ್ಕೆ ಬೆಂಬಲ ನೀಡುತ್ತಿರುವುದರಿಂದ ನೇರವಾಗಿ ರಷ್ಯಾದೊಂದಿಗೆ ಸಂಘರ್ಷಕ್ಕೂ ಎಡೆಮಾಡುವ ಸಾಧ್ಯತೆಯೂ ಇದೆ. ಅಧ್ಯಕ್ಷ ಟ್ರಂಪ್ ಚುನಾವಣೆಯ ಸಮಯದಲ್ಲಿ ಹಾಗೂ ನಂತರದಲ್ಲಿ ತಳೆದ ಧೋರಣೆಗೂ, ಈಗ ಸಿರಿಯಾದ ಮೇಲೆ ನಡೆಸುತ್ತಿರುವ ಮಿಸೈಲ್ ದಾಳಿಗೂ ಅಜಗಜಾಂತರವಿದೆ. ಅಮೆರಿಕದ ಮಿಲಿಟರಿ-ಕೈಗಾರಿಕಾ ಸಂಕೀರ್ಣದ ನಿರ್ಧಾರಗಳನ್ನು ಮೀರಲು ಯಾವ ಅಮೆರಿಕನ್ ಅಧ್ಯಕ್ಷರಿಗೂ ಸಾಧ್ಯವಿಲ್ಲ ಎಂಬುದನ್ನು ಸಿರಿಯಾದ ಮೇಲಿನ ದಾಳಿ ಇನ್ನೊಮ್ಮೆ ದೃಢಪಡಿಸಿದೆ. ಡೊನಾಲ್ಡ್ ಟ್ರಂಪ್ ಇದಕ್ಕೆ ಹೊರತಲ್ಲ. ಆಡಳಿತ ಪ್ರಾರಂಭವಾದ ಮೊದಲಲ್ಲೇ ಈತ ಉತ್ತರ ಕೊರಿಯಾದ ಮೇಲೆ ಹರಿಹಾಯತೊಡಗಿದ್ದಾನೆ. ಇದು ಎಲ್ಲಿಗೆ ಕೊಂಡೊಯ್ಯುತ್ತದೋ ನೋಡಬೇಕು.


ಟ್ರಂಪ್ ಮತ್ತು ಪುಟಿನ್

ಸೀಯಾರ್ಕೆ
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫




ಇದೊಂದು ಸಮಗ್ರ ಅಪ್ರತ್ಯಕ್ಷ ತೆರಿಗೆ. ಸದ್ಯ ಜಾರಿಯಲ್ಲಿರುವ ಅಪ್ರತ್ಯಕ್ಷ ತೆರಿಗೆಗಳೆಲ್ಲ ಇದರಲ್ಲಿ ವಿಲೀನವಾಗಿಬಿಡುತ್ತವೆ. ಈಗಿರುವ ಮೌಲ್ಯ ವರ್ಧನ ತೆರಿಗೆಗೂ ಮತ್ತು ಇದಕ್ಕೂ ಬಹಳ ಭಿನ್ನತೆಯೇನಿಲ್ಲ. ಈಗಿರುವ ಮೌಲ್ಯ ವರ್ಧನ ತೆರಿಗೆಗಳನ್ನು ಸರಕುಗಳ ಮೇಲೆ ಮಾತ್ರ ವಿಧಿಸಲಾಗುತ್ತಿತ್ತು. ಆದರೆ ಜಿಎಸ್‌ಟಿಯನ್ನು ಸರಕು ಮತ್ತು ಸೇವೆಗಳ ಮೇಲೆ ವಿಧಿಸಲಾಗುತ್ತದೆ. ನಮ್ಮ ಸಂವಿಧಾನದಲ್ಲಿ ತೆರಿಗೆಗಳನ್ನು ವಿಧಿಸುವ, ಸಂಗ್ರಹ ಮಾಡಿಕೊಳ್ಳುವ ಹಾಗೂ ವ್ಯಯಿಸುವ ಅಧಿಕಾರವನ್ನು ರಾಜ್ಯಗಳಿಗೆ ನೀಡಲಾಗಿದೆ. ಜಿಎಸ್‌ಟಿ ಜಾರಿಗೆ ಬಂದರೆ ರಾಜ್ಯಗಳು ಸದರಿ ಸಂವಿಧಾನಾತ್ಮಕ ಅಧಿಕಾರವನ್ನು ಕಳೆದು ಕೊಳ್ಳುತ್ತವೆ. ಈ ಸಮಗ್ರ ತೆರಿಗೆ ವ್ಯವಸ್ಥೆಯಲ್ಲಿ ಹೊಸ ತೆರಿಗೆಗಳನ್ನು ವಿಧಿಸುವುದಾಗಲಿ, ತೆರಿಗೆ ದರಗಳನ್ನು ಏರಿಸುವುದು/ಇಳಿಸುವುದಾಗಲಿ, ತೆರಿಗೆಗಳಲ್ಲಿ ವಿನಾಯಿತಿ, ರಿಯಾಯಿತಿ ನೀಡುವುದಾಗಲಿ ರಾಜ್ಯಗಳಿಗೆ ಸಾಧ್ಯವಿಲ್ಲ. ಇನ್ನುಮೇಲೆ ಈ ಎಲ್ಲ ಅಧಿಕಾರವು ಕೇಂದ್ರ ಹಣಕಾಸು ಮಂತ್ರಿ ಅಧ್ಯಕ್ಷರಾಗಿರುವ ಮತ್ತು ರಾಜ್ಯದ ಹಣಕಾಸು ಮಂತ್ರಿಗಳು ಸದಸ್ಯರಾಗಿರುವ ರಾಷ್ಟ್ರೀಯ ಜಿಎಸ್‌ಟಿ ಮಂಡಳಿಯ ವಶದಲ್ಲಿರುತ್ತದೆ.

# ಜಿ ಎಸ್ ಟಿ : ಒಕ್ಕೂಟ ವ್ಯವಸ್ಥೆಗೆ ಶಾಪ

ಡಾ॥ ಟಿ. ಆರ್. ಚಂದ್ರಶೇಖರ

## ಪ್ರಸ್ತಾವನೆ

ಜಿಎಸ್‌ಟಿ (ಗೂಡ್ಸ್ ಆಂಡ್ ಸರ್ವಿಸಸ್ ಟ್ಯಾಕ್ಸ್) ಜಾರಿಯಾಗುತ್ತಿದೆ. ಇದನ್ನು ಸ್ವಾತಂತ್ರ್ಯೋತ್ತರ ಭಾರತದಲ್ಲಿ ತೆರಿಗೆ ಸುಧಾರಣೆಗೆ ಸಂಬಂಧಿಸಿದ ಕ್ರಾಂತಿಕಾರಿ ಕ್ರಮ ಎಂದು ಬಣ್ಣಿಸಲಾಗುತ್ತಿದೆ. ಇನ್ನೇನು, ದೇಶದ ಹಾದಿ–ಬೀದಿಗಳಲ್ಲಿ ಹಾಲಿನ ಹೊಳೆ ಹರಿಯುತ್ತದೆ ಎಂದೂ, ಜೇನಿನ ಮಳೆ ಸುರಿಯುತ್ತದೆ ಎಂದೂ ಜಿಎಸ್‌ಟಿಯನ್ನು ವೈಭವೀಕರಿಸಲಾಗುತ್ತಿದೆ. ಈ ತೆರಿಗೆ ಸುಧಾರಣೆಯಿಂದ ಸರ್ಕಾರದ ಖಜಾನೆ ತುಂಬಿ ತುಳುಕಾಡುತ್ತದೆ ಎಂದೂ ಹೇಳಲಾಗುತ್ತಿದೆ. ಮಾರುಕಟ್ಟೆ ಕ್ರಾಂತಿಗೆ ಇದು ಇಂಬು ಕೊಡುತ್ತದೆ ಎಂದು ವಾದ ಮಾಡಲಾಗುತ್ತಿದೆ. ಕೇಂದ್ರ ಹಣಕಾಸು ಮಂತ್ರಿ ಅರುಣ್ ಜೇಟ್ಲಿ ಅವರು ಜಿಎಸ್‌ಟಿ ಅಸ್ತಿತ್ವಕ್ಕೆ ಬಂದರೆ ದೇಶದ ಜಿಡಿಪಿಯಲ್ಲಿ ಶೇ. ೨ರಷ್ಟು ಏರಿಕೆಯಾಗುತ್ತದೆ ಎಂದು ಹೇಳಿದ್ದಾರೆ. ಫ್ಲಿಪ್‌ಕಾರ್ಟ್‌ನ ಸ್ಥಾಪಕ ಸಚಿನ್ ಬನ್ಸಾಲ್ ಪ್ರಕಾರ ವಲ್ಲಭಭಾಯ್ ಪಟೇಲ್ ನಡೆಸಿದ ರಾಜಕೀಯ ಏಕೀಕರಣದ ನಂತರ ನಡೆಯುತ್ತಿರುವ ದೊಡ್ಡ ಆರ್ಥಿಕ ಏಕೀಕರಣ ಇದಾಗಿದೆ. 'ಒಂದು ದೇಶ, ಒಂದು ಮಾರುಕಟ್ಟೆ, ಒಂದು ಆರ್ಥಿಕತೆ' ಇವು ಜಿಎಸ್‌ಟಿಯ ಮೂಲದಲ್ಲಿನ ಘೋಷಣೆಗಳು. ಬಹುರೂಪಿ ತೆರಿಗೆ ವ್ಯವಸ್ಥೆಗೆ ಪ್ರತಿಯಾಗಿ ಏಕರೂಪಿ ತೆರಿಗೆ ವ್ಯವಸ್ಥೆಯನ್ನು ಸ್ಥಾಪಿಸುವ ಉದ್ದೇಶದಿಂದ ಜಿಎಸ್‌ಟಿಯನ್ನು ಜಾರಿಗೊಳಿಸಲಾಗುತ್ತಿದೆ. ನಮ್ಮದು ನೂರು ಕೋಟಿ ಮೀರಿದ ಜನರ ಮಾರುಕಟ್ಟೆ ಅನ್ನುವುದು ವಾಣಿಜ್ಯೋದ್ಯಮಿಗಳ, ವ್ಯಾಪಾರಿಗಳ, ಉದ್ದಿಮೆಪತಿಗಳ ಬಾಯಲ್ಲಿ ನೀರು ಸುರಿಸುತ್ತಿದೆ. ಇದು ವಾಣಿಜ್ಯೋದ್ಯಮಿಗಳಿಗೆ ವರವಾಗಲಿದೆ. ಬೃಹತ್ ಮಾರುಕಟ್ಟೆಯನ್ನು ಕಟ್ಟುವವರಿಗೆ ಇದು ಅತ್ಯಂತ ಅನುಕೂಲಕರ ಕ್ರಮವಾಗಿದೆ. ಡಿಜಿಟಲೈಸೇಶನ್ ಕಡೆಗೆ, ನಗದುರಹಿತ ಆರ್ಥಿಕತೆಯತ್ತ ನಾಡು ಸಾಗಲು ಇದು ರಾಜಮಾರ್ಗವಾದೀತು. ಈ ತೆರಿಗೆ ವ್ಯವಸ್ಥೆಯ ಬಗ್ಗೆ ವಿರೋಧ ಅನ್ನುವುದೇ ಇಲ್ಲದಂತೆ ಕಾಣುತ್ತಿದೆ. ಇದಕ್ಕೆ ಬುನಾದಿ ಹಾಕಿದ್ದು ಯುಪಿಎ ಸರ್ಕಾರ. ಇದನ್ನು ಅನುಷ್ಠಾನಗೊಳಿಸುತ್ತಿರುವುದು ಎನ್‌ಡಿಎ ಸರ್ಕಾರ. ಯಾರೂ ಇದರ ವಿರುದ್ಧ ಟೀಕೆ ಮಾಡುತ್ತಿಲ್ಲ. ಅರ್ಥಶಾಸ್ತ್ರಜ್ಞರೂ ವಿಮರ್ಶೆ ಮಾಡುತ್ತಿಲ್ಲ (ಪ್ರಭಾತ್ ಪಟ್ನಾಯಕ್ ಅವರಂತಹ ಕೆಲವರನ್ನು ಬಿಟ್ಟರೆ !).

ನಿಜಕ್ಕೂ ಇದು ಸದ್ಗುಣಗಳ ಆಗರವೇನು ? ಈ ತೆರಿಗೆ ವ್ಯವಸ್ಥೆಯಿಂದ ಸಣ್ಣಪುಟ್ಟ ವ್ಯಾಪಾರ ಮಾಡುತ್ತಿದ್ದವರ, ತಲೆಯ ಮೇಲೆ ಹೊತ್ತು ಮಾರಾಟ ಮಾಡುತ್ತಿದ್ದವರ, ತಳ್ಳುಗಾಡಿಯ ಮಾರಾಟಗಾರರ ಬದುಕು ಏನಾಗುತ್ತದೆ ? ದೇಶಕ್ಕೆಲ್ಲ ಒಂದು ಮಾರುಕಟ್ಟೆ ಅಸ್ತಿತ್ವಕ್ಕೆ ಬಂದರೆ ಕರ್ನಾಟಕದ, ಉತ್ತರ ಕರ್ನಾಟಕದ, ಹೈದರಾಬಾದ್ ಕರ್ನಾಟಕದ ಮಾರುಕಟ್ಟೆಗಳೇನಾಗಬೇಕು ? ಒಂದು ಮಾರುಕಟ್ಟೆ ಅನ್ನುವುದು ಅಷ್ಟಕ್ಕೆ ನಿಲ್ಲುವುದಿಲ್ಲ. ಈಗಾಗಲೆ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ತನ್ನ ಐದು ಸಹವರ್ತಿ ಬ್ಯಾಂಕುಗಳನ್ನು ತನ್ನಲ್ಲಿ ವಿಲೀನಗೊಳಿಸಿಕೊಳ್ಳುತ್ತಿದೆ. ಒಂದು ಮಾರುಕಟ್ಟೆ ಅನ್ನುವುದು ಈಗ ಒಂದು ಬ್ಯಾಂಕ್ ಅನ್ನುವಲ್ಲಿಗೆ ಸಾಗಿದೆ. ಕರ್ನಾಟಕತ್ವವನ್ನು ಪ್ರತಿನಿಧಿಸುತ್ತಿದ್ದ ಮೈಸೂರು ಬ್ಯಾಂಕು ಈಗ ಚರಿತ್ರೆ. ಅದು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದಲ್ಲಿ ಲೀನವಾಗಿಬಿಟ್ಟಿದೆ. ಈ ಲೀನವಾಗುವುದು, ವಿಲೀನವಾಗುವುದು ಆದುದಾದರೆ ವಿಶಿಷ್ಟವಾಗಿರುವುದು ಎಂಬ ವಿಚಾರಕ್ಕೆ ಕರ್ನಾಟಕದಲ್ಲಿ ದೊಡ್ಡ ಚರಿತ್ರೆಯಿದೆ. ಒಕ್ಕೂಟ ಸಿದ್ಧಾಂತ ಅನ್ನುವುದು ಒಂದು ಸಾಂಸ್ಕೃತಿಕ ಸಂಗತಿಯೂ ಆಗಿದೆ. ವಿವಿಧ ಭಾಷೆಗಳು, ವಿವಿಧ ಸಂಪ್ರದಾಯಗಳು, ವಿವಿಧ ಸಂಸ್ಕೃತಿಗಳು, ವಿವಿಧ ಮಾರುಕಟ್ಟೆಗಳು, ವಿವಿಧ ಭೌಗೋಳಿಕ ನೆಲೆಗಳು ವಿವಿಧ ಚಾರಿತ್ರಿಕ ಹಿನ್ನೆಲೆಗಳು ಮುಂತಾದವುಗಳ ಆಗರ ಭಾರತ ಮತ್ತು ಅದೇ ರೀತಿ ಕರ್ನಾಟಕ. ಇದರ ಬಗ್ಗೆ ೧೦ನೆಯ ಶತಮಾನದ ಕನ್ನಡ ಕೃತಿ ಕವಿರಾಜಮಾರ್ಗದಲ್ಲಿ ಚರ್ಚೆ ಮಾಡಲಾಗಿದೆ. ಕವಿರಾಜಮಾರ್ಗಕಾರ ಇದನ್ನು ಹೀಗೆ ಹೇಳುತ್ತಾನೆ :

*ಕಾವೇರಿಯಿಂದ ಮಾ ಗೋದಾವರಿವರಮಿರ್ಪ*
*ನಾಡದಾ ಕನ್ನಡದೊಳ್ ಭಾವಿಸಿದ ಜನಪದ*
*ವಸುಧಾ ವಲಯ ವಿಲೀನ ವಿಶದ ವಿಷಯ ವಿಶೇಷಂ*

– ಈ ಕಂದ ಪದ್ಯದಲ್ಲಿ ಎಲ್ಲರೂ ಮೊದಲ ಸಾಲಿನ ಬಗ್ಗೆ ಚರ್ಚೆ ಮಾಡುತ್ತಾರೆ. ಆದರೆ ಇದರ ಮಹತ್ವ ಇರುವುದು ಅದರ ಕೊನೆಯ ಸಾಲಿನಲ್ಲಿ. ಕನ್ನಡ ಜನಪದವು ವಸುಧೆಯಲ್ಲಿ ವಿಲೀನವಾಗಿದೆ. ಅದು ಏಕಾಂಗಿಯಾಗಿಲ್ಲ. ಆದರೆ ವಿಲೀನವಾಗಿದ್ದರೂ ಅದು ತನ್ನ ವಿಶಿಷ್ಟತೆ – ವಿಶೇಷತೆಯನ್ನು ಕಾಯ್ದುಕೊಂಡಿದೆ ಅಥವಾ ಕಾಯ್ದುಕೊಳ್ಳುತ್ತದೆ. ಒಕ್ಕೂಟ ಪ್ರಣಾಳಿಕೆಗೆ ಕರ್ನಾಟಕದಲ್ಲಿ ಸಾವಿರ ವರ್ಷದ ಚರಿತ್ರೆಯಿದೆ. ಅಂದು ಒಕ್ಕೂಟ ವ್ಯವಸ್ಥೆ ಅನ್ನುವುದನ್ನು ಒಂದು ರಾಜಕೀಯ ಆಡಳಿತ ತಂತ್ರವಾಗಿ ಗುರುತಿಸಿರಲಿಕ್ಕಿಲ್ಲ. ಆದರೆ ಹಲವು ರಾಜ್ಯಗಳು ಒಂದಾಗಿ ಬದುಕುವ ಕ್ರಮದ ಬಗ್ಗೆ, ಸ್ಥಳೀಯತೆಯ ಬಗ್ಗೆ ಒಲವು ಇದ್ದುದನ್ನು ಇದರಲ್ಲಿ ಕಾಣಬಹುದು. ಆದರೆ ಜಿಎಸ್‌ಟಿಯು ಇದಕ್ಕೆ ಧಕ್ಕೆ ಉಂಟುಮಾಡಿದೆ. ಮೈಸೂರು ಬ್ಯಾಂಕು ಅನ್ನುವುದು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದಲ್ಲಿ ವಿಲೀನವಾಗುತ್ತಿದೆಯಲ್ಲಾ ಅದು ಕರ್ನಾಟಕತ್ವಕ್ಕೆ ಅಪಾಯ ತಂದಿದೆ. ಈ ವಿಲೀನ ಪ್ರಕ್ರಿಯೆ

ಮುಂದುವರಿದು ದೇಶಾದ್ಯಂತ ರಾಷ್ಟ್ರೀಯ ಮತ್ತು ರಾಜ್ಯ ಹೆದ್ದಾರಿಗಳ ಮೈಲುಗೂಟಗಳಲ್ಲಿ ಸ್ಥಳೀಯ ಭಾಷೆಗೆ ಪ್ರತಿಯಾಗಿ ಹಿಂದಿ ಭಾಷೆಯಲ್ಲಿ ಮಾತ್ರ ಮಾರ್ಗಸೂಚನೆಯನ್ನು ನೀಡುವ ಕ್ರಮ ಆರಂಭವಾಗಿದೆ. ಬೇರೆ ರಾಜ್ಯಗಳ ಜನರು ಕರ್ನಾಟಕಕ್ಕೆ ವಿವಿಧ ಕಾರಣಗಳಿಗಾಗಿ ಬರುತ್ತಾರೆ. ಆದ್ದರಿಂದ ಅವರ ಜೊತೆಯಲ್ಲಿ ವ್ಯವಹರಿಸುವುದಕ್ಕೆ ರಾಜ್ಯದ ಪೊಲೀಸರು ಹಿಂದಿ ಭಾಷೆಯನ್ನು ಕಲಿಯಬೇಕು ಎಂದು ಆದೇಶ ಹೊರಡಿಸುವ ಬಗ್ಗೆ ಕೇಂದ್ರದ ಆಡಳಿತಗಾರರು ಮಾತನಾಡುತ್ತಿದ್ದಾರೆ. ಸಂಸ್ಕೃತ ಭಾಷೆಗೆ ಇನ್ನಿಲ್ಲದ ಪ್ರೋತ್ಸಾಹ ಮತ್ತು ಹಣದ ಹೊಳೆಯನ್ನು ಹರಿಸುತ್ತಿರುವ ಕ್ರಮಗಳು ದೇಶಭಾಷೆಗಳಿಗೆ ಕುತ್ತಾಗಿ ಪರಿಣಮಿಸಿವೆ. ಇಲ್ಲಿ ಕವಿರಾಜಮಾರ್ಗಕಾರ ಹೇಳುವ ರಾಜ್ಯದ ವಿಶಿಷ್ಟತೆಗೆ ಅಪಾಯ ಕಾದಿದೆ. ಪ್ರಸ್ತುತ ಪ್ರಬಂಧದಲ್ಲಿ ಜಿಎಸ್‌ಟಿ ಹೇಗೆ ಬಹುರೂಪಿ ಭಾರತಕ್ಕೆ, ಅದರ ಒಕ್ಕೂಟ ವ್ಯವಸ್ಥೆಗೆ, ನಮ್ಮ ಸಂವಿಧಾನಕ್ಕೆ ಹೇಗೆ ಎರವಾಗಲಿದೆ ಎಂಬುದನ್ನು ಚರ್ಚೆ ಮಾಡಲಾಗಿದೆ.

**ಜಿ ಎಸ್ ಟಿ : ಏನು, ಹೇಗೆ ?**

ಇದೊಂದು ಸಮಗ್ರ ಅಪ್ರತ್ಯಕ್ಷ ತೆರಿಗೆ. ಸದ್ಯ ಜಾರಿಯಲ್ಲಿರುವ ಅಪ್ರತ್ಯಕ್ಷ ತೆರಿಗೆಗಳೆಲ್ಲ ಇದರಲ್ಲಿ ವಿಲೀನವಾಗಿ ಬಿಡುತ್ತವೆ. ಈಗಿರುವ ಮೌಲ್ಯ ವರ್ಧನ ತೆರಿಗೆಗೂ ಮತ್ತು ಇದಕ್ಕೂ ಬಹಳ ಭಿನ್ನತೆಯೇನಿಲ್ಲ. ಈಗಿರುವ ಮೌಲ್ಯ ವರ್ಧನ ತೆರಿಗೆಗಳನ್ನು ಸರಕುಗಳ ಮೇಲೆ ಮಾತ್ರ ವಿಧಿಸಲಾಗುತ್ತಿತ್ತು. ಆದರೆ ಜಿಎಸ್‌ಟಿಯನ್ನು ಸರಕು ಮತ್ತು ಸೇವೆಗಳ ಮೇಲೆ ವಿಧಿಸಲಾಗುತ್ತದೆ. ನಮ್ಮ ಸಂವಿಧಾನದಲ್ಲಿ ತೆರಿಗೆಗಳನ್ನು ವಿಧಿಸುವ, ಸಂಗ್ರಹ ಮಾಡಿಕೊಳ್ಳುವ ಹಾಗೂ ವ್ಯಯಿಸುವ ಅಧಿಕಾರವನ್ನು ರಾಜ್ಯಗಳಿಗೆ ನೀಡಲಾಗಿದೆ. ಜಿಎಸ್‌ಟಿ ಜಾರಿಗೆ ಬಂದರೆ ರಾಜ್ಯಗಳು ಸದರಿ ಸಂವಿಧಾನಾತ್ಮಕ ಅಧಿಕಾರವನ್ನು ಕಳೆದುಕೊಳ್ಳುತ್ತವೆ. ಈ ಸಮಗ್ರ ತೆರಿಗೆ ವ್ಯವಸ್ಥೆಯಲ್ಲಿ ಹೊಸ ತೆರಿಗೆಗಳನ್ನು ವಿಧಿಸುವುದಾಗಲಿ, ತೆರಿಗೆ ದರಗಳನ್ನು ಏರಿಸುವುದು/ಇಳಿಸುವುದಾಗಲಿ, ತೆರಿಗೆಗಳಲ್ಲಿ ವಿನಾಯಿತಿ, ರಿಯಾಯಿತಿ ನೀಡುವುದಾಗಲಿ ರಾಜ್ಯಗಳಿಗೆ ಸಾಧ್ಯವಿಲ್ಲ. ಇನ್ನುಮೇಲೆ ಈ ಎಲ್ಲ ಅಧಿಕಾರವು ಕೇಂದ್ರ ಹಣಕಾಸು ಮಂತ್ರಿ ಅಧ್ಯಕ್ಷರಾಗಿರುವ ಮತ್ತು ರಾಜ್ಯದ ಹಣಕಾಸು ಮಂತ್ರಿಗಳು ಸದಸ್ಯರಾಗಿರುವ ರಾಷ್ಟ್ರೀಯ ಜಿಎಸ್‌ಟಿ ಮಂಡಳಿಯ ವಶದಲ್ಲಿರುತ್ತದೆ. ಇದನ್ನು ಸಮಗ್ರ ಏಕೀಕೃತ ತೆರಿಗೆ ಎಂದು ಕರೆದರೂ ಇದು ಕೇಂದ್ರ ಜಿಎಸ್‌ಟಿ ಮತ್ತು ರಾಜ್ಯ ಜಿಎಸ್‌ಟಿ ಎಂಬ ಎರಡು ತೆರಿಗೆಗಳ ವ್ಯವಸ್ಥೆಯಾಗಿರುತ್ತದೆ. ಹಾಗೂ ಅಲ್ಲಿ ವಿವಿಧ ತೆರಿಗೆ ದರಗಳಿರುತ್ತವೆ. ಅಲ್ಲಿ ಅನೇಕ ರಿಯಾಯಿತಿ–ವಿನಾಯಿತಿಗಳಿರುತ್ತವೆ. ಈ ಬಗೆಯ ತೆರಿಗೆ ವ್ಯವಸ್ಥೆ ವಿಶ್ವದಾದ್ಯಂತ ಪ್ರಚಲಿತದಲ್ಲಿದೆ ಎಂದು ಹೇಳಲಾಗುತ್ತಿದೆ. ಇದು ನಿಜವಲ್ಲ. ಜಿಎಸ್‌ಟಿ ವ್ಯವಸ್ಥೆಯು ಬೃಹತ್ ದೇಶ ಅಮೆರಿಕದಲ್ಲಿಲ್ಲ, ಯುರೋಪಿಯನ್ ಯೂನಿಯನ್‌ನಲ್ಲಿಲ್ಲ.

**ರಾಷ್ಟ್ರೀಯ ಜಿ ಎಸ್ ಟಿ ಮಂಡಳಿ**

ಜಿಎಸ್‌ಟಿ ವ್ಯವಸ್ಥೆಯ ಆಡಳಿತ ನಿರ್ವಹಣೆಗೆ ಒಂದು ಶಾಸನಾತ್ಮಕ ಮಂಡಳಿ ರಾಷ್ಟ್ರಮಟ್ಟದಲ್ಲಿ ಅಸ್ತಿತ್ವಕ್ಕೆ ಬರಲಿದೆ. ಇದರಲ್ಲಿ ರಾಜ್ಯಗಳಿಗೆ ಪ್ರಾತಿನಿಧ್ಯ ನೀಡಲಾಗಿದೆ. ಕೇಂದ್ರ ಹಣಕಾಸು ಸಚಿವರು ಅದರ ಅಧ್ಯಕ್ಷರಾಗಿರುತ್ತಾರೆ. ಎಲ್ಲ ಸದಸ್ಯ ರಾಜ್ಯಗಳಿಗೆ ಸಮಾನ ಮತದಾನದ ಹಕ್ಕು ಇರುತ್ತದೆ. ಇಲ್ಲಿ ನಿರ್ಣಯ ಅನುಮೋದನೆಯಾಗಬೇಕಾದರೆ ನಾಲ್ಕನೆಯ ಮೂರರಷ್ಟು ಬಹುಮತ ಅಗತ್ಯ. ಆದರೆ ಮಂಡಳಿಯ ಒಟ್ಟು ಮತಗಳಲ್ಲಿ ಮೂರನೆಯ ಒಂದರಷ್ಟು ಕೇಂದ್ರದ ವಶದಲ್ಲಿರುತ್ತದೆ. ಕೇಂದ್ರಕ್ಕೆ ಪರಮೋಚ್ಚ ಅಧಿಕಾರವಿರುತ್ತದೆ. ಈ ಕಾರಣದಿಂದ ಯಾವುದೇ ಒಂದು ರಾಜ್ಯಕ್ಕೆ ತನಗೆ ಅಗತ್ಯವಾದ ನಿರ್ಣಯವನ್ನು ಕೇಂದ್ರದ ಬೆಂಬಲವಿಲ್ಲದೆ ಇಲ್ಲಿ ಸಾಧಿಸಿಕೊಳ್ಳುವುದು ಅಸಾಧ್ಯ. ಈ ಮಂಡಳಿಯು ಒಕ್ಕೂಟ ವ್ಯವಸ್ಥೆಗೆ ಕೊಡಲಿ ಪೆಟ್ಟು ನೀಡುವುದು ಖಚಿತ. ಈ ವ್ಯವಸ್ಥೆಯಲ್ಲಿ ತೆರಿಗೆಗಳಿಗೆ ಸಂಬಂಧಿಸಿದ ನೀತಿ ರೂಪಿಸುವ ಅಧಿಕಾರ ರಾಜ್ಯಗಳಿಗೆ ಇರುವುದಿಲ್ಲ. ಕೇಂದ್ರದ ಮರ್ಜಿಯಲ್ಲಿ ರಾಜ್ಯಗಳು ಕೆಲಸ ಮಾಡಬೇಕಾಗುತ್ತದೆ. ಇಲ್ಲಿ ರಾಷ್ಟ್ರೀಯ ಹಿತಾಸಕ್ತಿಯ ಹಿನ್ನೆಲೆಯಲ್ಲಿ ಕೇಂದ್ರದ ನಿಲುವನ್ನು ರಾಜ್ಯಗಳು ಅನುಮೋದಿಸಬೇಕಾಗುತ್ತದೆ. ಇಲ್ಲದಿದ್ದರೆ ಅಂತಹ ರಾಜ್ಯಗಳ ನಿಲುವನ್ನು 'ರಾಷ್ಟ್ರ–ವಿರೋಧಿ' ಎಂದು ಬಣ್ಣಿಸುವ ಸಾಧ್ಯತೆಯಿರುತ್ತದೆ. ಇನ್ನು ಮುಂದೆ ತೆರಿಗೆ ನೀತಿಗೆ ಸಂಬಂಧಿಸಿದಂತೆ ರಾಜ್ಯಗಳಿಗೆ ಯಾವುದೇ ಅಧಿಕಾರವಿರುವುದಿಲ್ಲ. ಅವು ಕೇಂದ್ರದ ಒಪ್ಪಿಗೆಯಲ್ಲಿ ನಡೆಯಬೇಕಾಗುತ್ತದೆ. ನೈಸರ್ಗಿಕ ಬಿಕ್ಕಟ್ಟು ಅಥವಾ ಬಿಕ್ಕಟ್ಟಿನ ಸಂದರ್ಭಗಳಲ್ಲಿ ಹೆಚ್ಚುವರಿ ಸಂಪನ್ಮೂಲ ಅಗತ್ಯ ಬಿದ್ದರೆ ರಾಜ್ಯಗಳು ಕೇಂದ್ರಕ್ಕೆ ಬೇಡಿಕೆ ಸಲ್ಲಿಸಬೇಕಾಗುತ್ತದೆ. ಅಕ್ಷರಶಃ ಬೇಡಬೇಕಾಗುತ್ತದೆ. ಈ ಎಲ್ಲ ಕ್ರಮಗಳು ಒಕ್ಕೂಟ ವ್ಯವಸ್ಥೆಗೆ ದಕ್ಕೆ ತರುವ ಸಾಧ್ಯತೆಯಿದೆ. ತೆರಿಗೆಗೆ ಸಂಬಂಧಿಸಿದ ನೀತಿಗಳನ್ನು ಕೇಂದ್ರದ ನೇತೃತ್ವದ ಮಂಡಳಿಯಲ್ಲಿ ತೀರ್ಮಾನಿಸುವುದಾದರೆ ರಾಜ್ಯಗಳ ಸ್ವಾಯತ್ತತೆಗೆ ಯಾವುದೇ ಅರ್ಥ ಉಳಿಯುವುದಿಲ್ಲ. ನಮ್ಮ ಸಂವಿಧಾನದಲ್ಲಿ ತೆರಿಗೆಗಳನ್ನು ವಿಧಿಸುವ, ಸಂಗ್ರಹಿಸುವ ಮತ್ತು ವ್ಯಯಿಸುವ ಅಧಿಕಾರವನ್ನು ರಾಜ್ಯ ಸರ್ಕಾರಗಳಲ್ಲದೆ ಗ್ರಾಮ ಪಂಚಾಯತಿಗಳಿಗೆ ಮತ್ತು ನಗರ ಸ್ಥಳೀಯ ಸಂಸ್ಥೆಗಳಿಗೂ ನೀಡಲಾಗಿದೆ. ಆದರೆ ನಮ್ಮ ಒಕ್ಕೂಟ ವ್ಯವಸ್ಥೆಯ ಸಂವಿಧಾನಾತ್ಮಕ ಮೂರನೆಯ ಹಂತದ ಸರ್ಕಾರಗಳಿಗೆ ಮಂಡಳಿಯಲ್ಲಿ ಅವಕಾಶ ನೀಡಲಾಗಿಲ್ಲ. ಜಿಎಸ್‌ಟಿ ಅಸ್ತಿತ್ವಕ್ಕೆ ಬಂದ ಮೇಲೆ ಸ್ಥಳೀಯ ಸರ್ಕಾರಗಳ ತೆರಿಗೆ ಅಧಿಕಾರ ಏನಾಗುತ್ತದೆ ? ಅವುಗಳು ಸಹ ಜಿಎಸ್‌ಟಿಯಲ್ಲಿ ವಿಲೀನಗೊಂಡುಬಿಡುತ್ತವೆಯೇ ? ಅಂದರೆ ಒಂದು ತೆರಿಗೆ, ಒಂದು ಮಾರುಕಟ್ಟೆ ಅನ್ನುವುದು ಒಕ್ಕೂಟ ತತ್ವದ ಜೊತೆಯಲ್ಲಿ ವಿಕೇಂದ್ರೀಕರಣ ತತ್ವಕ್ಕೂ ಕುತ್ತು ತರುತ್ತಿದೆಯೇ ? ರಾಜ್ಯಮಟ್ಟದಲ್ಲಿ ವಿಕೇಂದ್ರೀಕರಣ ಪ್ರತಿಪಾದಕರು ಇದರ ಬಗ್ಗೆ ಗಮನ ಹರಿಸಿದ್ದು ಕಾಣುವುದಿಲ್ಲ. ಒಟ್ಟಾರೆ ಇದು ಸ್ಥಳೀಯತೆ ಅನ್ನುವುದನ್ನು ಅಳಿಸಿಹಾಕಿಬಿಡುತ್ತದೆ. ಸ್ಥಳೀಯ ಮಾರುಕಟ್ಟೆ, ಸ್ಥಳೀಯ ಉತ್ಪಾದನೆ, ಸ್ಥಳೀಯ ಅಭಿರುಚಿ ಮುಂತಾದವು ಜಿಎಸ್‌ಟಿಯಿಂದ ತಮ್ಮ ಪ್ರಸ್ತುತತೆಯನ್ನು ಕಳೆದುಕೊಂಡುಬಿಡುತ್ತವೆ.

**ಬೃಹತ್ತಾದುದು ಬೃಹತ್ತಾದ ಅಪಾಯವನ್ನೇ ತರುತ್ತದೆ !**

ದೊಡ್ಡ ಪ್ರಮಾಣದ ಉತ್ಪಾದನೆಗೆ ಕೆಲವು ಅನುಕೂಲಗಳಿರುತ್ತವೆ. ಅವುಗಳನ್ನು 'ಎಕನಾಮೀಸ್ ಆಫ್ ಸ್ಕೇಲ್' ಎಂದು ಕರೆಯಲಾಗುತ್ತದೆ. ಇದರಿಂದಾಗಿ ಸರಾಸರಿ ಉತ್ಪಾದನ ವೆಚ್ಚ, ಸರಾಸರಿ ಬೆಲೆಗಳಲ್ಲಿ ಮಿತವ್ಯಯವನ್ನು ಸಾಧಿಸಿಕೊಳ್ಳಬಹುದು. ಅಲ್ಲಿ ವಿಸ್ತೃತವಾದ ಯಾಂತ್ರೀಕರಣ ಸಾಧ್ಯ. ಒಂದು ಮಾರುಕಟ್ಟೆ ಅನ್ನುವುದು ಒಂದೇ ಕಂಪನಿ ಅನ್ನುವುದಕ್ಕೆ ದಾರಿ ಮಾಡಿಕೊಡಬಹುದು. ಈ ದಾರಿಯಲ್ಲಿ ತಾನೆ ಒಂದು ಬ್ಯಾಂಕು ಎಂಬ ಸೂತ್ರದ ಆಧಾರದ ಮೇಲೆ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದಲ್ಲಿ ಅದರ ಐದು ಸಹವರ್ತಿ ಬ್ಯಾಂಕುಗಳು ವಿಲೀನಗೊಳ್ಳುತ್ತಿರುವುದು ! ಒಂದು ಮಾರುಕಟ್ಟೆ, ಒಂದು ಬ್ಯಾಂಕು ಇದ್ದಂತೆ ಒಂದೇ ಕಂಪನಿ !! ಈ ಒಂದು ಮಾರುಕಟ್ಟೆ, ಒಂದು ತೆರಿಗೆ, ಒಂದು ಭಾಷೆ ಅನ್ನುವ ಸಂಗತಿಗಳು ಮಾರುಕಟ್ಟೆಯ ಏಕಸ್ವಾಮಿತ್ವಕ್ಕೆ, ಏಕಸ್ವಾಮೀಕರಣಕ್ಕೆ ಅವಕಾಶ ಮಾಡಿಕೊಡಬಹುದು. ಏಕಸ್ವಾಮ್ಯದ ಬೆಳವಣಿಗೆಯು ಅಸಮಾನತೆಯನ್ನು ಉಲ್ಬಣಗೊಳಿಸುತ್ತದೆ. ಜಿಎಸ್‌ಟಿ ಬಗ್ಗೆ ಉದ್ದಿಮೆ ವಲಯವು ಎಲ್ಲಿಲ್ಲದ ಆಸಕ್ತಿಯನ್ನು ತಳೆದಿದೆ. ಸಾಮಾಜಿಕ ಅಸಮಾನತೆಯನ್ನು ಲಾಗಾಯ್ತಿನಿಂದ ಹೊತ್ತುಕೊಂಡು ಬರುತ್ತಿರುವ ನಮ್ಮಂತಹ ಸಮಾಜದಲ್ಲಿ ಒಂದು ಮಾರುಕಟ್ಟೆ ಅನ್ನುವುದು ಉಳ್ಳವರಿಗೆ ಮಾತ್ರ ಒಳಿತುಂಟು ಮಾಡಬಹುದು. ಉಳಿದವರಿಗೆ ಅದರಿಂದ ಕೇಡು ಅಧಿಕ. ಏಕೆಂದರೆ ಉದ್ದಿಮೆಗಾರರಿಗೆ ಸರಕುಗಳ ಬೆಲೆಗಳ ಮೇಲೆ ಸಂಪೂರ್ಣ ಸ್ವಾಮ್ಯ ಇಲ್ಲಿ ಸಾಧ್ಯವಾಗುತ್ತದೆ. ಮಾಹಿತಿ ಅಪರಿಪೂರ್ಣತೆಯಿಂದ ಕೂಡಿರುವ ನಮ್ಮ ಸಮಾಜದಲ್ಲಿ ವಾಣಿಜ್ಯೋದ್ಯಮಿಗಳಿಗೆ ಗ್ರಾಹಕರನ್ನು ಶೋಷಿಸುವುದು ಸುಲಭದ ಕೆಲಸವಾಗಿಬಿಡುತ್ತದೆ.



ಬೃಹತ್ತಾದುದು ಬೃಹತ್ತಾಗಿಯೇ ಕುತ್ತನ್ನು ತರುವ ಸಾಧ್ಯತೆಯಿದೆ. ಮಾರುಕಟ್ಟೆಯಲ್ಲಿ ಕುಸಿತ ಉಂಟಾದರೆ ಅದರ ಪರಿಣಾಮಗಳು ಒಟ್ಟು ಆರ್ಥಿಕತೆಯ ಮೇಲುಂಟಾಗುತ್ತದೆ. ಜನಸಾಮಾನ್ಯರ ಬದುಕು ಮೂರಾಬಟ್ಟೆಯಾಗುತ್ತದೆ. ನಮ್ಮ ದೇಶವು

೨೦೦೮ರ ಜಾಗತಿಕ ಮಾರುಕಟ್ಟೆ ಕುಸಿತದ ತೀವ್ರ ಪರಿಣಾಮಕ್ಕೆ ಒಳಗಾಗಲಿಲ್ಲ. ಇದಕ್ಕೆ ಕಾರಣವಾದ ಒಂದು ಸಂಗತಿಯೆಂದರೆ ನಮ್ಮ ಮಾರುಕಟ್ಟೆಯ ಬಹುರೂಪಿ ಸ್ವರೂಪ. ನಮ್ಮ ಮಾರುಕಟ್ಟೆಯ ಬಹುರೂಪಿತನವು ಕೇವಲ ಪ್ರಾದೇಶಿಕವಾದುದು ಮಾತ್ರವಲ್ಲ, ಅದು ಸರಕು ವಿಶಿಷ್ಟವಾದುದೂ ಆಗಿದೆ. ಕರ್ನಾಟಕವನ್ನೇ ತೆಗೆದು ಕೊಂಡರೆ ಹೈದರಾಬಾದ್ ಕರ್ನಾಟಕ ತೊಗರಿಗೆ ವಿಶಿಷ್ಟವಾದ ಮಾರುಕಟ್ಟೆಯಾಗಿದ್ದರೆ ವಿಜಯಪುರ-ಬಾಗಲಕೋಟೆ ಪ್ರದೇಶವು ಹಣ್ಣುಗಳ ಮಾರುಕಟ್ಟೆಗೆ ಪ್ರಸಿದ್ಧವಾಗಿದೆ. ಬ್ಯಾಡಗಿ ಮೆಣಸಿನಕಾಯಿ ಮಾರುಕಟ್ಟೆ, ಕೊಡಗು-ಚಿಕ್ಕಮಗಳೂರು-ಹಾಸನ ಕಾಫಿ ಮಾರುಕಟ್ಟೆ, ಸೊರಬ, ಸಾಗರ, ಶಿವಮೊಗ್ಗ ಅಡಿಕೆ ಮಾರುಕಟ್ಟೆ - ಹೀಗೆ ವಿವಿಧ ಪ್ರದೇಶಗಳು ವಿವಿಧ ಸರಕುಗಳಿಗೆ ವಿಶಿಷ್ಟವಾದ ಮಾರುಕಟ್ಟೆಗಳಾಗಿವೆ. ಒಂದು ಮಾರುಕಟ್ಟೆಯಲ್ಲಿ ಕುಸಿತ ಉಂಟಾದರೆ ಆರ್ಥಿಕತೆಯನ್ನು ಮತ್ತೊಂದು ಮಾರುಕಟ್ಟೆ ರಕ್ಷಿಸುತ್ತದೆ. ಆದರೆ ಒಂದು ಮಾರುಕಟ್ಟೆ - ಒಂದು ಆರ್ಥಿಕತೆಯಲ್ಲಿ ಯಾವುದೇ ಕಾರಣಕ್ಕೆ ಮಾರುಕಟ್ಟೆ ಕುಸಿದರೆ ಅದರ ಪರಿಣಾಮ ಇಡೀ ಆರ್ಥಿಕತೆಯ ಮೇಲಾಗುತ್ತದೆ. ಬೃಹತ್ತಾದುದು ತರುವ ಸಂಕಷ್ಟಗಳು ಬೃಹತ್ತಾಗೇ ಇರುತ್ತವೆ.




**ಉದ್ಯಮಪತಿಗಳಿಗೆ ವರವಾಗುವ ಕ್ರಮ !**

ಜಿಎಸ್‌ಟಿಯನ್ನು ಉದ್ಯಮಪತಿಗಳು ಇನ್ನಿಲ್ಲದಂತೆ ಸ್ವಾಗತಿಸುತ್ತಿದ್ದಾರೆ. ಭಾರತವು ಸೂಪರ್ ಪವರ್ ಆಗಲಿಕ್ಕೆ ಇದು ಅವಶ್ಯಕ ಎಂದು ವಾದಮಾಡಲಾಗುತ್ತಿದೆ. ಬೃಹತ್ ಬಂಡವಳಿಗರಿಗೆ ಇದು ಭಾಗ್ಯದ ಬಾಗಿಲನ್ನು ತೆರೆಯುತ್ತದೆ. ಮಾರುಕಟ್ಟೆಯಿಂದ ಸಣ್ಣಪುಟ್ಟ ಮಾರಾಟಗಾರರನ್ನು ಹೊಡೆದೋಡಿಸಲು ಇದು ಅನುಕೂಲ ಒದಗಿಸುತ್ತದೆ. ಹಳ್ಳಿಗಳಲ್ಲಿ, ನಗರ, ಪಟ್ಟಣಗಳಲ್ಲಿ ಮಾರಾಟ ನಡೆಸುವ ವ್ಯಾಪಾರಗಳಿಗೆ ಜಿಎಸ್‌ಟಿ ಆಳ್ವಿಕೆಯಲ್ಲಿ ಅವಕಾಶವಿಲ್ಲದಂತಾಗುತ್ತದೆ. ಈ ಕ್ರಮವು ಹೆಚ್ಚು ಹೆಚ್ಚು ನಿರುದ್ಯೋಗಿಗಳನ್ನು ಸೃಷ್ಟಿಸುತ್ತದೆ. ಜಿಎಸ್‌ಟಿ ಜೊತೆಯಲ್ಲಿ ಡಿಜಿಟಲೈಸೇಶನ್ ಸೇರಿಕೊಂಡರೆ ಗ್ರಾಮೀಣ ಚಿಲ್ಲರೆ ವ್ಯಾಪಾರಗಾರರು ಉಳಿಯುವುದು ಕಷ್ಟಸಾಧ್ಯ. ಉದ್ಯಮಪತಿಗಳಿಗೆ ಇದು ವರವಾದರೆ ಚಿಲ್ಲರೆ ವ್ಯಾಪಾರಿಗಳಿಗೆ, ತಲೆಯ ಮೇಲೆ ಹೊತ್ತು, ತಳ್ಳುಗಾಡಿಯಲ್ಲಿ ಮಾರಾಟ ಮಾಡುವವರಿಗೆ ಇದು ಶಾಪವಾಗುತ್ತದೆ.

ಭಾರತದ ಮೂಲದ್ರವ್ಯ ಇರುವುದೇ ಅದರ ವೈವಿಧ್ಯತೆಯಲ್ಲಿ. ವೈವಿಧ್ಯಮಯ ಸರಕುಗಳು, ವೈವಿಧ್ಯಮಯ ಮಾರುಕಟ್ಟೆಗಳು, ಋತುಮಾನವನ್ನು ಅವಲಂಬಿಸಿದ ಸರಕು-ಮಾರುಕಟ್ಟೆಗಳು, ಪ್ರದೇಶ-ವಿಶಿಷ್ಟ ಮಾರುಕಟ್ಟೆಗಳು - ಹೀಗೆ ಬಹುವಚನ ಮಾರುಕಟ್ಟೆ ವ್ಯವಸ್ಥೆಯು ನಮ್ಮ ನಾಗರಿಕತೆಯ, ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದೆ. ಆದರೆ ಏಕರೂಪಿ, ಏಕಘನಾಕೃತಿಯ ಮಾರುಕಟ್ಟೆಯು ನಮ್ಮ ಸಂಸ್ಕೃತಿಯನ್ನು ನಾಶ ಮಾಡುತ್ತದೆ.

ಬೃಹತ್ ಮಾರುಕಟ್ಟೆ, ಒಂದು ತೆರಿಗೆ, ಒಂದು ಆರ್ಥಿಕತೆ, ಒಂದು ಬ್ಯಾಂಕು ನಮ್ಮ ಸಮಾಜದ ಮೂಲ ಲಕ್ಷಣಗಳೇನಲ್ಲ. ನಮ್ಮ ಮಾರುಕಟ್ಟೆ ವಿಶದವಾದುದು (ವಿಶಾಲ) ಮತ್ತು ವಿಶಿಷ್ಟವಾದುದು. ಈ ವಿಶಿಷ್ಟತೆಯನ್ನು ಜಿಎಸ್‌ಟಿಯು ತೊಡೆದುಹಾಕಿಬಿಡುತ್ತದೆ.

ಈ ಜಿಎಸ್‌ಟಿಗೆ ಪೂರಕವಾಗಿ ಫೋರ್ ಲೇನ್-ಸಿಕ್ಸ್ ಲೇನ್ ಎಕ್ಸ್‌ಪ್ರೆಸ್ ಹೈವೇಗಳು ಕೆಲಸ ಮಾಡುತ್ತವೆ. ಇವೆಲ್ಲಕ್ಕೂ ಡಿಜಿಟಲೈಸೇಶನ್ ಕೂಡ ನೆರವಾಗುತ್ತದೆ. ಈ ಎಲ್ಲ ಸಂಗತಿಗಳು ಸಮಾಜದಲ್ಲಿ ಅಸಮಾನತೆಯನ್ನು ಉಲ್ಬಣಗೊಳಿಸುತ್ತವೆ. ಅಖಂಡ ಮಾರುಕಟ್ಟೆ ಅನ್ನುವುದು ಉಳ್ಳವರ ಹಿತಾಸಕ್ತಿಗಳನ್ನು ಮಾತ್ರ ಕಾಯಬಲ್ಲದು. ಮುಂದೆ ತೋರಿಸುವಂತೆ ಇದೊಂದು ಪ್ರತಿಗಾಮಿ ತೆರಿಗೆಯಾಗಿದೆ.

**ಇದೊಂದು ಪ್ರತಿಗಾಮಿ ತೆರಿಗೆ**

ಈಗಾಗಲೆ ಹೇಳಿರುವಂತೆ ಇದು ಅಪ್ರತ್ಯಕ್ಷ ತೆರಿಗೆ. ನೇರ ತೆರಿಗೆಗಳಿಗೆ ಭಿನ್ನವಾಗಿ ಇಲ್ಲಿ ಜನರ ವರಮಾನದ ಆಧಾರದಲ್ಲಿ ತೆರಿಗೆ ವಿಧಿಸುವುದಿಲ್ಲ. ಉದಾಹರಣೆಗೆ ನೇರ ತೆರಿಗೆಗಳಲ್ಲಿ ಅಧಿಕ ವರಮಾನ, ಅಧಿಕ ತೆರಿಗೆ ನಿಯಮವಿರುತ್ತದೆ. ಆದರೆ ಅಪ್ರತ್ಯಕ್ಷ ತೆರಿಗೆಗಳಲ್ಲಿ ಶ್ರೀಮಂತರಿರಲಿ ಬಡವರಿರಲಿ ತೆರಿಗೆ ದರ ಒಂದೇ ಇರುತ್ತದೆ. ಬಡವರು, ಕಾರ್ಮಿಕರು, ಭೂರಹಿತ ಕೃಷಿ ದಿನಗೂಲಿಗಳು ತಮ್ಮ ದುಡಿಮೆಯಲ್ಲಿ ಸರಿಸುಮಾರು ಶೇ. ೮೦ರಿಂದ ಶೇ. ೯೦ರಷ್ಟನ್ನು ಅನುಭೋಗಿ ಸರಕುಗಳ ಮೇಲೆ ವ್ಯಯಿಸುತ್ತಾರೆ. ಜಿಎಸ್‌ಟಿಯು ಮೂಲತಃ ಅನುಭೋಗದ ಮೇಲಿನ ತೆರಿಗೆ. ಇದರಿಂದಾಗಿ ಇದರ ಹೊರೆ ಹೆಚ್ಚು ಹೆಚ್ಚು ಬಡವರ ಮೇಲೆ, ಕಾರ್ಮಿಕರ ಮೇಲೆ, ರೈತಾಪಿಗಳ ಮೇಲೆ ಬೀಳುತ್ತದೆ. ಒಂದು ಅಂದಾಜಿನ ಪ್ರಕಾರ ನಮ್ಮ ದೇಶದಲ್ಲಿ ಒಟ್ಟು ತೆರಿಗೆ ಮೊತ್ತದಲ್ಲಿ ನೇರ ತೆರಿಗೆಗಳ ಪಾಲು ಶೇ. ೩೭ರಷ್ಟಿದ್ದರೆ ಅಪ್ರತ್ಯಕ್ಷ ತೆರಿಗೆಗಳ ಪಾಲು ಶೇ. ೬೩. ನಮ್ಮ ಕೇಂದ್ರ ಸರ್ಕಾರವು ೨೦೧೬ರಲ್ಲಿ ಸಂಪತ್ತಿನ ಮೇಲಿನ ತೆರಿಗೆಯನ್ನು ರದ್ದುಮಾಡಿದೆ ಮತ್ತು ಕಾರ್ಪೊರೇಟ್ ತೆರಿಗೆ ದರಗಳನ್ನು ಮುಂದಿನ ನಾಲ್ಕು ವರ್ಷಗಳಲ್ಲಿ ಶೇ. ೩೦ರಿಂದ ಶೇ. ೨೫ಕ್ಕೆ ಇಳಿಸುವುದಾಗಿ ಆಶ್ವಾಸನೆ ನೀಡಿದೆ. ಸರ್ಕಾರವು ಹೆಚ್ಚು ಹೆಚ್ಚು ಅಪ್ರತ್ಯಕ್ಷ ತೆರಿಗೆಗಳನ್ನು ಅವಲಂಬಿಸುವ ಕ್ರಮಗಳನ್ನು ಜಾರಿಗೊಳಿಸುತ್ತಿದೆ. ಅದರ ತೆರಿಗೆ ನೀತಿಯು ಉದ್ಯಮಪತಿಗಳ ಪರವಾಗಿದೆ.

**ಸಂವಿಧಾನದ ಹಕ್ಕಿನ ಮೇಲಿನ ಆಕ್ರಮಣ**

ಇದೊಂದು ಕಡುಕೇಂದ್ರೀಕರಣದ ಕ್ರಮವಾಗಿದೆ. ಈ ಕಡುಕೇಂದ್ರೀಕರಣಕ್ಕೆ ಪೂರಕವಾಗಿ ಕೇಂದ್ರ ಸರ್ಕಾರವು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದಲ್ಲಿ ಅದರ ಐದು ಸಹವರ್ತಿ ಬ್ಯಾಂಕುಗಳನ್ನು ವಿಲೀನಗೊಳಿಸಿ ಒಂದು ಬೃಹತ್ ಬ್ಯಾಂಕನ್ನು ಸ್ಥಾಪಿಸುತ್ತಿದೆ. ಪ್ರಚ್ಛನ್ನ ಕ್ರಮಗಳ ಮೂಲಕ ಕೇಂದ್ರವು ಹಿಂದಿಯನ್ನು ದಕ್ಷಿಣದ 'ಕಪ್ಪು' ರಾಜ್ಯಗಳ ಮೇಲೆ ಹೇರುತ್ತಿದೆ. ದೇಶಕ್ಕೆಲ್ಲ ಒಂದೇ ವೈದ್ಯಕೀಯ ಪ್ರವೇಶ ಪರೀಕ್ಷೆಯನ್ನು (ನೀಟ್) ನಡೆಸುವ ಕ್ರಮ ಜಾರಿಗೆ ಬರುತ್ತಿದೆ. ದೇಶದ ಶಾಲಾ-ಕಾಲೇಜುಗಳಿಗೆಲ್ಲ ಒಂದೇ ಪಠ್ಯಕ್ರಮ (ಸಿಬಿಎಸ್‌ಸಿ)ವನ್ನು ನಿಯಮಿಸುವ ಕೆಲಸಗಳು ನಡೆಯುತ್ತಿವೆ. ದೇಶ ಭಾಷೆಗಳ ಬೆಳವಣಿಗೆಗೆ ನೀಡುವ ಸಂಪನ್ಮೂಲಕ್ಕಿಂತ ಅಧಿಕ ಸಂಪನ್ಮೂಲವನ್ನು ದೇಶದಲ್ಲಿ ಶೇ. ೫ಕ್ಕಿಂತ ಕಡಿಮೆ ಜನರು ಮಾತನಾಡುತ್ತೇವೆಂದು ಸುಳ್ಳು ಸುಳ್ಳೇ ಹೇಳುತ್ತಿರುವ ಸಂಸ್ಕೃತಕ್ಕೆ ನೀಡಲಾಗುತ್ತಿದೆ. ಈ ಎಲ್ಲ ಕಡುಕೇಂದ್ರೀಕರಣ ಕ್ರಮಗಳಿಗೆ ಕಳಸಪ್ರಾಯವಾಗಿ ಜಿಎಸ್‌ಟಿ ರಾಜ್ಯಗಳ ಸಂವಿಧಾನಾತ್ಮಕ ಅಧಿಕಾರವನ್ನು ಕಸಿದುಕೊಂಡುಬಿಡುತ್ತದೆ. ನಮ್ಮ ಸಂವಿಧಾನದ ಮೂಲ ರಚನೆಯ ಸಂಗತಿಯೆಂದರೆ ಒಕ್ಕೂಟ ವ್ಯವಸ್ಥೆ. ಈ ಒಕ್ಕೂಟ ವ್ಯವಸ್ಥೆಗೆ ಧಕ್ಕೆ ಉಂಟಾಗಿದೆ ಎಂದರೆ ಅದು ನಮ್ಮ ಸಂವಿಧಾನದ ಮೂಲ ರಚನೆಯ ಉಲ್ಲಂಘನೆ ಎಂದು ಹೇಳಬಹುದು.

ಇನ್ನುಮೇಲೆ ಜನರ ಆಸೆ-ಆಕಾಂಕ್ಷೆಗಳಿಗೆ, ಬೇಕು-ಬೇಡಗಳಿಗೆ ಅನುಗುಣವಾಗಿ (ನೀಡ್ ಬೇಸ್ಡ್) ತಮ್ಮ ಆರ್ಥಿಕ ನೀತಿಯನ್ನು ರೂಪಿಸುವುದು ರಾಜ್ಯಗಳಿಗೆ ಸಾಧ್ಯವಾಗುವುದಿಲ್ಲ. ಏಕೆಂದರೆ ಅವುಗಳು ಜಿಎಸ್‌ಟಿ ವ್ಯವಸ್ಥೆಯಲ್ಲಿ ಕೇಂದ್ರವು ನಿರ್ದಿಷ್ಟಪಡಿಸುವ ಮೊತ್ತಕ್ಕೆ ಕ್ರಿಯಾ ಯೋಜನೆಯನ್ನು ರೂಪಿಸಬಹುದೇ ವಿನಾ ಜನರ ಯೋಜನೆಯನ್ನು ರೂಪಿಸುವುದು ಸಾಧ್ಯವಾಗುವುದಿಲ್ಲ. ತೆರಿಗೆಗಳ ಮೂಲಕ ಎಷ್ಟು ಸಂಪನ್ಮೂಲ ಸಂಗ್ರಹವಾಗಬಹುದು ಎಂಬುದನ್ನು ಕೇಂದ್ರವು ಪ್ರತಿ ವರ್ಷ ಅಂದಾಜು ಮಾಡಿ ರಾಜ್ಯಗಳಿಗೆ ಮಾಹಿತಿ ನೀಡುತ್ತದೆ. ಅದರಂತೆ ರಾಜ್ಯಗಳು ನಿರ್ದಿಷ್ಟಪಡಿಸಿದ ಮೊತ್ತಕ್ಕೆ ಮಾತ್ರ ಯೋಜನೆ ಸಿದ್ಧಪಡಿಸಬೇಕು. ಅವು ತಮ್ಮ ರಾಜಕೀಯ ಸಿದ್ಧಾಂತಕ್ಕೆ ಅನುಗುಣವಾಗಿ ಸ್ವತಂತ್ರವಾಗಿ ಆರ್ಥಿಕ ನೀತಿಗಳನ್ನು ಅನುಸರಿಸುವುದು ಇನ್ನುಮೇಲೆ ಸಾಧ್ಯವಾಗುವುದಿಲ್ಲ. ಇನ್ನುಮೇಲೆ ಬಂಡವಾಳವನ್ನು ವಿದೇಶಗಳಿಂದ, ರಾಜ್ಯದ ಹೊರಗಿನಿಂದ ಆಕರ್ಷಿಸಲು ತೆರಿಗೆಗಳಲ್ಲಿ ವಿನಾಯಿತಿ, ಉತ್ತೇಜನಾತ್ಮಕ ರಿಯಾಯಿತಿಗಳು, ವಿನಾಯಿತಿ ನೀಡುವುದಕ್ಕೆ ಬರುವುದಿಲ್ಲ. ರಾಜ್ಯಗಳು ಕೇಂದ್ರದ ಹಂಗಿನಲ್ಲಿ ಆಡಳಿತ ನಡೆಸುವ ಸ್ಥಿತಿಗೆ ಕಡುಕೇಂದ್ರೀಕರಣ ದೂಡುತ್ತದೆ. ಈ ಕಡುಕೇಂದ್ರೀಕರಣದ ಅಸ್ತ್ರವೇ ಜಿಎಸ್‌ಟಿ.

**ಡಾ॥ ಟಿ. ಆರ್. ಚಂದ್ರಶೇಖರ**

ಸಮಾಲೋಚಕರು, ನಾಲ್ಕನೆಯ ರಾಜ್ಯ ಹಣಕಾಸು ಆಯೋಗ
ದಕ್ಷಿಣ ಭಾಗ, ಮೂರನೆಯ ಮಹಡಿ, ಖನಿಜ ಭವನ
ರೇಸ್ ಕೋರ್ಸ್ ರಸ್ತೆ, ಬೆಂಗಳೂರು - ೫೬೦ ೦೦೧



# ನಿಸರ್ಗದ ಇಷ್ಟ ರೈತನ ಕಷ್ಟ

ವಾಚಮನ್ನನ ಹೆಂಡತಿ ಗಂಗವ್ವ ಮೊದಲೇ ಗಯ್ಯಾಳಿ! ಗಂಡನೊಡನೆ ಜಗಳವಾಡುತ್ತಿದ್ದಳು. ಕಾರಣವಿಷ್ಟೆ; ಒಂದು ಕೊಡ ನೀರು ಬಕೆಟ್ಟಿನಲ್ಲಿ ಹಾಕಿಕೊಂಡು ಗಂಡ ಜಳಕ ಮಾಡುತ್ತಿದ್ದ! "ದಿನಾ ಜಳಕಾ ಮಾಡಾಕ ನೀನೇನ್ ಬ್ರಾಮ್‌ನ ಏನ್", ನಾ ಒಂದ ಕೊಡಾ ನೀರ ತರಬೇಕಾದ್ರ ಕತಿ ಕರೀತೈತಿ". ಎಂದು 'ಬಗಲಲ್ಲೊಂದು ತಲೆಯ ಮೇಲೊಂದು' ಕೈಯಲ್ಲೊಂದು ಪ್ಲಾಸ್ಟಿಕ್ ಕೊಡ ಜೋತು ಬಿಟ್ಕೊಂಡ ನೀರಿಗೆ ಹೋದಳು. ಹಳೆ ಪ್ಲೆಕ್ಸ ಗೋಣಿ ಚೀಲ ಹೊದಿಸಿದ ಒಂದು ಸಣ್ಣ ಗುಡಿಸಲು, ಅಂಥದೇ ಹೊದಿಕೆ ಹೊದಿಸಿ ಶೌಚಾಲಯ ಕಟ್ಟಿಕೊಂಡು ದಂಪತಿಗಳು ವಾಸ ಮಾಡಿದ್ದರು. ಸಾಕಷ್ಟು ನೀರು ಕಾಣದ ಕಾರಣ ಶೌಚಾಲಯ ದುರ್ವಾಸನೆ ಹಿಡಿಸಿತ್ತು.

ಬೆಳಗಿನ ವಿಹಾರಕ್ಕೆಂದು ನಾನು ನಡೆದಾಗ ಮತ್ತೊಬ್ಬ ವಾಚಮನ್ ಬಂಗ್ಲೆ ಮುಂದೆ ಬೆಳೆದ 'ಲಾನ್' ಗೆ ಪೈಪ್‌ನಿಂದ ಬುಸ್‌ಗಟ್ಟಿ ಹರಿದು ಚಿಮ್ಮುತ್ತಿದ್ದ ನೀರು ಹೇರಳವಾಗಿ ಬಿಡುತ್ತಿದ್ದ ನೀರು ಹೆಚ್ಚಾಗಿ ಹರಿದು ಗಟರು ತುಂಬಿ ಹರಿಯುತ್ತಿತ್ತು!

ಆ ಗಯ್ಯಾಳಿಯ ಖಾಲಿ ಕೊಡ, ಅವಳ ಗಂಡನ ಸ್ನಾನ, ಅವಳ ಚಿತ್ರ ಕಣ್ಮುಂದೆ ಬಂತು! ನೀರಿಗಾಗಿ ವರ್ಷಾನುಗಟ್ಟಲೆ ರೈತರು ಪ್ರತಿಭಟನೆ ನಡೆಸುವುದು, ಪೊಲೀಸರು ದಯಾಮಯ ಇಲ್ಲದೆ ರೈತರನ್ನು ಹೊಡೆಯುವುದು ನೆನಪಿಗೆ ಬಂತು. ಮಹಾದಾಯಿ, ಕೃಷ್ಣೆ ಕಾವೇರಿ ಸಲುವಾಗಿ ಸಾವಿರ ಸಾವಿರ ಜನ ಪ್ರತಿಭಟನೆ ಮಾಡುವುದು ಟೈರಿಗೆ ಬೆಂಕಿ ಇಟ್ಟು ಕಾರ್ಮೋಡಿನಂತೆ ಹೊಗೆ ಆಕಾಶಕ್ಕೇರುವದು ನೆನಪಾಯಿತು. ನೆನಪಿಸಿದೆ. ಅದೇ ರೈತರು ಕುಡಿಯುವ ನೀರಿಗಾಗಿ ಪೊಲೀಸರೊಂದಿಗೆ ಗುದ್ದಾಡುವದು ಚದುರಿದ ದನಗಳಂತೆ ಜನ ಪೊಲೀಸರಿಗೆ ಅಂಜಿ ಓಡುವದನ್ನು ಮನಸ್ಸು ಮೆಲಕು ಹಾಕಿತು! ನಾನು ಸಣ್ಣವನಿದ್ದಾಗ ಮಲಪ್ರಭೆ ತುಂಬಿ ಹರಿಯುತ್ತಿತ್ತು. ನಾನು ಗೆಳೆಯರೊಂದಿಗೆ ನದಿಗೆ ಹಾರಿ ಈಜಾಡುವದು. ಒಡಲು ತುಂಬಿ ನೀರು ಹರಿಯುವದನ್ನು ಜ್ಞಾಪಿಸಿದೆ. ಅಷ್ಟೇ ಏಕೆ ನನ್ನ ಹಳ್ಳಿಗೆ ಹೋದಾಗ ಹಳ್ಳ ತುಂಬಿ ಹರಿಯುತ್ತಿತ್ತು. ಭತ್ತದ ಗದ್ದೆಗಳಲ್ಲಿ ಕೆರೆಗಳಲ್ಲಿ ನೀರು ನಿಲ್ಲುತ್ತಿತ್ತು. 'ರಂಗಿ' ಭೂಮಿಯಲ್ಲಿ ನೀರು ಜವಳುಗಟ್ಟಿ ಬೇಸಿಗೆಯಲ್ಲಿ ಕೂಡ ಹರಿಯುತ್ತಿತ್ತು. ಒಂದೆರಡು ಆಳಿನಷ್ಟು ಬಾವಿ ತೋಡಿದರೆ ನೀರಿನ ಸೆಲೆ ಜಿಗಿಯುತ್ತ ಹರಿದು ಆ ಬಾವಿ ತುಂಬುತ್ತಿತ್ತು. ಈಗ ನನ್ನ ಹಳ್ಳಿಯ ಹಳ್ಳ ಮಾಯವಾಗಿ ಬರಡು ಹೊಲವಾಗಿದೆ. ಕೃಷ್ಣೆ, ಮಲಪ್ರಭೆ, ಘಟಪ್ರಭೆ ಇತ್ಯಾದಿ ನದಿಗಳಲ್ಲಿ ನೀರು ಹರಿಯದೆ ಒಣಗಿ ಹೋಗಿವೆ.

ನಮ್ಮ ರೈತನ ಬೆಳೆ ನೀರು ಕಾಣದೆ ಹಳದಿಯಾಗಿದೆ. ಕಬ್ಬಿನ ಬೆಳೆ ಒಣಗಿ ಹೋಗಿದೆ. ಬದನೆ, ಬೆಂಡಿ, ಮೂಲಂಗಿ ಬೆಳೆಗಳಿಗೆ ರೈತ ಔಷಧ ಸಿಡಿಸಿದರೂ ತರಕಾರಿ ಬೆಳೆಯ ಎಲೆಗಳನ್ನು ಕೀಟಗಳು ತಿಂದು ಸಾಣಿಗೆಯಂತೆ ತೂತು ತೂತು ಬಿದ್ದಿವೆ. ಒಂದು ಎಲೆ ಕೂಡ ಚೆನ್ನಾಗಿಲ್ಲ. ರಸಾಯನ ಗೊಬ್ಬರ ಹಾಕಿದರೂ ನೀರಿನ ಕೊರತೆಯಿಂದ ಬೆಳೆ ನಾಶವಾಗಿದೆ.

ನೀರು ನೀರಿಗಾಗಿ ಹಳ್ಳಿಯ ಹೆಂಗಳೆಯರಲ್ಲಿ ಜಗಳ, ರಾಜ್ಯ ರಾಜ್ಯಗಳಲ್ಲಿ ತಂಟೆ, ರಾಷ್ಟ್ರ ರಾಷ್ಟ್ರಗಳಲ್ಲಿ ಸಮರ! ಇತ್ತ ಕಾರಖಾನೆಯವರು ಹೊಗೆ ಉಗುಳಿಸುತ್ತ, ಕಾರಖಾನೆಯ ಹೊಲಸು ನೀರು ನದಿಗಳಿಗೆ ಬಿಡುತ್ತ, ನದಿಗಳು ಗಟಾರಿನಂತೆ ಹರಿಯುವದು ಇಂದಿನ ವಾಸ್ತವಿಕ ಸತ್ಯ!

ಇತ್ತ ರೈತ ರಸಗೊಬ್ಬರ, ಔಷಧ ಹಾಕಿದ್ದರಿಂದ ರೈತನ ಹೊಲಗದ್ದೆಗಳು ಜ್ವರ ಬಂದಂತಾಗಿ ನರಳುತ್ತಿವೆ. ಭೂಮಿಯಲ್ಲಿ ಹುಳ ಹುಪ್ಪಡಿ, ಮಣ್ಣು ಹದ ಮಾಡುವ ಹುಳಗಳು, ಎರೆಹುಳಗಳು ಸತ್ತು ಹೋಗಿವೆ. ಅಂಥ ಭೂಮಿ ಹೇಗೆ ಫಲವತ್ತಾಗಬೇಕು ಬೆಳೆ ಕೈಕೊಡುತ್ತದೆ. ರೈತ ನೇಣಿಗೆ ಶರಣಾಗುತ್ತಾನೆ.

ಹಾಗೆ ವಾಯುವಿಹಾರಕ್ಕೆ ಮುಂದೆ ಸಾಗಿದೆ. ಬೇಲಿಯ ಮೇಲೆ ನೀಲಿ ಹೂಗಳು ಅರಳಿ ನಗುತ್ತಿದ್ದವು. ಅವುಗಳ ಎಲೆಗಳು ತೂತು ಬಿದ್ದಿರಲಿಲ್ಲ. ಎಲೆಗಳು ಭೂಮಿಗೆ ಉದುರಿ ಭೂಮಿ ಫಲವತ್ತಾಗಿ ಕೇಸು ಎಲೆಗಳು ಮರದಗಲ ಕೊನರಿ ಹಸಿರಾಗಿ ರಾಶಿ ರಾಶಿಯಾಗಿ ಬೆಳೆದು ಸಂಭ್ರಮದಿಂದ ತಲೆಯತ್ತಿ ನಿಂತಿದ್ದವು. ಒಂದು ಎಲೆಯನ್ನು ಕೂಡ ಕೀಟಗಳು ತಿಂದಿರಲಿಲ್ಲ. ಲಂಟಾನ ಕಂಟಿಗಳು ಸಮೃದ್ಧವಾಗಿ ಬೆಳೆದು ಬಣ್ಣ ಬಣ್ಣದ ಹೂವು ಅರಳಿಸಿಕೊಂಡು ನಗುತ್ತಿದ್ದವು. ಅಲ್ಲಿಯೂ ಕೀಟಗಳು ಎಲೆ ತಿಂದಿರಲಿಲ್ಲ. ಅವುಗಳಿಗೆ ದಿನಾಲು ಯಾರೂ ನೀರು ಹೊಡೆಯುವುದಿಲ್ಲ. ಗುಬ್ಬಿ ಹಿಂಡುಗಳು ಹಾರಿ ಬಂದು ಅಲ್ಲಿ ಜೋಕಾಲಿಯಾಡುತ್ತವೆ. ನನ್ನ ಕೈತೋಟದಲ್ಲಿ ದಿನಾಲು ನೀರು ಸಿಂಪಡಿಸಿದರೂ ಅವು ನೆಟ್ಟಗೆ ಹೂವುಬಿಡುವದಿಲ್ಲ. ತಪ್ಪಿ ಮರೆತು ಒಂದು ದಿನ ನೀರು ಸಿಂಪಡಿಸದಿದ್ದರೆ ಬಾಡಿ ನೆಲ ಕಚ್ಚುತ್ತವೆ.



ನೀರು ಹಾಕದ ಲಂಟಾನ, ಕೇಸು, ಬೇಲಿ ಮೇಲಿನ ನೀಲಿ ಹೂಗಳ ರಕ್ಷಣೆ ನಿಸರ್ಗ ಮಾಡುತ್ತಿದೆ. ಆ ಕಂಟಿ ಬಳ್ಳಿ ಗಿಡಗಳ ಎಲೆಗಳಿಂದ ನೈಸರ್ಗಿಕ ಬೆಳೆ ಸಮೃದ್ಧವಾಗಿ ಬೆಳೆದು ನಗುತ್ತಿದೆ.

ರೈತ ಅಹೋ ರಾತ್ರಿ ಹೊಲಗದ್ದೆಗಳಿಗೆ ಔಷಧ ಹೊಡೆದರೂ ಬೆಳೆ ಕೈ ಕೊಡುತ್ತದೆ. ರೈತ ಬರಡು ಭೂಮಿಯಲ್ಲಿ ಕುಳಿತು ಅಳುತ್ತಿದ್ದಾನೆ. ಪತ್ರಿಕೆಗಳಲ್ಲಿ ನೇಣು ಹಾಕಿಕೊಂಡ ಸುದ್ದಿಗಳು ಬರುತ್ತಲೇ ಇವೆ!

**ಪುಂಡಲೀಕ ಪಾಟೀಲ**
ವಿದ್ಯಾನಗರ, ಬಾಕ್ಸೈಟ್ ರೋಡ್, ಬೆಳಗಾವಿ.

# ಎನ್. ಎಸ್. ಜಿ. - ಭಾರತಕ್ಕೆ ಸದಸ್ಯತ್ವ?

ಈ ಪರಮಾಣು ಸರಬರಾಜು ಗುಂಪಿನ ಸದಸ್ಯ ರಾಷ್ಟ್ರವಾಗಲು ಬೇಕಾದ ಅರ್ಹತೆ ಏನು ? ಅದನ್ನು ಅರ್ಥಮಾಡಿಕೊಳ್ಳಲು ಅದಕ್ಕೆ ಹಿಂದಿನ ಕೆಲವು ಐತಿಹಾಸಿಕ ಬೆಳವಣಿಗೆಗಳನ್ನು ಸ್ಥೂಲವಾಗಿ ಪರಿಶೀಲಿಸಬೇಕು. ಆ ವೇಳೆಗಾಗಲೆ ಪರಮಾಣು ತಂತ್ರಜ್ಞಾನ ಸಾಕಷ್ಟು ಅಭಿವೃದ್ಧಿಗೊಂಡು ಹಲವಾರು ದೇಶಗಳಲ್ಲಿ ವಿದ್ಯುತ್ ಉತ್ಪಾದನೆ, ಆರೋಗ್ಯ, ಮುಂತಾದ ಅನೇಕ ಶಾಂತಿಯುತ ಉದ್ದೇಶಗಳಿಗಾಗಿಯೂ ಬಳಕೆಯಾಗುತ್ತಿತ್ತು. ಅದರೊಂದಿಗೆ ಅಮೆರಿಕ, ರಷ್ಯ ಅಲ್ಲದೆ ಬ್ರಿಟನ್, ಫ್ರಾನ್ಸ್ , ನಂತರ ಚೈನಾ ಹೀಗೆ ಒಂದಾದ ಮೇಲೊಂದು ರಾಷ್ಟ್ರಗಳು ಪರಮಾಣು ಶಸ್ತ್ರ ಅಭಿವೃದ್ಧಿ ಹಾಗೂ ಶೇಖರಣೆಯಲ್ಲಿ ತೊಡಗಿಕೊಳ್ಳಲಾರಂಭಿಸಿದವು. ಈ ಬೆಳವಣಿಗೆಯ ಬಗ್ಗೆ ಇತರ ರಾಷ್ಟ್ರಗಳಲ್ಲಿ ಆತಂಕ ಉಂಟಾಗಿತ್ತು. ಅದಕ್ಕೆ ಸ್ಪಂದಿಸಿ ಸಂಯುಕ್ತ ರಾಷ್ಟ್ರವು ವಿಶ್ವದಲ್ಲಿ ಪರಮಾಣು ಅಸ್ತ್ರ ಪ್ರಸರಣವಾಗುವುದನ್ನು ತಡೆಗಟ್ಟಲು "ಪರಮಾಣು ಶಸ್ತ್ರ ಪ್ರಸರಣ ನಿಷೇಧ ಒಪ್ಪಂದ"ವನ್ನು ೧೯೭೦ರಲ್ಲಿ ಅಂತರರಾಷ್ಟ್ರೀಯ ಅಣುಶಕ್ತಿ ಪ್ರಾಧಿಕಾರದ ನೇತೃತ್ವದಲ್ಲಿ ಜಾರಿಗೆ ತಂದಿತು. ಅಲ್ಲದೆ ಲ್ಯಾಟಿನ್ ಅಮೆರಿಕ, ಆಫ್ರಿಕ, ಆಗ್ನೇಯ ಏಷ್ಯ, ಮಧ್ಯ ಏಷ್ಯ ಮುಂತಾದ ಪ್ರದೇಶಗಳನ್ನು ಪರಮಾಣು ಶಸ್ತ್ರ ಮುಕ್ತ ವಲಯ ಎಂದು ಘೋಷಿಸಿತು. ಎನ್. ಎಸ್. ಜಿ.ಯ ಉದ್ದೇಶವೂ ಅದೇ ಆಗಿದ್ದುದರಿಂದ ಅದರ ಸದಸ್ಯತ್ವಕ್ಕೆ ಯಾವುದೇ ರಾಷ್ಟ್ರ ಅರ್ಹತೆ ಪಡೆಯಬೇಕಾದರೆ ಅಣ್ವಸ್ತ್ರ ಪ್ರಸರಣ ನಿಷೇಧ ಒಪ್ಪಂದಕ್ಕೆ ಸಹಿ ಹಾಕಿರಬೇಕು ಅಥವಾ ಪರಮಾಣು ಮುಕ್ತವಲಯದ ಸದಸ್ಯ ರಾಷ್ಟ್ರವಾಗಿರಬೇಕು.

**ಡಾ॥ ಎಮ್. ಎಸ್. ಎಸ್. ಮೂರ್ತಿ**



*ಪರಮಾಣು ಸರಬರಾಜುದಾರರ ಗುಂಪಿನ ಸದಸ್ಯ ರಾಷ್ಟ್ರಗಳು (ಕೆಂಪು)*

"ಪರಮಾಣು ಸರಬರಾಜುದಾರರ ಗುಂಪು" (ಎನ್.ಎಸ್.ಜಿ.) ಎಂಬ ಕೆಲವು ರಾಷ್ಟ್ರಗಳ ಒಂದು ವಿಶೇಷ ಒಕ್ಕೂಟದ ಸದಸ್ಯತ್ವಕ್ಕೆ ಭಾರತ ರಾಜತಾಂತ್ರಿಕವಾಗಿ ಬಹಳ ಪ್ರಯತ್ನ ನಡೆಸುತ್ತಿರುವ ಸುದ್ದಿ ಸಾರ್ವಜನಿಕರಲ್ಲಿ ಕುತೂಹಲ ಕೆರಳಿಸಿದೆ. ಏನಿದು ಎನ್.ಎಸ್.ಜಿ. ? ಭಾರತಕ್ಕೆ ಈ ಗುಂಪಿನ ಸದಸ್ಯತ್ವದ ಅವಶ್ಯಕತೆಯಾದರೂ ಏನು ?

ಇಂದು ಪರಮಾಣು ಅಸ್ತ್ರ ಹೊಂದಿರುವ ಕೆಲವೇ ರಾಷ್ಟ್ರಗಳಲ್ಲಿ ಭಾರತವೂ ಒಂದು ಎಂದು ಪರಿಗಣಿಸಲ್ಪಟ್ಟಿದೆ. "ನಗುತ್ತಿರುವ ಬುದ್ಧ" ಎಂಬ ಅಡ್ಡ ಹೆಸರಿನಲ್ಲಿ ಅಂದು ಭಾರತ ಪ್ರಾಯೋಗಿಕವಾಗಿ ಒಂದು "ಶಾಂತಿಯುತ ಪರಮಾಣು ಸ್ಫೋಟ"ವನ್ನು ಯಶಸ್ವಿಯಾಗಿ ಕೈಗೊಂಡಿತು. ಆದರೆ ಆ ಪ್ರಯೋಗ ಪರಮಾಣು ಅಸ್ತ್ರ ಅಭಿವೃದ್ಧಿಪಡಿಸುವ ಕಾರ್ಯಕ್ರಮಕ್ಕೆ ಒಂದು ಸೋಗು ಎಂದು ಇತರ ದೇಶಗಳು ಅನುಮಾನ ವ್ಯಕ್ತಪಡಿಸಿದವು. ಅದರಿಂದಾಗಿ ಏಷ್ಯ ಖಂಡದಲ್ಲಿ ಪರಮಾಣು ಅಸ್ತ್ರ ಪೈಪೋಟಿಗೆ ನಾಂದಿಯಾಗಬಹುದೆಂದು ಆ ರಾಷ್ಟ್ರಗಳ ಆತಂಕವಾಗಿತ್ತು. ಮುಂಬಯಿಯಲ್ಲಿ ಕೆನಡ ದೇಶದ ಸಹಯೋಗದಲ್ಲಿ ಆರಂಭವಾಗಿದ್ದ ಕೆನಡ–ಇಂಡಿಯಾ ಕ್ರಿಯಾಕಾರಿಯಲ್ಲಿ ಉತ್ಪತ್ತಿಯಾದ ಪ್ಲುಟೋನಿಯಮ್‌ಅನ್ನು ಈ ಪ್ರಯೋಗದಲ್ಲಿ ಇಂಧನವಾಗಿ ಬಳಸಲಾಗಿತ್ತು. ಅದು ಶಾಂತಿಯುತ ಉದ್ದೇಶಗಳಿಗಾಗಿ ವರ್ಗಾಯಿಸಿದ್ದ ಪರಮಾಣು ತಂತ್ರಜ್ಞಾನದ ದುರ್ಬಳಕೆ ಎಂದು ಆರೋಪಿಸಿ ಕೆನಡ ಹಾಗೂ ಅಮೆರಿಕ ಭಾರತದೊಂದಿಗೆ ಎಲ್ಲ ರೀತಿಯ ಪರಮಾಣು ತಂತ್ರಜ್ಞಾನ ಸಹಯೋಗವನ್ನು ಕೂಡಲೆ ಸ್ಥಗಿತಗೊಳಿಸಿದವು.

ಅದೇ ವರ್ಷ ಇನ್ನು ಕೆಲವು ರಾಷ್ಟ್ರಗಳು ಒಂದುಗೂಡಿ "ಪರಮಾಣು ಸರಬರಾಜುದಾರರ ಗುಂಪು" ಎಂಬ ಒಂದು ಒಕ್ಕೂಟವನ್ನು ಆರಂಭಿಸಿದವು. ಯಾವುದೇ ದೇಶಕ್ಕೆ ಶಾಂತಿಯುತ ಉದ್ದೇಶಕ್ಕಾಗಿ ವರ್ಗಾಯಿಸಲ್ಪಟ್ಟ ಪರಮಾಣು ವಸ್ತು ಮತ್ತು ತಂತ್ರಜ್ಞಾನವನ್ನು ಆ ರಾಷ್ಟ್ರ ಪರಮಾಣು ಅಸ್ತ್ರ ಅಭಿವೃದ್ಧಿಗೆ ಬಳಸದಂತೆ ಕಣ್ಗಾವಲು ಇಡುವುದು ಈ ಗುಂಪಿನ ಪ್ರಮುಖ ಉದ್ದೇಶ. ಅದಕ್ಕಾಗಿ ಅಂತರರಾಷ್ಟ್ರೀಯ ಅಣುಶಕ್ತಿ ಪ್ರಾಧಿಕಾರದ ಸಹಯೋಗದೊಂದಿಗೆ ಎರಡು ಮಾರ್ಗಸೂಚಿಗಳನ್ನು ಸಿದ್ಧಪಡಿಸಿತು. ಮೊದಲನೇ ಮಾರ್ಗಸೂಚಿಯಲ್ಲಿ ಪರಮಾಣು ಕ್ಷೇತ್ರದಲ್ಲಿ ನೇರವಾಗಿ ಬಳಸುವ ಕಾರ್ಯಕಾರಿ, ತಂತ್ರಜ್ಞಾನ, ಇಂಧನ, ಇಂಧನ ಬಳಕೆಯ ನಂತರದ ಮರುಸಂಸ್ಕರಣೆಗೆ ಬೇಕಾದ ಉಪಕರಣಗಳು, ಇತ್ಯಾದಿಗಳನ್ನು ರಫ್ತು ಮಾಡುವಾಗ ಪಾಲಿಸಬೇಕಾದ ನಿಯಮಾವಳಿಗಳನ್ನು ನಿರೂಪಿಸಲಾಗಿದೆ. ಎರಡನೇ ಮಾರ್ಗಸೂಚಿಯು ಪರಮಾಣು ಕ್ಷೇತ್ರದಲ್ಲಿ ಪರೋಕ್ಷವಾಗಿ ಬಳಸುವುದಲ್ಲದೆ ವಿವಿಧ ಕೈಗಾರಿಕೆಗಳಲ್ಲಿ ಬಳಸಬಹುದಾದಂತಹ, ಅಂದರೆ ದ್ವಂದ್ವ ಬಳಕೆಯ ಉಪಕರಣಗಳು ಹಾಗೂ ತಂತ್ರಜ್ಞಾನಗಳನ್ನು ಒಳಗೊಂಡಿದೆ. ಅಲ್ಲದೆ, ಪರಮಾಣು ತಂತ್ರಜ್ಞಾನ ಹಾಗೂ ಉಪಕರಣಗಳ ವ್ಯಾಪಾರ ಈ ಗುಂಪಿನ ಸದಸ್ಯರುಗಳ ನಡುವೆ ಮಾತ್ರ ನಡೆಯಬಹುದೆಂಬುದು ಮತ್ತೊಂದು ಶರತ್ತು ಇದೆ. ಇಂದು ಆ ಗುಂಪಿನಲ್ಲಿ ೪೮ ರಾಷ್ಟ್ರಗಳಿವೆ.

ಈ ಪರಮಾಣು ಸರಬರಾಜು ಗುಂಪಿನ ಸದಸ್ಯ ರಾಷ್ಟ್ರವಾಗಲು ಬೇಕಾದ ಅರ್ಹತೆ ಏನು ? ಅದನ್ನು ಅರ್ಥಮಾಡಿಕೊಳ್ಳಲು ಅದಕ್ಕೆ ಹಿಂದಿನ ಕೆಲವು ಐತಿಹಾಸಿಕ ಬೆಳವಣಿಗೆಗಳನ್ನು ಸ್ಥೂಲವಾಗಿ ಪರಿಶೀಲಿಸಬೇಕು. ಆ ವೇಳೆಗಾಗಲೆ ಪರಮಾಣು ತಂತ್ರಜ್ಞಾನ ಸಾಕಷ್ಟು ಅಭಿವೃದ್ಧಿಗೊಂಡು ಹಲವಾರು ದೇಶಗಳಲ್ಲಿ ವಿದ್ಯುತ್ ಉತ್ಪಾದನೆ, ಆರೋಗ್ಯ, ಮುಂತಾದ ಅನೇಕ ಶಾಂತಿಯುತ ಉದ್ದೇಶಗಳಿಗಾಗಿಯೂ

ಬಳಕೆಯಾಗುತ್ತಿತ್ತು. ಅದರೊಂದಿಗೆ ಅಮೆರಿಕ, ರಷ್ಯ ಅಲ್ಲದೆ ಬ್ರಿಟನ್, ಫ್ರಾನ್ಸ್, ನಂತರ ಚೈನಾ ಹೀಗೆ ಒಂದಾದ ಮೇಲೊಂದು ರಾಷ್ಟ್ರಗಳು ಪರಮಾಣು ಶಸ್ತ್ರ ಅಭಿವೃದ್ಧಿ ಹಾಗೂ ಶೇಖರಣೆಯಲ್ಲಿ ತೊಡಗಿಕೊಳ್ಳಲಾರಂಭಿಸಿದವು. ಈ ಬೆಳವಣಿಗೆಯ ಬಗ್ಗೆ ಇತರ ರಾಷ್ಟ್ರಗಳಲ್ಲಿ ಆತಂಕ ಉಂಟಾಗಿತ್ತು. ಅದಕ್ಕೆ ಸ್ಪಂದಿಸಿ ಸಂಯುಕ್ತ ರಾಷ್ಟ್ರವು ವಿಶ್ವದಲ್ಲಿ ಪರಮಾಣು ಅಸ್ತ್ರ ಪ್ರಸರಣವಾಗುವುದನ್ನು ತಡೆಗಟ್ಟಲು “ಪರಮಾಣು ಶಸ್ತ್ರ ಪ್ರಸರಣ ನಿಷೇಧ ಒಪ್ಪಂದ”ವನ್ನು ೧೯೭೦ರಲ್ಲಿ ಅಂತರರಾಷ್ಟ್ರೀಯ ಅಣುಶಕ್ತಿ ಪ್ರಾಧಿಕಾರದ ನೇತೃತ್ವದಲ್ಲಿ ಜಾರಿಗೆ ತಂದಿತು. ಅಲ್ಲದೆ ಲ್ಯಾಟಿನ್ ಅಮೆರಿಕ, ಆಫ್ರಿಕ, ಆಗ್ನೇಯ ಏಷ್ಯ, ಮಧ್ಯ ಏಷ್ಯ ಮುಂತಾದ ಪ್ರದೇಶಗಳನ್ನು ಪರಮಾಣು ಶಸ್ತ್ರ ಮುಕ್ತ ವಲಯ ಎಂದು ಘೋಷಿಸಿತು. ಎನ್. ಎಸ್. ಜಿ.ಯ ಉದ್ದೇಶವೂ ಅದೇ ಆಗಿದ್ದುದರಿಂದ ಅದರ ಸದಸ್ಯತ್ವಕ್ಕೆ ಯಾವುದೇ ರಾಷ್ಟ್ರ ಅರ್ಹತೆ ಪಡೆಯಬೇಕಾದರೆ ಅಣ್ವಸ್ತ್ರ ಪ್ರಸರಣ ನಿಷೇಧ ಒಪ್ಪಂದಕ್ಕೆ ಸಹಿ ಹಾಕಿರಬೇಕು ಅಥವಾ ಪರಮಾಣು ಮುಕ್ತವಲಯದ ಸದಸ್ಯ ರಾಷ್ಟ್ರವಾಗಿರಬೇಕು.

ಭಾರತ ಆರಂಭದಿಂದಲೂ ಪರಮಾಣು ಅಸ್ತ್ರ ಪ್ರಸರಣ ನಿಷೇಧನೆಯ ತತ್ವಗಳನ್ನು ಬೆಂಬಲಿಸಿದ್ದರೂ ಆ ಒಪ್ಪಂದವನ್ನು ಅನುಮೋದಿಸಿ ಸಹಿ ಹಾಕಲಿಲ್ಲ. ಆ ಒಪ್ಪಂದ ಅಧಿಕೃತವಾಗಿ ಪರಮಾಣು ಅಸ್ತ್ರ ರಾಷ್ಟ್ರಗಳೆಂದು ಪರಿಗಣಿಸಲ್ಪಟ್ಟ ಐದು ರಾಷ್ಟ್ರಗಳನ್ನು ಹೊರತುಪಡಿಸಿ, ಉಳಿದ ರಾಷ್ಟ್ರಗಳು ಪರಮಾಣು ಅಸ್ತ್ರ ತಯಾರಿಕೆಯಲ್ಲಿ ತೊಡಗಿಕೊಳ್ಳಕೂಡದೆಂದೂ, ಅದನ್ನು ಖಚಿತಪಡಿಸಿಕೊಳ್ಳುವುದಕ್ಕಾಗಿ ಅವು ತಮ್ಮೆಲ್ಲ ಪರಮಾಣು ಸಂಸ್ಥೆಗಳನ್ನು ಅಂತರರಾಷ್ಟ್ರೀಯ ಅಣುಶಕ್ತಿ ಪ್ರಾಧಿಕಾರದ ರಕ್ಷಣೋಪಾಯಗಳಿಗೆ ಒಳಪಡಿಸಬೇಕೆಂದೂ ನಿಯಮ ವಿಧಿಸುತ್ತದೆ. ಆದರೆ, ಅಧಿಕೃತ ಪರಮಾಣು ಅಸ್ತ್ರ ರಾಷ್ಟ್ರಗಳಿಗೆ ಮಾತ್ರ ಈ ರೀತಿಯ ನಿರ್ಬಂಧವಿಲ್ಲ. ಅವುಗಳು ಹೊಸ ಹೊಸ ಪರಮಾಣು ಅಸ್ತ್ರಗಳ ಸಂಶೋಧನೆಯಲ್ಲಿ ನಿರಂತರವಾಗಿ ತೊಡಗಿಕೊಂಡಿವೆ. ಆದ್ದರಿಂದ ಈ ಒಪ್ಪಂದ ತಾರತಮ್ಯದಿಂದ ಕೂಡಿದೆ ಎಂದು ಭಾರತ ಅದಕ್ಕೆ ಸಹಿ ಹಾಕಲು ನಿರಾಕರಿಸಿದೆ. ಹಾಗಾಗಿ ಭಾರತ ಆರಂಭದಿಂದಲೂ ಎನ್. ಎಸ್. ಜಿ.ಯಿಂದ ಹೊರಗುಳಿಯಬೇಕಾಯಿತು.

ಈ ರೀತಿ ಅಂತರರಾಷ್ಟ್ರೀಯ ಪರಮಾಣು ಸಹಕಾರದಿಂದ ಭಾರತ ಹೊರಗೆ ಉಳಿದರೂ ೧೯೯೮ರಲ್ಲಿ ಪೂರ್ಣ ಪ್ರಮಾಣದ ಐದು ಪರಮಾಣು ಅಸ್ತ್ರ ಪರೀಕ್ಷೆಗಳನ್ನು ಯಶಸ್ವಿಯಾಗಿ ನಡೆಸಿ ತಾನೂ ಪರಮಾಣು ಅಸ್ತ್ರ ರಾಷ್ಟ್ರವೆಂದು ಘೋಷಿಸಿಕೊಂಡಿತು. ಅಲ್ಲದೆ, ಅದುವರೆಗಿನ ಅನುಭವದ ಆಧಾರದ ಮೇಲೆ ಶಾಂತಿಯುತ ಪರಮಾಣು ಬಳಕೆಯನ್ನೂ ಅಭಿವೃದ್ಧಿಪಡಿಸಿಕೊಂಡಿತು. ಇಂದು ಭಾರತದಲ್ಲಿ ೨೩ ಪರಮಾಣು ಕ್ರಿಯಾಕಾರಿಗಳು ಕಾರ್ಯ ನಿರ್ವಹಿಸುತ್ತಿದ್ದು, ಸುಮಾರು ೫ ಗಿಗವಾಟ್ ವಿದ್ಯುತ್ ಉತ್ಪಾದನೆಯಲ್ಲಿ ತೊಡಗಿಕೊಂಡಿವೆ.

ಆದರೆ ಇದು ಸಾಲದು. ಇಂದು ಭಾರತದ ಒಟ್ಟು ವಾರ್ಷಿಕ ವಿದ್ಯುತ್ ಉತ್ಪಾದನೆ ಸುಮಾರು ೩೦೭ ಗಿಗವಾಟ್ ಇದ್ದರೂ, ವಿಶ್ವದಲ್ಲೇ ತಲಾ ಕಡಿಮೆ ವಿದ್ಯುತ್ ಬಳಕೆಯ ದೇಶಗಳಲ್ಲಿ ಒಂದು ಎಂದು ಪರಿಗಣಿಸಲ್ಪಟ್ಟಿದೆ. ವಿದ್ಯುತ್ ಬಳಕೆಯು ದೇಶದ ಆರ್ಥಿಕ ಹಾಗೂ ಸಾಮಾಜಿಕ ಪ್ರಗತಿಯ ಅಳತೆಗೋಲು. ಹಾಗಾಗಿ, ಭಾರತ ಸರ್ಕಾರವು ಮುಂದಿನ ದಶಕಗಳಲ್ಲಿ ವಿದ್ಯುತ್ ಉತ್ಪಾದನೆಯನ್ನು ವಾರ್ಷಿಕ ೩೦೭ ಗಿಗವಾಟ್‌ನಿಂದ ೮೦೦ ಗಿಗವಾಟ್‌ಗೆ ಏರಿಸಬೇಕೆಂಬ ಮಹತ್ವಾಕಾಂಕ್ಷೆಯ ಯೋಜನೆಯನ್ನು ಹಮ್ಮಿಕೊಂಡಿದೆ. ಪ್ರಸ್ತುತದಲ್ಲಿ ವಿದ್ಯುತ್ ಉತ್ಪಾದನೆಯ ಶೇಕಡ ೭೦ ಭಾಗ ಕಲ್ಲಿದ್ದಲು, ತೈಲ, ನೈಸರ್ಗಿಕ ಅನಿಲ ಮುಂತಾದ ಪಳೆಯುಳಿಕೆ ಇಂಧನಗಳ ದಹನದಿಂದ ಉಂಟಾಗುತ್ತದೆ. ಇದರಿಂದ ಜಾಗತಿಕ ತಾಪಮಾನದ ಮೇಲೆ ಉಂಟಾಗುವ ಅಡ್ಡಪರಿಣಾಮದಿಂದಾಗಿ ಭವಿಷ್ಯದಲ್ಲಿ ಈ ಪ್ರಮಾಣವನ್ನು ಕಡಿಮೆ ಮಾಡಲೇಬೇಕಾಗಿದೆ. ಪರಮಾಣು ವಿದ್ಯುತ್ ಉತ್ಪಾದನೆಯಲ್ಲಿ ಹಸಿರು ಮನೆ ಅನಿಲಗಳು ಬಿಡುಗಡೆಯಾಗದೇ ಇರುವುದರಿಂದ ಭವಿಷ್ಯದಲ್ಲಿ ಭಾರತ ಇದರ ಕಡೆಗೆ ಹೆಚ್ಚು ಗಮನಹರಿಸಬೇಕಾಗಿರುವುದು ಅನಿವಾರ್ಯ. ಹಾಗಾಗಿ, ಇಂದು ಒಟ್ಟು ವಿದ್ಯುತ್ ಉತ್ಪಾದನೆಯ ಶೇಕಡ ೧.೯ ಭಾಗ ಮಾತ್ರ ಇರುವ ಪರಮಾಣು ತಂತ್ರಜ್ಞಾನದ ಕೊಡುಗೆಯನ್ನು, ೨೦೫೦ರ ವೇಳೆಗೆ ಶೇಕಡ ೨೫ಕ್ಕೆ ಏರಿಸುವ ಅವಶ್ಯಕತೆ ಇದೆ. ಆದರೆ, ಅದನ್ನು ಜಾರಿಗೆ ತರುವುದರಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಅವಶ್ಯವಾದ ಕ್ರಿಯಾಕಾರಿಗಳನ್ನು ನಿರ್ಮಿಸಲು ನಮ್ಮಲ್ಲಿ ಸಾಕಷ್ಟು ಯುರೇನಿಯಮ್ ಇಂಧನ ಸಂಪನ್ಮೂಲಗಳು ಇಲ್ಲ. ನಮ್ಮಲ್ಲಿ ಬಹು ದೊಡ್ಡ ಥೋರಿಯಮ್ ಸಂಪನ್ಮೂಲವಿದೆ. ಆದರೆ, ಅದನ್ನು ನೇರವಾಗಿ ಕ್ರಿಯಾಕಾರಿಗಳಲ್ಲಿ ಇಂಧನವಾಗಿ ಬಳಸಲಾಗುವುದಿಲ್ಲ. ಫಾಸ್ಟ್ ಬ್ರೀಡರ್ ರಿಯಾಕ್ಟರ್ ಎಂಬ ವಿಶಿಷ್ಟ ರೀತಿಯ ಕ್ರಿಯಾಕಾರಿಯಲ್ಲಿ ಅದನ್ನು ಇಂಧನವಾಗಿ ಪರಿವರ್ತಿಸಬಹುದು. ಆದರೆ, ಅಂತಹ ಕ್ರಿಯಾಕಾರಿಗಳನ್ನು ಅಭಿವೃದ್ಧಿಪಡಿಸಲು ಅವಶ್ಯವಾದ ಪ್ಲುಟೋನಿಯಮ್ ಇಂಧನ ನೈಸರ್ಗಿಕವಾಗಿ ಲಭ್ಯವಿಲ್ಲ. ಅದನ್ನು ಬಳಸಿದ ಯುರೇನಿಯಮ್ ಇಂಧನದಿಂದ ಬೇರ್ಪಡಿಸಬೇಕು. ಈ ಎಲ್ಲ ಕಾರಣಗಳಿಂದಾಗಿ ಪರಮಾಣು ವಿದ್ಯುತ್ ಉತ್ಪಾದನೆಯನ್ನು ಹೆಚ್ಚಿಸಲು ಇರುವ ಒಂದೇ ಮಾರ್ಗವೆಂದರೆ ಇಂಧನ, ಕ್ರಿಯಾಕಾರಿಗಳು ಹಾಗೂ ಸಂಬಂಧಪಟ್ಟ ತಂತ್ರಜ್ಞಾನಗಳನ್ನು ಆಮದು ಮಾಡಿಕೊಳ್ಳುವುದು. ಅದಕ್ಕೆ ಎನ್. ಎಸ್. ಜಿ. ಸದಸ್ಯತ್ವ ಅವಶ್ಯಕ.

ಈ ಗುಂಪಿನಲ್ಲಿ ಸದಸ್ಯತ್ವದ ಆಯ್ಕೆ ಒಮ್ಮತದಿಂದ ಆಗುತ್ತದೆ. ಅಂದರೆ, ಎಲ್ಲ ಸದಸ್ಯರೂ ಅರ್ಜಿದಾರರ ಪರವಾಗಿ ಮತ ಚಲಾಯಿಸಬೇಕು, ಗುಂಪಿನ ಬಹುತೇಕ ಸದಸ್ಯರು ಭಾರತದ ಪರವಾಗಿದ್ದರೂ, ಚೈನ ಮತ್ತು ಇನ್ನು ಕೆಲವು ರಾಷ್ಟ್ರಗಳು ಅದನ್ನು ವಿರೋಧಿಸಿವೆ. ಭಾರತ ಪರಮಾಣು ಅಸ್ತ್ರ ಪ್ರಸರಣ ನಿಷೇಧ ಒಪ್ಪಂದಕ್ಕೆ ಸಹಿ ಹಾಕಿಲ್ಲದಿರುವುದರಿಂದ ಅದಕ್ಕೆ ಮಾತ್ರ ಈ ವಿಷಯದಲ್ಲಿ ವಿನಾಯತಿ ನೀಡಬಾರದು; ಅದೇ ರೀತಿ ಸದಸ್ಯತ್ವ ಬಯಸುತ್ತಿರುವ ಇತರ ರಾಷ್ಟ್ರಗಳಿಗೂ (ಉದಾಹರಣೆಗೆ, ಪಾಕಿಸ್ತಾನ) ಅನ್ವಯವಾಗುವಂತೆ ಏಕರೂಪ ನೀತಿಯನ್ನು ನಿರೂಪಿಸಬೇಕೆಂಬುದು ಅವುಗಳ ವಾದ. ಹಾಗಾಗಿ ಇದುವರೆಗೆ ಭಾರತಕ್ಕೆ ಸದಸ್ಯತ್ವ ಮರೀಚಿಕೆಯಾಗಿದೆ.

ಅದೇನೇ ಇರಲಿ, ಭಾರತ ಆ ಒಪ್ಪಂದಕ್ಕೆ ಸಹಿ ಹಾಕಿಲ್ಲದಿದ್ದರೂ ಸ್ವಯಂ ಪ್ರೇರಣೆಯಿಂದ ಪರಮಾಣು ಅಸ್ತ್ರ ಪ್ರಸರಣ ನಿಷೇಧ ತತ್ವಗಳಿಗೆ ಪೂರಕವಾದ ನೀತಿಗಳನ್ನೇ ಆಯ್ಕೆಮಾಡಿಕೊಂಡಿದೆ. ೧೯೯೮ರಲ್ಲಿ ಪರಮಾಣು ಅಸ್ತ್ರ ಪರೀಕ್ಷಾ ಸ್ಫೋಟದ ನಂತರ ಅಂದಿನ ಪ್ರಧಾನಮಂತ್ರಿ ಶ್ರೀ ವಾಜಪೇಯಿ ಅವರು ಹೊಸ ಪರೀಕ್ಷೆಗಳಿಗೆ ನಿರ್ಬಂಧ ಹಾಕಿದ್ದಲ್ಲದೆ ಯಾವುದೇ ಸಶಸ್ತ್ರ ಸಂಘರ್ಷದಲ್ಲಿ ಭಾರತ ಶತ್ರುರಾಷ್ಟ್ರದ ಮೇಲೆ ಪರಮಾಣು ಅಸ್ತ್ರಗಳನ್ನು “ಮೊದಲು ಬಳಸುವುದಿಲ್ಲ” ಎಂದೂ ಘೋಷಿಸಿತು. ಸೆಪ್ಟೆಂಬರ್ ೨೦೦೮ರಲ್ಲಿ ಅಂದಿನ ವಿದೇಶಾಂಗ ಸಚಿವರು ಭಾರತದ ಪರಮಾಣು ನೀತಿ ಹಾಗೂ ಪರಮಾಣು ಅಸ್ತ್ರ ಪ್ರಸರಣ ನಿಷೇಧಕ್ಕಾಗಿ ಅದು ತೆಗೆದುಕೊಂಡಿರುವ ಕಾರ್ಯಕ್ರಮಗಳ ಬಗ್ಗೆ ವಿವರ ನೀಡಿದರು. ಇವೆಲ್ಲದರ ಹಾಗೂ ಅಮೆರಿಕ ಸರ್ಕಾರದ ಪ್ರಸ್ತಾಪದ ಆಧಾರದ ಮೇಲೆ ಪರಮಾಣು ಸರಬರಾಜುದಾರರ ಗುಂಪು ಭಾರತವನ್ನು ಒಂದು ಜವಾಬ್ದಾರಿಯುತ ರಾಷ್ಟ್ರವೆಂದು ಪರಿಗಣಿಸಿ, ಅದರೊಂದಿಗೆ ಸದಸ್ಯ ರಾಷ್ಟ್ರಗಳು ಪರಮಾಣು ವ್ಯಾಪಾರದಲ್ಲಿ ತೊಡಗಿಕೊಳ್ಳಲು ಅವಕಾಶವಾಗುವಂತೆ ಕೆಲವು ರಿಯಾಯಿತಿಗಳನ್ನು ನೀಡಿತು. ಅದರ ಬೆನ್ನಲ್ಲೇ ಅಮೆರಿಕ, ಫ್ರಾನ್ಸ್, ರಷ್ಯ, ಬ್ರಿಟನ್, ಕಜಗಸ್ತಾನ್, ಆಸ್ಟ್ರೇಲಿಯ ಮತ್ತು ಜಪಾನ್ ದೇಶಗಳೊಂದಿಗೆ ಭಾರತ ಪರಮಾಣು ತಂತ್ರಜ್ಞಾನ, ಇಂಧನ ಇತ್ಯಾದಿಗಳನ್ನು ಆಮದು ಮಾಡಿಕೊಳ್ಳಲು ಒಪ್ಪಂದ ಮಾಡಿಕೊಂಡಿದೆ.

ಹಾಗಿದ್ದಲ್ಲಿ ಮತ್ತೇನು ಸಮಸ್ಯೆ ಎಂದು ನೀವು ಕೇಳಬಹುದು. ಎನ್. ಎಸ್. ಜಿ. ನೀಡಿದ ರಿಯಾಯಿತಿಯಲ್ಲಿ ಒಂದು ಶರತ್ತು ಇದೆ. ಯಾವ ಸದಸ್ಯ ರಾಷ್ಟ್ರವೂ ಇಂಧನ ಪುಷ್ಟೀಕರಣ, ಬಳಸಿದ ಇಂಧನ ಮರು ಸಂಸ್ಕರಣೆ ಮುಂತಾದ ಸೂಕ್ಷ್ಮ ತಂತ್ರಜ್ಞಾನ ಮತ್ತು ಉಪಕರಣಗಳನ್ನು ಭಾರತಕ್ಕೆ ವರ್ಗಾಯಿಸುವಂತಿಲ್ಲ. ಭಾರತಕ್ಕೆ ಪೂರ್ಣ ಸದಸ್ಯತ್ವ ದೊರೆತರೆ ಮಾತ್ರ ಅದು ಸಾಧ್ಯ. ಅಷ್ಟೇ ಅಲ್ಲ, ಭಾರತಕ್ಕೆ ಪೂರ್ಣ ಸದಸ್ಯತ್ವ ದೊರಕಿದರೆ ಅದು ತನ್ನ ಥೋರಿಯಂ ತಂತ್ರಜ್ಞಾನವನ್ನು ಇತರ ದೇಶಗಳಿಗೂ ರಫ್ತು ಮಾಡಬಹುದು.

ಯಾವ ಗುಂಪು ಭಾರತದ ಶಾಂತಿಯುತ ಪರಮಾಣು ಸ್ಫೋಟದ ವಿರುದ್ಧ ಇತರ ರಾಷ್ಟ್ರಗಳ ಪ್ರತಿಕ್ರಿಯೆಯ ಫಲವಾಗಿ ಜನಿಸಿತೋ, ಅದೇ ಗುಂಪಿನ ಸದಸ್ಯತ್ವಕ್ಕೆ ಭಾರತ ಇಂದು ಹಂಬಲಿಸುತ್ತಿದೆ. ಇದೊಂದು ವಿಪರ್ಯಾಸವೆಂದು ತೋರಿದರೂ, ಬದಲಾಗುತ್ತಿರುವ ಅಂತರರಾಷ್ಟ್ರೀಯ ವಸ್ತುಸ್ಥಿತಿಗೆ ಕನ್ನಡಿ ಹಿಡಿದಂತಿದೆ. ಇದರಲ್ಲಿ ಭಾರತ ಯಶಸ್ವಿಯಾಗುವುದೇ? ಕಾದು ನೋಡಬೇಕು.

**ಡಾ॥ ಎಮ್. ಎಸ್. ಎಸ್. ಮೂರ್ತಿ**
ಬಿ–೧೦೪, ಟೆರೇಸ್ ಗಾರ್ಡನ್ ಅಪಾರ್ಟ್‌ಮೆಂಟ್ಸ್, ೨ನೇ ಮುಖ್ಯರಸ್ತೆ ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫







# 'ಕನ್ನಡಕ್ಕೊಂದು ಕೈಪಿಡಿ'

ಲೇಖಕರು : **ಟಿ. ಎಸ್. ಗೋಪಾಲ್**

ಪುಟಗಳು : ೩೩೨ ಬೆಲೆ : **₹ ೨೯೦/-**

ಪ್ರಕಾಶಕರು :

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

**ಎಸ್. ಎಸ್. ಯದುರಾಜನ್**

ಇತ್ತೀಚಿನ ದಿನಮಾನಗಳಲ್ಲಿ ಕನ್ನಡ ಭಾಷಾ ಶಿಕ್ಷಣ ಗೊಂದಲಕ್ಕೊಳಗಾಗಿರುವಷ್ಟು ಹಿಂದೆಂದೂ ಆಗಿರಲಿಲ್ಲ ಎನಿಸುತ್ತದೆ. ಅಷ್ಟೇ ಅಲ್ಲ, ಗುಣಮಟ್ಟ ಕೂಡ ಅಧೋಗತಿ ತಲುಪಿರುವುದು ಶೋಚನೀಯ ಸಂಗತಿ. ಕಾರಣಗಳು ಅನೇಕ. ಮಿತಿಮೀರಿದ ವಿದ್ಯಾರ್ಥಿಗಳ ಪ್ರವೇಶದಿಂದ ಉಂಟಾದ ಕಲಿಯುವವರ ಸಂಖ್ಯಾಬಾಹುಳ್ಯ, ಕನ್ನಡ ಕಲಿಸುವ ಶಿಕ್ಷಕರ ಗುಣಮಟ್ಟ ಕುಸಿದಿರುವುದು, ಆಸಕ್ತ ಶಿಕ್ಷಕರಿಗೆ ಸೇವಾ ಪ್ರವೇಶಪೂರ್ವದಲ್ಲಾಗಲೀ, ಸೇವಾವಧಿಯಲ್ಲಾಗಲೀ ಉಪಯುಕ್ತ ತರಬೇತಿ ದೊರೆಯದಿರುವುದು, ಗ್ರಂಥಾಲಯ, ಹೆಚ್ಚಿನ ಓದು, ಭಾಷಾ ಸಂಬಂಧೀ ಚಟುವಟಿಕೆಗಳು – ಇತ್ಯಾದಿ ಪೂರಕ ಅಭ್ಯಾಸಗಳ ಕೊರತೆ, ಶಿಕ್ಷಣ ಕೇವಲ ಪಠ್ಯಪುಸ್ತಕವನ್ನಷ್ಟೇ ಅವಲಂಬಿಸಿರುವುದು, ಬಹುಮುಖ್ಯವಾಗಿ ಭಾಷಾ ಆಧಾರಿತ ಕ್ರಿಯಾತ್ಮಕ ಶಿಕ್ಷಣಕ್ಕಿಂತ ವಿಷಯವಸ್ತು ಆಧಾರಿತ ಶಿಕ್ಷಣಕ್ಕೇ ಹೆಚ್ಚಿನ ಪ್ರಾಮುಖ್ಯ ನೀಡಿರುವುದು, ಉಚ್ಚಾರಣೆ ಹಾಗೂ ಬರವಣಿಗೆಯ ದೋಷಗಳನ್ನು ತಿದ್ದಲು ಬಳಕೆಯಾಗುತ್ತಿದ್ದ ಅತ್ಯುತ್ತಮ ತಂತ್ರವಾದ ಉಕ್ತಲೇಖನದ ಕಣ್ಮರೆ ಇವೇ ಮುಂತಾದ ಕಾರಣಗಳನ್ನು ಗುರುತಿಸಬಹುದು. ಈ ಎಲ್ಲ ಸಮಸ್ಯೆಗಳನ್ನು ಒಂದೊಂದಾಗಿ ಗುರುತಿಸಿ ಪರಿಹಾರೋಪಾಯಗಳನ್ನು ಸೂಚಿಸಲು ಶೈಕ್ಷಣಿಕವಾಗಿ ಸಮರ್ಥರಾದ ಅಧಿಕಾರಿಗಳ ಕೊರತೆಯೂ ಶಿಕ್ಷಕರು ಪಠ್ಯದ ಯಾವ ಅಂಶವನ್ನು ಹೇಗೆ ಕಲಿಸಬೇಕೆಂದು ತಿಳಿಯದೆ ದಿಕ್ಕೆಟ್ಟು ಬಣವೆಯಲ್ಲಿ ಸೂಜಿ ಹುಡುಕುವಂತಾಗಿದೆ. ಇದಲ್ಲದೆ ಭಾಷೆಯನ್ನು ಹೊರತುಪಡಿಸಿ ಮಿಕ್ಕೆಲ್ಲ ವಿಷಯಗಳನ್ನು ಕಲಿಸಲು ಉತ್ತಮ ತರಬೇತಿ ಅವಶ್ಯಕವೆಂದೂ, ಕನ್ನಡವನ್ನು ಯಾರಾದರೂ, ಹೇಗಾದರೂ ಕಲಿಸಬಹುದೆಂಬ ನಿರ್ಲಕ್ಷ್ಯದ ಧೋರಣೆಯೂ ಕೆಲ ಅಧಿಕಾರಿಗಳಲ್ಲಿ ಮನೆಮಾಡಿರುವುದು ಅಸಮರ್ಪಕ ಕನ್ನಡ ಕಲಿಕೆಗೆ ಕಾರಣವಾಗಿದೆ.

ಹೀಗಾಗಿ ಒಂದನೇ ತರಗತಿಯಿಂದ ಹತ್ತನೇ ತರಗತಿಯವರೆಗೆ ಹತ್ತು ವರುಷಗಳು ಕನ್ನಡವನ್ನು ಪ್ರಮುಖ ಭಾಷೆಯಾಗಿ ಕಲಿತರೂ, ವಿದ್ಯಾರ್ಥಿಗಳು ಅಪೇಕ್ಷಿತ ಕನಿಷ್ಠ ಕಲಿಕಾ ಮಟ್ಟವನ್ನು ಮುಟ್ಟದಿರುವುದು ವಿಷಾದದ ಸಂಗತಿ. ಪ್ರಾಥಮಿಕ ಶಾಲೆಯಿಂದ ಹಿಡಿದು ಬಿ. ಎಡ್. ಉಪನ್ಯಾಸಕರವರೆಗೆ ನಾನು ಸಂಪನ್ಮೂಲ ವ್ಯಕ್ತಿಯಾಗಿ ಭಾಗವಹಿಸಿರುವ ನೂರಾರು ಮಾರ್ಗದರ್ಶಿ ಶಿಬಿರಗಳಲ್ಲಿ ಪದವಿಪೂರ್ವ ಹಂತದಲ್ಲೂ ವಿದ್ಯಾರ್ಥಿಗಳು ತಮ್ಮ ಹೆಸರು, ತಮ್ಮ ಪೋಷಕರ ಹೆಸರು, ಹುಟ್ಟಿದ ಸ್ಥಳ, ಈಗಿನ ವಾಸ ಇತ್ಯಾದಿ ಸರಳ ಮಾಹಿತಿಗಳನ್ನೂ ಸ್ಖಾಲಿತ್ಯರಹಿತವಾಗಿ ಬರೆಯಲಾರರೆಂಬ ಆತಂಕದ ಸಂಗತಿಯನ್ನು ಶಿಬಿರಾರ್ಥಿಗಳು ನನ್ನೊಡನೆ ಹಂಚಿಕೊಂಡಿದ್ದಾರೆ. ಅಂತೆಯೇ ಮೇಲಿನ ಹಂತದಿಂದ ಹಿಡಿದು ಅತ್ಯಂತ ಕೆಳಗಿನ ಹಂತದವರೆಗೆ ಎಲ್ಲ ವರ್ಗದವರೂ ತಮ್ಮ ಕೆಳಗಿನ ಹಂತದ ಶಿಕ್ಷಕರು ಸರಿಯಾಗಿ ಕಲಿಸಿಲ್ಲವೆಂಬ ದೋಷಾರೋಪವನ್ನೂ ಮಾಡುತ್ತಲೇ ಬಂದಿದ್ದಾರೆ. ಕನ್ನಡ ನಾಡಿನಲ್ಲೇ ಹುಟ್ಟಿ ಬೆಳೆದು ಕನ್ನಡವನ್ನೇ ಉಸಿರಾಡುತ್ತ, ಶಾಲೆಯ ಒಳಗೂ ಹೊರಗೂ ಕನ್ನಡವನ್ನೇ ಕೇಳುತ್ತ, ಮಾತನಾಡುತ್ತ ಬಂದ ವಿದ್ಯಾರ್ಥಿಗಳ ಗತಿಯೇ ಹೀಗಾದರೆ ಭಾಷಾ ಶಿಕ್ಷಣದ ಮುಂದಿನ ಗತಿ ಹೇಗೆ ಎಂದು ಯೋಚಿಸಬೇಕಾಗಿದೆ.

ಇಂತಹ ಅಂಧಕಾರದ ನಡುವೆಯೇ ಅಲ್ಲಲ್ಲಿ ಬೆಳ್ಳಿ ರೇಖೆಗಳು ಕಾಣಿಸಿಕೊಂಡು ಪರಿಸ್ಥಿತಿಯನ್ನು ಸುಧಾರಿಸುವಲ್ಲಿ ನೆರವಾಗುತ್ತ ಬಂದಿವೆ. ಇವುಗಳಲ್ಲಿ ಹಲವಾರು ವ್ಯಾಕರಣ ಗ್ರಂಥಗಳು, ಶಿಕ್ಷಕರ ಕೈಪಿಡಿಗಳು, ನಿಘಂಟುಗಳು, ಗಾದೆಮಾತು, ನುಡಿಗಟ್ಟು, ನಾನಾರ್ಥ ಮತ್ತು ಸಮಾನಾರ್ಥ ಇವನ್ನು ಕುರಿತ ಕಿರುಹೊತ್ತಗೆಗಳು ಶಿಕ್ಷಕರ ಜ್ಞಾನವೈಶಾಲ್ಯವನ್ನು ಹೆಚ್ಚಿಸಿವೆ. ರಾಜ್ಯದ ಹಲವಾರು ಪ್ರಕಟಣ ಸಂಸ್ಥೆಗಳು ಇಂತಹ ಅನೇಕ ಹೊತ್ತಗೆಗಳನ್ನು

ಪ್ರಸ್ತುತ ಪುಸ್ತಕದಲ್ಲಿ ೧೪ ಅಧ್ಯಾಯಗಳಿದ್ದು, ಕನ್ನಡ ವ್ಯಾಕರಣಕ್ಕೆ ಸಂಬಂಧಿಸಿದಂತೆ ಹೆಚ್ಚುಕಡಿಮೆ ಎಲ್ಲ ಅಂಶಗಳನ್ನೂ ಈ ಹೊತ್ತಗೆಯಲ್ಲಿ ಅಡಕಗೊಳಿಸಿದ್ದಾರೆ. ಕನ್ನಡವನ್ನು ತಪ್ಪಿಲ್ಲದೆ ಓದಿ ಬರೆಯುವುದು ಹೇಗೆ, ಅಕ್ಷರ, ಪದ-ಪ್ರತ್ಯಯ-ಸಂಧಿ, ನಾಮಪದ, ಸಮಾಸ, ಕ್ರಿಯಾಪದ, ಅವ್ಯಯ, ವಾಕ್ಯ, ಛಂದಸ್ಸು , ಕನ್ನಡ ಪದಸಂಪತ್ತು, ಸಮಾನಾರ್ಥ ಪದಕೋಶ, ವಿರುದ್ಧಾರ್ಥ ಪದಕೋಶ, ನಾನಾರ್ಥ ಪದಕೋಶ ಮತ್ತು ತತ್ಸಮ-ತದ್ಭವ ಪದಕೋಶ ಇವೇ ಆ ೧೪ ಅಧ್ಯಾಯಗಳು. ಪ್ರತಿ ಅಧ್ಯಾಯದಲ್ಲಿ ಕನ್ನಡವನ್ನು ಕುರಿತಂತೆ ಸಾಮಾನ್ಯ ಜ್ಞಾನಕ್ಕೆ ಎಷ್ಟು ವಿಷಯ ಬೇಕೋ ಅಷ್ಟನ್ನೇ ಅತ್ಯಂತ ಸ್ಪಷ್ಟವಾಗಿ, ಸಂದೇಹಕ್ಕೆ ಎಡೆಯಿಲ್ಲದಂತೆ ಪ್ರಸ್ತುತಪಡಿಸಲಾಗಿದೆ.

ಪ್ರಕಟಿಸಿ ಔಪಚಾರಿಕ ಶಿಕ್ಷಣದಲ್ಲಿ ಉಂಟಾಗಿರುವ ಕೊರತೆಯನ್ನು ನೀಗಿಸಿರುವುದು ಮೆಚ್ಚುಗೆಯ ಅಂಶ. ಈ ಎಲ್ಲ ಗೊಂದಲಗಳ ನಡುವೆ ತಂತ್ರಜ್ಞಾನ ಶರವೇಗದಲ್ಲಿ ಬೆಳೆಯುತ್ತಿದ್ದು, ಅಲ್ಲಿನ ಕೆಲವು ಅಂಶಗಳು ಕನ್ನಡ ಕಲಿಕೆಗೆ ಪೂರಕವಾಗಿರುವುದು ಸಂತಸದ ಸಂಗತಿ. ಶಾಲಾ ಶಿಕ್ಷಣಕ್ಕೆ ಸಂಬಂಧಿಸಿದಂತೆ ಹತ್ತು ಹಲವು ಪೂರಕ ಸಾಮಗ್ರಿಗಳು, ಅಡಕ ಮುದ್ರಿಕೆಗಳು, ಆ್ಯಪ್‌ಗಳು ಲಭ್ಯವಾಗುತ್ತಿರುವುದು ಶಿಕ್ಷಕರಿಗೆ ವರದಾನವಾಗಿದೆ. ಆದರೆ ಇವು ಯಾವುವೂ ತರಗತಿಯಲ್ಲಿ ಪಾಠ ಮಾಡುವ ಶಿಕ್ಷಕರಿಗೆ ಪರ್ಯಾಯವಾಗುವುದಿಲ್ಲ.




ಒಟ್ಟಾರೆಯಾಗಿ ಹೇಳುವುದಾದರೆ ಶಾಲಾ ಕಾಲೇಜು ಶಿಕ್ಷಣವನ್ನು ಮುಗಿಸಿದ ಒಬ್ಬ ವಿದ್ಯಾರ್ಥಿಗೆ ಇರಬೇಕಾದ ಭಾಷಾ ಪ್ರೌಢಿಮೆಯಲ್ಲಿ ಗಮನಾರ್ಹ ಕೊರತೆಯಿರುವುದು ಸುಸ್ಪಷ್ಟ. ಇದರಿಂದಾಗಿ ವಿದ್ಯಾರ್ಥಿಯು ತಾನು ಪಡೆಯಬೇಕಾದ ಭಾಷಾ ಕೌಶಲದಲ್ಲಿ ಕೊರತೆಯಿರುವುದು ಒಂದು ಅಂಶವಾದರೆ, ವಿದ್ಯಾರ್ಥಿ ಹಂತವನ್ನು ದಾಟಿ ವೃತ್ತಿಜೀವನಕ್ಕೆ ಕಾಲಿಡಲು ಭಾಷಾ ಜ್ಞಾನ ಕುರಿತಂತೆ ಹಲವಾರು ಅರ್ಹತಾ ಪರೀಕ್ಷೆಗಳನ್ನು ಎದುರಿಸ ಬೇಕಾಗುವುದು ಮತ್ತೊಂದು ಅಂಶ. ಈ ಹಂತದಲ್ಲಿಯೇ ನಮ್ಮ ಶಾಲೆಗಳು, ಕಾಲೇಜುಗಳಲ್ಲಿನ ಗುಣಮಟ್ಟದ ಕೊರತೆ ಮತ್ತು ಅರ್ಹತಾ ಪರೀಕ್ಷೆಗಳ ಮೂಲಕ ಅಳೆಯುವ ಅಪೇಕ್ಷಿತ ಕೌಶಲಗಳ ನಡುವಿನ ಅಂತರ ಸ್ಪಷ್ಟವಾಗುತ್ತದೆ. ಇಷ್ಟೇ ಅಲ್ಲ, ಕೆಲಸವೊಂದನ್ನು ಗಳಿಸಿಕೊಂಡ ಮೇಲೂ ಸಿಬ್ಬಂದಿ ತಮ್ಮ ಭಾಷಾ ಸಂಪನ್ಮೂಲವನ್ನು ಬಳಸಿಕೊಂಡು ನಿರ್ವಹಿಸಬೇಕಾದ ಜವಾಬ್ದಾರಿಗಳನ್ನು ನಿರ್ವಹಿಸಲು ಅಸಮರ್ಥರಾಗಿ ಹೆಣಗಾಡುತ್ತ ಕೆಲಸಕಾರ್ಯಗಳಲ್ಲಿ ಗುಣಮಟ್ಟವನ್ನು ಕಾಯ್ದುಕೊಳ್ಳಲಾಗದಿರುವುದು ಮತ್ತೊಂದು ಪ್ರಮುಖ ಅಂಶ. ಈ ಹಂತದಲ್ಲಿ ವಿದ್ಯಾರ್ಥಿಗೆ ಅದುವರೆಗಿನ ಶಿಕ್ಷಣದಲ್ಲಿ ಕಂಡುಬಂದ ಕೌಶಲದ ಕೊರತೆಯನ್ನು ನೀಗಿಸಿಕೊಳ್ಳಲು ಹತ್ತು ಹಲವು ಹೊತ್ತಗೆಗಳ ಅವಶ್ಯಕತೆ ಎದ್ದುಕಾಣುತ್ತದೆ.

ಈ ಅವಶ್ಯಕತೆಯನ್ನು ತುಂಬಿಕೊಡಲು ಉಪಯುಕ್ತವಾದ ಗ್ರಂಥವೊಂದನ್ನು ಶ್ರೀಯುತ ಟಿ. ಎಸ್. ಗೋಪಾಲ್‌ರವರು ರಚಿಸಿದ್ದಾರೆ. ಅದು ರಾಜ್ಯದ ಪ್ರತಿಷ್ಠಿತ ಪ್ರಕಾಶನ ಸಂಸ್ಥೆಗಳಲ್ಲೊಂದಾದ ನವಕರ್ನಾಟಕ ಪ್ರಕಾಶನದವರು ಪ್ರಕಟಿಸಿರುವ 'ಕನ್ನಡಕ್ಕೊಂದು ಕೈಪಿಡಿ'. ಇದಕ್ಕೂ ಮುಂಚೆ ನವಕರ್ನಾಟಕ ಸಂಸ್ಥೆಯು ಕನ್ನಡ ಕಲಿಕೆಯ ಹಲವು ಆಯಾಮಗಳಿಗೆ ಸಂಬಂಧಿಸಿದಂತೆ ಇದೇ ಲೇಖಕರು ಬರೆದಿರುವ ಹದಿನಾಲ್ಕು ಕಿರುಹೊತ್ತಗೆಗಳನ್ನು ಪ್ರಕಟಿಸಿದ್ದು, ಎಲ್ಲವೂ ತಲಾ ನಾಲ್ಕು ಮುದ್ರಣಗಳನ್ನು ಕಂಡಿರುವುದೇ ಈ ಪುಸ್ತಕಗಳ ಜನಪ್ರಿಯತೆಗೆ ಸಾಕ್ಷಿಯಾಗಿದೆ. ಈ ಕಿರುಹೊತ್ತಗೆಗಳಲ್ಲಿರುವ ಕನ್ನಡ ಕಲಿಕೆಯ ಅನೇಕ ಮಹತ್ವದ ಅಂಶಗಳನ್ನು ಒಟ್ಟಾರೆಯಾಗಿ ಒಂದೆಡೆ ಲಭ್ಯವಾಗಿಸುವ ಪ್ರಯತ್ನವೇ ಈ ಕೈಪಿಡಿ.

ಪ್ರಸ್ತುತ ಪುಸ್ತಕದಲ್ಲಿ ೧೪ ಅಧ್ಯಾಯಗಳಿದ್ದು, ಕನ್ನಡ ವ್ಯಾಕರಣಕ್ಕೆ ಸಂಬಂಧಿಸಿದಂತೆ ಹೆಚ್ಚುಕಡಿಮೆ ಎಲ್ಲ ಅಂಶಗಳನ್ನೂ ಈ ಹೊತ್ತಗೆಯಲ್ಲಿ ಅಡಕಗೊಳಿಸಿದ್ದಾರೆ. ಕನ್ನಡವನ್ನು ತಪ್ಪಿಲ್ಲದೆ ಓದಿ ಬರೆಯುವುದು ಹೇಗೆ, ಅಕ್ಷರ, ಪದ–ಪ್ರತ್ಯಯ–ಸಂಧಿ, ನಾಮಪದ, ಸಮಾಸ, ಕ್ರಿಯಾಪದ, ಅವ್ಯಯ, ವಾಕ್ಯ, ಛಂದಸ್ಸು, ಕನ್ನಡ ಪದಸಂಪತ್ತು, ಸಮಾನಾರ್ಥ ಪದಕೋಶ, ವಿರುದ್ಧಾರ್ಥ ಪದಕೋಶ, ನಾನಾರ್ಥ ಪದಕೋಶ ಮತ್ತು ತತ್ಸಮ–ತದ್ಭವ ಪದಕೋಶ ಇವೇ ಆ ೧೪ ಅಧ್ಯಾಯಗಳು. ಪ್ರತಿ ಅಧ್ಯಾಯದಲ್ಲಿ ಕನ್ನಡವನ್ನು ಕುರಿತಂತೆ ಸಾಮಾನ್ಯ ಜ್ಞಾನಕ್ಕೆ ಎಷ್ಟು ವಿಷಯ ಬೇಕೋ ಅಷ್ಟನ್ನೇ ಅತ್ಯಂತ ಸ್ಪಷ್ಟವಾಗಿ, ಸಂದೇಹಕ್ಕೆ ಎಡೆಯಿಲ್ಲದಂತೆ ಪ್ರಸ್ತುತಪಡಿಸಲಾಗಿದೆ. ಇಲ್ಲಿ ಕೊಟ್ಟಿರುವ ಬಹುತೇಕ ಎಲ್ಲ ಸಂಗತಿಗಳೂ ಕನ್ನಡದ ಯಾವುದೇ ವ್ಯಾಕರಣ ಪುಸ್ತಕದಲ್ಲಿ ಸಿಗಬಹುದಾದರೂ ಉಪಯುಕ್ತವಾದ ವ್ಯಾಕರಣಾಂಶಗಳನ್ನು ಕುರಿತಂತೆ ಅಭ್ಯಾಸಗಳನ್ನೊಳಗೊಂಡ ಪುಸ್ತಕಗಳು ಹೆಚ್ಚಿಲ್ಲ. ಬಹುಶಃ ಇಲ್ಲವೇ ಇಲ್ಲ ಎನ್ನಬಹುದು. ಹೀಗಾಗಿ ಲೇಖಕರು ವಿಷಯವನ್ನು ಪ್ರಸ್ತುತ ಪಡಿಸುತ್ತಲೇ ಅದಕ್ಕೆ ಸಂಬಂಧಪಟ್ಟಂತೆ ಕೆಲವು ಅಭ್ಯಾಸಗಳನ್ನು ನೀಡಿರುವುದು ಈ ಪುಸ್ತಕದ ವೈಶಿಷ್ಟ್ಯ. ಉದಾಹರಣೆಗೆ, 'ಕನ್ನಡವನ್ನು ತಪ್ಪಿಲ್ಲದೆ ಬರೆಯುವುದು ಹೇಗೆ' ಎಂಬ ಅಧ್ಯಾಯದಲ್ಲಿ ಪುಟ ೮ರಲ್ಲಿ ಉಕ್ತಲೇಖನಕ್ಕೆಂದು ಕೆಲವು ಪದಗಳನ್ನೂ ಮತ್ತು ತಪ್ಪಾಗಿ ಬರೆದ ಕೆಲವು ಪದ / ಪದಸಮುಚ್ಚಯಗಳನ್ನು ಸರಿಯಾಗಿ ಬರೆಯಲು ಕೆಲವು ಅಭ್ಯಾಸಗಳನ್ನು ನೀಡಿದ್ದಾರೆ. ಇದು ಒಂದು ವಿಷಯವನ್ನು ಓದಿ ಇಲ್ಲವೇ ಕೇಳಿ ತಿಳಿದುಕೊಂಡು, ಅದನ್ನು ಮನಸ್ಸಿನಾಳದಲ್ಲಿ ಸಂಗ್ರಹಿಸಿಕೊಂಡು ಪುನಃ ತಪ್ಪಿಲ್ಲದೆ ಹೇಳುವುದಕ್ಕಾಗಲಿ, ಬರೆಯುವುದಕ್ಕಾಗಲಿ ಮಾಡುವ ಪ್ರಕ್ರಿಯೆಗೆ ಅತ್ಯಂತ ಉಪಯುಕ್ತ ಅಭ್ಯಾಸ. ಏಕೆಂದರೆ ಗ್ರಹಿಕೆಯಲ್ಲಿ ಆದ ತಪ್ಪು ಅದನ್ನು ಅಭಿವ್ಯಕ್ತಿಸುವಲ್ಲಿಯೂ ಆಗುವುದು ಬಹುತೇಕ ನಿಶ್ಚಿತವೆಂಬುದು ಭಾಷಾತಜ್ಞರ ಅಭಿಪ್ರಾಯ. ಇದಲ್ಲದೆ, ಎಲ್ಲ ಅಧ್ಯಾಯದ ಕೊನೆಯಲ್ಲಿ 'ನಿಮ್ಮ ಭಾಷಾ ಕೌಶಲವನ್ನು ಪರೀಕ್ಷಿಸಿಕೊಳ್ಳಿ' ಎಂಬ ಅಭ್ಯಾಸವಿದ್ದು ಇಲ್ಲೆಲ್ಲ ಅನೇಕ ಬಗೆಯ ಭಾಷಾ ಕೌಶಲವನ್ನು ವರ್ಧಿಸಿಕೊಳ್ಳಲು ಉಪಯುಕ್ತ ಅಭ್ಯಾಸಗಳಿವೆ. ಅಲ್ಲಲ್ಲಿ ಕಾಗುಣಿತದ ಅಭ್ಯಾಸಗಳಿರುವುದು ಭಾಷಾ ಬಳಕೆಯ ನಿಖರತೆಗೆ ಸಹಾಯಕವಾಗುತ್ತದೆ. ಪುಸ್ತಕದ ಮತ್ತೊಂದು ಹೆಚ್ಚುಗಾರಿಕೆ ಏನೆಂದರೆ ಹಿಂದಿನ ಸ್ಪರ್ಧಾತ್ಮಕ ಪರೀಕ್ಷಾ ಪ್ರಶ್ನೆಪತ್ರಿಕೆಗಳಿಂದ ಕೆಲವೊಂದು ಆಯ್ದ ಮಾದರಿ ಪ್ರಶ್ನೆಗಳನ್ನು ಪ್ರತಿ ಅಧ್ಯಾಯದ ಕೊನೆಯಲ್ಲಿ ಕೊಟ್ಟಿರುವುದು. ನಾಮಪದ, ಕ್ರಿಯಾಪದ, ಸಂಧಿ, ಸಮಾಸ ಹೀಗೆ ಯಾವುದೇ ವಿಷಯವನ್ನು ಚರ್ಚಿಸುತ್ತಲೇ ಆ ವಿಷಯಕ್ಕೆ ಸಂಬಂಧಿಸಿದಂತೆ ಯಾವ ಬಗೆಯ ಪ್ರಶ್ನೆಗಳನ್ನು ಅರ್ಹತಾ ಪರೀಕ್ಷೆಯಲ್ಲಿ ಎದುರುನೋಡಬಹುದೆಂಬ ಅಂಶವನ್ನೂ ಸ್ಪಷ್ಟಪಡಿಸಿದ್ದಾರೆ. ಇದು ಜ್ಞಾನಾರ್ಜನೆಗೇ ಅಲ್ಲದೆ ಪರೀಕ್ಷೆಗೂ ಸಿದ್ಧವಾಗಲು ತುಂಬ ಸಹಾಯಕವಾಗುತ್ತದೆ.

ಇತ್ತೀಚಿನ ದಿನಗಳಲ್ಲಿ ಕನ್ನಡ ಬಳಕೆ ಕುರಿತಂತೆ ಗ್ರಾಂಥಿಕ ಹಾಗೂ ಆಡುನುಡಿಯಲ್ಲಿ ಸಾಕಷ್ಟು ಗೊಂದಲಗಳು ಕಂಡುಬರುತ್ತಿವೆ. ಉಚ್ಚಾರಣೆಯಲ್ಲಿ ಪದದ ಆದಿಯ 'ಹ'ಕಾರ ಲೋಪವಾಗುವುದು, ಅಲ್ಪಪ್ರಾಣ ಮಹಾಪ್ರಾಣ ಧ್ವನಿಗಳ ಬಳಕೆಯಲ್ಲಿ ಅಸ್ಪಷ್ಟತೆ, ನಾಲಗೆ–ನಾಲಿಗೆ, ಅಡಿಕೆ–ಅಡಕೆ, ಅಡಿಗೆ–ಅಡುಗೆ, ಇವುಗಳ ಪೈಕಿ ಯಾವುದು ಸರಿ, ಯಾವುದು ತಪ್ಪು, ಏಕೆ ಸರಿ, ಏಕೆ ತಪ್ಪು, ಜಾತ್ಯತೀತ – ಜಾತ್ಯಾತೀತ, ಅನಾವಶ್ಯಕ–ಅನವಶ್ಯಕ, ನಿರ್ದೇಶಕ – ನಿರ್ದೇಷಕ, ಸೂರ್ಯೋದಯ – ಸೂರ್ಯೋದಯ, ಕನಿಷ್ಟ –ಕನಿಷ್ಠ, ಅನುಪಯುಕ್ತ – ನಿರುಪಯುಕ್ತ, ಮನಃಶ್ಶಾಸ್ತ್ರ – ಮನಶ್ಶಾಸ್ತ್ರ, ಪುನಃ –ಪುನಹ, ವೈಶಿಷ್ಟ್ಯ – ವೈಶಿಷ್ಟ್ಯತೆ, ಅಂದ – ಅನ್ದ ಹೀಗೆ ಹತ್ತು ಹಲವು ಸಮಸ್ಯೆಗಳು ಕಲಿಯುವವರನ್ನು ಆಗಾಗ್ಗೆ ಕಾಡುವುದು ನಿಶ್ಚಿತ. ಇಂತಹ ಸಮಸ್ಯೆಗಳಿಗೆ ಇದಮಿತ್ಥಂ ಎಂದು ಖಚಿತವಾಗಿ, ಸಕಾರಣವಾಗಿ, ಅಂತೆಯೇ ತಾರ್ಕಿಕವಾಗಿ ವಿಶದಪಡಿಸುವ ಹೊತ್ತಗೆಗಳು ಹೆಚ್ಚಿಲ್ಲ. ಹೀಗಾಗಿ ಇಂತಹ ಪದೇ ಪದೇ ಕಾಡುವ ಸಮಸ್ಯೆ (ಎಫ್‌ಎಕ್ಯು)ಗಳನ್ನು ಬಗೆಹರಿಸುವ ಹೊತ್ತಗೆಗಳ ಅವಶ್ಯಕತೆ ಇದೆ. ಟಿ. ಎಸ್. ಗೋಪಾಲ್‌ರವರು ಅರ್ಹತಾ ಪರೀಕ್ಷೆಗಳನ್ನು ಎದುರಿಸುವ ವಿದ್ಯಾರ್ಥಿಗಳಿಗೆಂದು ಈ ಪುಸ್ತಕವನ್ನು ರಚಿಸಿದ್ದಾರಾದರೂ, ದಿನನಿತ್ಯ ನಮ್ಮ ಶಿಕ್ಷಕ – ಶಿಕ್ಷಕಿಯರು ಕನ್ನಡ ತರಗತಿಗಳಲ್ಲಿ ಎದುರಿಸುವ ಅರ್ಹತಾ ಪರೀಕ್ಷೆಗಳಿಗೂ ಈ ಹೊತ್ತಗೆ ಅತ್ಯಂತ ಉಪಯುಕ್ತವಾಗುವುದರಲ್ಲಿ ಸಂಶಯವಿಲ್ಲ.


**ಎಸ್. ಎಸ್. ಯದುರಾಜನ್**
ಸಂಖ್ಯೆ. ೪೩, ಬ್ಲಾಕ್ ೨, 'ಚಿನ್ಮಯಿ', ಮಧುವನ ಬಡಾವಣೆ
ಶ್ರೀರಾಮಪುರ ೨ನೇ ಹಂತ, ಮೈಸೂರು – ೫೭೦ ೦೨೩

# ಭಾರತದ ರೈತರ ಸಮಸ್ಯೆಗಳು ಪ್ರಭುತ್ವಗಳು, ಪರಿಹಾರ ಮತ್ತು ಆತ್ಮಹತ್ಯೆ

ವಿ. ಆರ್. ರಮೇಶ ಕೋಲಾರ



ರೈತರು ಎಂದಾಕ್ಷಣ ಆಧುನಿಕ ಸಮಾಜದ ಮನಸ್ಸಿನಲ್ಲಿ ಒಂದು ಸ್ಥಿರ ಚಿತ್ರಣ ಮೂಡುತ್ತದೆ. ಅದರಲ್ಲಿ ಹೆಚ್ಚಿನವರು ಬಡವರು, ಮುಗ್ಧರು, ಕಷ್ಟಸಹಿಷ್ಣುಗಳು. ಗಂಜಳ–ಗೊಬ್ಬರ, ಸೌದೆ ಹೊಗೆಯ ಮಧ್ಯೆ ಕೊಳಕು ಪರಿಸರದಲ್ಲೂ ಯಾವ ಸಂಕೋಚವೂ ಇಲ್ಲದೆ ಎಲ್ಲಾ ರಗಳೆಗಳ ನಡುವೆಯೂ ಆಗಾಗ ಹಾಡು ಹಸೆಗಳಲ್ಲಿ ಬದುಕಿಗೆ ಬಣ್ಣ ಕಟ್ಟಿಕೊಳ್ಳುವವರು. ಶತಮಾನಗಳಿಂದ ಅವರಿರುವುದೇ ಹೀಗೆ. ಅವರ ಕೊರತೆಗಳನ್ನು ನೀಗಬೇಕು, ಬದುಕು ಸುಧಾರಿಸಬೇಕು, ಅದಕ್ಕೆ ಬೇಕಾದ ಶಿಕ್ಷಣ, ಆರೋಗ್ಯ, ಉದ್ಯೋಗಾವಕಾಶಗಳು ಸಿಗಬೇಕು, ನಾಗರಿಕ ಬದುಕನ್ನು ಹಳ್ಳಿಯ ಜನರೂ ಅನುಭವಿಸಬೇಕು ಎಂಬ ಸಂವಿಧಾನ ಶಿಲ್ಪಿಗಳ ಆಶಯವನ್ನು ಪೂರೈಸುವಲ್ಲಿ ಸ್ವತಂತ್ರ ಭಾರತದ ಆಡಳಿತ ಯಂತ್ರ ವಿಫಲವಾಗುತ್ತಿದೆ. ಸ್ವಾತಂತ್ರ್ಯದ ನಂತರವೂ ರೈತರ ಬದುಕು ದುರ್ಭರವಾಗುತ್ತಾ ಇನ್ನಷ್ಟು ಭೀಕರವಾಗುವ ಲಕ್ಷಣಗಳು ಗೋಚರವಾಗುತ್ತಿವೆ. ದಿನೇದಿನೇ ರೈತರ ಆತ್ಮಹತ್ಯೆಗಳು ದ್ವಿಗುಣಗೊಳ್ಳುತ್ತಿವೆ. ಅದಕ್ಕೂ ನಮಗೂ ಯಾವುದೇ ಸಂಬಂಧವಿಲ್ಲದಂತೆ ನಮ್ಮ ನಾಗರಿಕ ಸುಶಿಕ್ಷಿತ ಸಮಾಜ, ಪ್ರಭುತ್ವಗಳು ನಡೆದುಕೊಳ್ಳುತ್ತಿವೆ. ಇಲ್ಲವೇ ಮೊಸಳೆ ಕಣ್ಣೀರು, ಬೊಗಳೆ ಸಮಾಧಾನದ ಮಾತುಗಳು, ಸಾಲಮನ್ನಾಗಳು, ಪರಿಹಾರ ಮುಂತಾದ ಪ್ರಹಸನಗಳಲ್ಲಿ ತೊಡಗಿವೆ.

ಕಷ್ಟಗಳನ್ನೇ ಹಾಸಿ ಹೊದೆದು ಬದುಕುತ್ತಾ, ತೀವ್ರ ಬರಗಾಲ, ಅನಾರೋಗ್ಯದ ಸ್ಥಿತಿಯಲ್ಲೂ ಹುಲ್ಲುಗರಿಕೆಯಂತೆ ನೆಲ ಕಚ್ಚಿ, ಅವಡುಗಚ್ಚಿ ಜೀವ ಹಿಡಿದುಕೊಂಡು ಬದುಕುವ ಜೀವ ಭಾರತೀಯ ರೈತರದು. ಅಂಥ ರೈತರಿಗೆ ಆತ್ಮಹತ್ಯೆ ಮಾಡಿಕೊಳ್ಳಬೇಕಾದ ಕರಾಳ ಸಂದರ್ಭ, ದುಸ್ಥಿತಿ ಏಕೆ ಬಂತು ಎಂಬುದನ್ನು ನಾವು ಮೊದಲು ಗುರುತಿಸಿಕೊಳ್ಳಬೇಕಾಗಿದೆ. ಕಳೆದ ಹತ್ತು ವರ್ಷಗಳಲ್ಲಿ ಸಂಭವಿಸಿದ ರೈತರ ಆತ್ಮಹತ್ಯೆಗಳ ಅಂಕಿ–ಸಂಖ್ಯೆಗಳನ್ನು ಕ್ರೋಢೀಕರಿಸಿದಾಗ ನಿಜಕ್ಕೂ ಆತಂಕವಾಗುತ್ತದೆ. ನೂರಲ್ಲ, ಸಾವಿರವಲ್ಲ, ಲಕ್ಷಾಂತರ ರೈತರು ಆತ್ಮಹತ್ಯೆಗೆ ಶರಣಾಗಿದ್ದಾರೆ. ಒಂದು ಸಮೀಕ್ಷೆಯ ಪ್ರಕಾರ ದೇಶದಲ್ಲಿ ಸುಮಾರು ಪ್ರತಿ ಐವತ್ತು ನಿಮಿಷಗಳಿಗೆ ಒಬ್ಬೊಬ್ಬರಂತೆ ರೈತರು ಸಾವಿಗೆ ಶರಣಾಗುತ್ತಿದ್ದಾರೆ. ಜಗತ್ತಿನ ಚರಿತ್ರೆಯಲ್ಲಿ ಬೇರೆ ಬೇರೆ ಸಂದರ್ಭದ, ಪ್ರದೇಶದ ಭೀಕರ ದುರಂತಗಳನ್ನು ಓದಿ ತಿಳಿದ ನಮಗೆ ಹಿಂದೆಂದೂ ಕಂಡು ಕೇಳರಿಯದ ಬಹುದೊಡ್ಡ ದುರಂತವೊಂದು ನಮ್ಮ ಕಣ್ಣೆದುರೇ ನಡೆಯುತ್ತಿರುವಾಗ ಯಾರೂ ಅತ್ತ ಗಂಭೀರ ಗಮನ ಹರಿಸುತ್ತಿಲ್ಲವಲ್ಲ ಎಂದು ಖೇದವಾಗುತ್ತದೆ. ರೈತ ಜೈಲಿನ ಬಂಧಿಗಳಿಗಿಂತಲೂ ಕಳಪೆಯಾದ ಆಹಾರ ಸೇವಿಸುತ್ತಿದ್ದಾನೆ. ಹೀಗೆ ಕೃಷಿಯನ್ನೇ ಹಾಸಿ ಹೊದ್ದು ಮಲಗುವ ಭಾರತೀಯ ಅನ್ನದಾತನ ಬದುಕು ಏಕೆ ದುರ್ಭರಗೊಳ್ಳುತ್ತಿದೆ? ಆತ್ಮಹತ್ಯೆಗೆ ತನ್ನನ್ನು ದೂಡಿಕೊಳ್ಳುವಷ್ಟು ಮಾನಸಿಕವಾಗಿ ಜರ್ಝರಿತವಾಗುವಂತೆ ಅವನನ್ನು ಕಾಡುತ್ತಿರುವ ಸಂಕಟಗಳಾವುವು ? ಅದಕ್ಕೆ ಕಾರಣಗಳೇನು ಎಂಬುದನ್ನು ಗಮನಿಸಿದರೆ, ರೈತ ಮತ್ತು ಪ್ರಭುತ್ವಗಳ ನಡುವಿನ ಸಂಬಂಧದಲ್ಲಿ ವಸಾಹತುಶಾಹಿ ಹಾಗೂ ವಸಾಹತೋತ್ತರ ಕಾಲಘಟ್ಟಗಳಲ್ಲಿ ಯಾವುದೇ ವ್ಯತ್ಯಾಸ ಕಾಣುವುದಿಲ್ಲ. ಎಲ್ಲಾ ಪ್ರಭುತ್ವಗಳು ರೈತರನ್ನು ಕಡೆಗಣಿಸುತ್ತಲೇ ಬಂದಿರುವ ಇತಿಹಾಸ ನಮ್ಮ ಮುಂದೆ ನಿಲ್ಲುತ್ತದೆ.

ರೈತರನ್ನು ಮೂಲತಃ ನಿಷ್ಕ್ರಿಯರು, ಸಂಪ್ರದಾಯಸ್ಥ ಮೂಢರು, ಪ್ರತಿಗಾಮಿಗಳು ಎಂದೆಲ್ಲಾ ಕರೆಯಲಾಗುತ್ತಿದೆ. ಅಂದರೆ ರೈತರು ಒಂದು ವರ್ಗವಾಗಿ ಪ್ರತಿಭಟಿಸಲಾರರು. ಅಧಿಕಾರ ಹಾಗೂ ಸರಕಾರಗಳನ್ನು ಪ್ರಶ್ನಿಸಲಾರರು. ರೈತ ಸಮುದಾಯ ವಿಶಾಲವಾದ ಚೌಕಟ್ಟನ್ನು ಹೊಂದಿದ್ದು, ಅವರೆಲ್ಲರೂ ಒಂದೇ ವೇದಿಕೆಯಲ್ಲಿ ಬಂದು ಪ್ರಭುತ್ವಗಳನ್ನಾಗಲಿ, ಬಂಡವಾಳಶಾಹಿಗಳನ್ನಾಗಲಿ ಅಥವಾ ಊಳಿಗಮಾನ್ಯ ರಚನೆಯನ್ನಾಗಲಿ ಪ್ರಶ್ನಿಸಲಾರರು ಎಂಬ ಭಂಡತನ ನಮ್ಮನ್ನು ಆಳುವವರಿಗಿದೆ. ರೈತರ ಸಂಕಷ್ಟಗಳನ್ನು ನಿವಾರಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತವಾಗಬೇಕಾದ ಸರ್ಕಾರಗಳು ಅವರ ಸಂಕಟಗಳನ್ನೇ ಬಂಡವಾಳವಾಗಿಸಿಕೊಂಡು ಭೂ ಪರಭಾರೆಯಲ್ಲಿ ತೊಡಗಿವೆ. ಅದನ್ನೇ ಅಭಿವೃದ್ಧಿಯೆಂದು ಬಿಂಬಿಸುತ್ತಿವೆ. ಬೇಲಿಯೇ ಎದ್ದು ಹೊಲ ಮೇಯುವ ಸ್ಥಿತಿಯಂತಾಗಿದೆ ರೈತರ ಬದುಕು. ಹೊಲಗಳ ಕಂಪನೀಕರಣ, ವಿದೇಶೀ ಆಹಾರ ಸರಕುಗಳ ಮುಕ್ತ ಆಮದು,

ಸರ್ಕಾರಿ ಸೌಲಭ್ಯಗಳು ಕಾರ್ಯಾಂಗದ ಭ್ರಷ್ಟರಿಂದ ರೈತರಿಗೆ ತಲುಪದಂತಾಗಿರುವುದು ಒಂದು ಕಡೆಯಾದರೆ, ತಲುಪುವ ಕೆಲವೇ ಸೌಲಭ್ಯಗಳೂ ಸಹ ಮೂರ್ನಾಲ್ಕು ಶ್ರೀಮಂತ ಜಮೀನ್ದಾರರ ಕೈವಶವಾಗುತ್ತಿರುವುದು ರೈತರನ್ನು ಮತ್ತಷ್ಟು ನಿರಾಶೆಗೆ ನೂಕಿದೆ. ಸರ್ಕಾರದಿಂದ ದೊರೆಯುತ್ತಿರುವ ಸೌಲಭ್ಯಗಳಾದರೂ ಯಾವುವು ? ಸಬ್ಸಿಡಿಗಳು, ಬ್ಯಾಂಕ್ ಸಾಲ, ಸಾಲಮನ್ನಾ, ಕೃಷಿಯಂತ್ರಗಳು ಮುಂತಾದುವು ಇವು ಸಣ್ಣ ಹಿಡುವಳಿದಾರರಿಗೆ ಅಗತ್ಯವೇ ಅಥವಾ ಇವು ಸಣ್ಣ ಹಿಡುವಳಿದಾರರಿಗೆ ತಲುಪುವಷ್ಟು ಸರ್ಕಾರಿ ನಿಯಮಗಳು ಸಡಿಲಗೊಂಡಿವೆಯೇ ಎಂಬುದನ್ನೂ ಸಹ ಗಮನಿಸಬೇಕಿದೆ.







*ಮನುಷ್ಯನ ದುರಾಸೆಗಳಿಗೆ ಬಲಿಯಾಗುತ್ತಿರುವ ಕಾಡುಗಳು*



*ಬೆಡ್ಡಗುಡ್ಡಗಳನ್ನೇ ಇಲ್ಲವಾಗಿಸುತ್ತಿರುವ ಗಣಿಗಾರಿಕೆಗಳು*

ಅದರ ಮೂಲಕ ಲಾಭ ಪಡೆದು ಸಂಪತ್ತನ್ನು ದ್ವಿಗುಣಗೊಳಿಸಿಕೊಳ್ಳುವ ನಿಟ್ಟಿನಲ್ಲಿ ಹಲವು ಖಾಸಗಿ ಕಂಪನಿಗಳು ಕಾರ್ಯಪ್ರವೃತ್ತವಾಗಿವೆ. ಇದರ ಪರಿಣಾಮ ಬದುಕಿನ ಜೀವನಾಧಾರವೇ ಆಗಿದ್ದ ಭೂಮಿಯನ್ನು ಕಳೆದುಕೊಂಡ ರೈತರು ನಿರ್ಗತಿಕರಾಗಿ ಆತ್ಮಹತ್ಯೆಗಳಿಗೆ ಶರಣಾಗುತ್ತಿದ್ದಾರೆ, ಇಲ್ಲವೇ ಬಂಡವಳಿಗರು ನೀಡುವ ಚಿಲ್ಲರೆ ಹಣವನ್ನು ತೆಗೆದುಕೊಂಡು ಕೃಷಿಗೆ ವಿದಾಯ ಹೇಳಿ ನಗರಗಳಿಗೆ ವಲಸೆ ಹೋಗುತ್ತಿದ್ದಾರೆ. ಹಾಗಂತ ಸರಕಾರಗಳೇನೂ ಸುಮ್ಮನೆ ಕೂತಿಲ್ಲ. ರೈತರಿಗೆ ನೆರವಾಗುವ ಪ್ರಹಸನಗಳಲ್ಲಿ ಇಲ್ಲವೇ ಸಾಲ ಮನ್ನಾಗಳು, ಪರಿಹಾರದ ಆಶ್ವಾಸನೆಗಳಲ್ಲಿ ತೊಡಗಿವೆ. ಇವು ಹೇಳಿಕೆಗಳಿಗೆ ಮಾತ್ರ ಸೀಮಿತ. ಇಲ್ಲವೇ ಆ ಸವಲತ್ತುಗಳೂ ಸಹ ಶ್ರೀಮಂತ ಭೂಮಾಲೀಕರ ಪಾಲಾಗುತ್ತಿವೆ. ಸರ್ಕಾರಗಳು ಮಾತ್ರ ಜಾಹೀರಾತು ಗಳನ್ನು ನೀಡಿ ದೊಡ್ಡದಾಗಿ ಬಿಂಬಿಸಿಕೊಳ್ಳುತ್ತಿವೆ. ಆದರೆ ಇದಕ್ಕಿಂತ ಅಧಿಕ ಸೌಕರ್ಯಗಳನ್ನು, ವಿನಾಯಿತಿಗಳನ್ನು ಉದ್ಯಮಪತಿಗಳಿಗೆ ನೀಡುತ್ತಿರುವುದು ಮಾತ್ರ ಸುದ್ದಿಯಾಗುವುದಿಲ್ಲ. "ರೈತರ ಸಾಲ ಮನ್ನಾ ಮಾಡಲೆಂದು ಕೇಂದ್ರ ಸರ್ಕಾರ ೨೦೦೭ರಲ್ಲಿ ಒಮ್ಮೆ ಮಾತ್ರ ೬೦ ಸಾವಿರ ಕೋಟಿ ರೂಪಾಯಿಗಳನ್ನು ತೆಗೆದಿರಿಸಿದಾಗ, ಎಲ್ಲಾ ಮಾಧ್ಯಮಗಳಲ್ಲೂ ಭಾರಿ ಚರ್ಚೆ ನಡೆದವು. ರೈತರ ಬಗ್ಗೆ ಸರಕಾರಕ್ಕಿರುವ ಕಾಳಜಿಯನ್ನು ಹಾಡಿ ಹೊಗಳುವ ವರದಿಗಳು ಬಂದವು. ಆದರೆ ೧೯೯೧ರಿಂದ ಪ್ರತಿವರ್ಷವೂ ಕಾರ್ಪೊರೇಟ್ ಬಿಸಿನೆಸ್ ಕಂಪನಿಗಳಿಗೆ ಸರಾಸರಿ ೪೦ ಸಾವಿರ ಕೋಟಿ ರೂಪಾಯಿಗಳ ವಿನಾಯಿತಿಗಳನ್ನು ಘೋಷಿಸಲಾಗುತ್ತಿದೆ ಪ್ರತಿವರ್ಷವೂ ! ಆದರೆ ಅದರ ವಿವರ–ವಿಶ್ಲೇಷಣೆಗಳು ಪ್ರಕಟವಾಗುವುದೇ ಇಲ್ಲ." (ರೈತರ ಬವಣೆಗಳ ಬಗ್ಗೆ – ಸಾಯಿನಾಥ್ ಪಿ. – ಅನು : ಟಿ. ಎಲ್. ಕೃಷ್ಣೇಗೌಡ, ಕ್ರಿಯಾ ಪ್ರಕಾಶನ, ಬೆಂಗಳೂರು, ೨೦೦೯, ಪುಟ. ೧೩) ಇಂದು ರೈತರು ಲಕ್ಷ ಲಕ್ಷ ಸಂಖ್ಯೆಯಲ್ಲಿ ಆತ್ಮಹತ್ಯೆಗೆ ಶರಣಾಗುತ್ತಿದ್ದರೆ, ಇದೇ ಅವಧಿಯಲ್ಲಿ ನಮ್ಮ ದೇಶದ ಶ್ರೀಮಂತ ಬಂಡವಳಿಗ ಕೋಟ್ಯಧಿಪತಿಗಳ ಪ್ರಮಾಣ ಐದು ಪಟ್ಟು ಅಧಿಕವಾಗುತ್ತಿದೆ. ಪ್ರಪಂಚದ ಶ್ರೀಮಂತರ ಪಟ್ಟಿಯಲ್ಲಿ ಭಾರತದ ಶ್ರೀಮಂತರ ಹೆಸರುಗಳು ಹೆಚ್ಚುತ್ತಲೇ ಇವೆ. ರೈತರ ಆತ್ಮಹತ್ಯೆಗಳಿಗೂ, ಬಂಡವಳಿಗರ ಸಂಪತ್ತಿನ ಅಗಾಧ ಏರಿಕೆಗೂ ಸಂಬಂಧವಿಲ್ಲವೇ ? ಈ ಉದ್ಯಮಪತಿಗಳು ಇಷ್ಟು ವೇಗವಾಗಿ ತಮ್ಮ ಸಂಪತ್ತನ್ನು ಹೆಚ್ಚಿಸಿಕೊಂಡಿರುವುದಕ್ಕೂ ನಮ್ಮ ಸರ್ಕಾರಗಳು ರೂಪಿಸಿ ಜಾರಿಗೆ ತಂದಿರುವ ಶಾಸನಗಳು ಕಾರಣ ವಾಗುವುದಿಲ್ಲವೇ ? ನಿಜವಾಗಿಯೂ ಸರ್ಕಾರಗಳು ಸಾಮಾನ್ಯ ಜನಸಮುದಾಯಕ್ಕೆ ಉತ್ತರದಾಯಿತ್ವವಾಗ ಬೇಕಿತ್ತು. ಆದರೆ ಸ್ವಾತಂತ್ರ್ಯಾ ನಂತರದ ಭಾರತದ ಪ್ರಭುತ್ವಗಳು ಇದನ್ನೂ ಕಡೆಗಣಿಸಿ ಸಂವಿಧಾನದ ಆಶಯಗಳನ್ನು ಮೂಲೆಗುಂಪಾಗಿ ಮಾಡಿ ದೇಶದ ಅನ್ನದಾತನಿಗೆ ಆತ್ಮಹತ್ಯೆಯನ್ನು ಬಿಟ್ಟರೆ ಗತ್ಯಂತರ ವಿಲ್ಲದಂತೆ ಅಸಹಾಯಕನನ್ನಾಗಿ ಮಾಡಿರುವುದೇ ಪ್ರಜಾಪ್ರಭುತ್ವದ ವ್ಯಂಗ್ಯ. ಹಾಗಂತ ರೈತರೇನು ಅನ್ಯ ಪ್ರಯತ್ನಗಳು, ಪರ್ಯಾಯಗಳ ಅರಿವಿಲ್ಲದೆ ಆತ್ಮಹತ್ಯೆಗೆ ಶರಣಾಗುತ್ತಿಲ್ಲ. ಡೆಮಾಕ್ರಸಿಯಲ್ಲಿನ ವಿವಿಧ ಪರ್ಯಾಯಗಳ ಹಿನ್ನೆಲೆಯಲ್ಲಿ ಪ್ರತಿಭಟನೆಗಳು, ಮನವಿಗಳು, ಸತ್ಯಾಗ್ರಹಗಳು, ಜಾಥಾಗಳು, ಚಳವಳಿಗಳು ಸಾಕಷ್ಟು ಪ್ರಮಾಣದಲ್ಲಿ ನಡೆದಿವೆ. ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಹುಟ್ಟಿಕೊಂಡದ್ದೇ ರೈತ ಚಳುವಳಿ.

ಕರ್ನಾಟಕದ ರೈತ ಚಳುವಳಿಗೆ ಬಹುದೊಡ್ಡ ಇತಿಹಾಸವೇ ಇದೆ. ಕಾಗೋಡು ಗೇಣಿದಾರರ ಭೂ ಚಳುವಳಿ, ಶಿವಮೊಗ್ಗ ರೈತ ಚಳುವಳಿ, ಮಲಪ್ರಭಾ ರೈತ ಚಳುವಳಿ, ಸಂಡೂರು ಹೋರಾಟ ಮುಂತಾದ ಚಳುವಳಿಗಳು ನಡೆದಿವೆ. ನೂರಾರು ರೈತ ಸಂಘಟನೆಗಳು ಹುಟ್ಟಿಕೊಂಡಿವೆ. ರೈತರನ್ನು, ಅವರ ಒಕ್ಕೂಟವನ್ನು ಒಡೆಯುವುದು ಅವರ ನಡುವೆ ಒಡಕುಂಟುಮಾಡುವುದು ಸಹ ಪ್ರಭುತ್ವಗಳಿಗೆ ತುಂಬ ಸುಲಭ. ಏಕೆಂದರೆ ಪ್ರದೇಶದಿಂದ ಪ್ರದೇಶಕ್ಕೆ ರೈತರ ಕೃಷಿ ಸಮಸ್ಯೆಗಳು ಭಿನ್ನವಾಗಿರುತ್ತವೆ. ಕಬ್ಬು, ತೊಗರಿ, ಹತ್ತಿ, ಟಮೋಟ, ಕಾಫಿ, ಏಲಕ್ಕಿ, ಭತ್ತ ಮುಂತಾದ ಬೆಳೆಗಾರರ ಸಮಸ್ಯೆಗಳು ಒಂದಕ್ಕೊಂದು ಸಂಬಂಧವಿಲ್ಲದಷ್ಟು ತೀರ ಭಿನ್ನವಾಗಿರುತ್ತವೆ. ಜಾತಿ, ಧರ್ಮ, ಪ್ರದೇಶಗಳ ತಾರತಮ್ಯ ನೀತಿ, ಮನೋಭಾವಗಳು ಸಹ ರೈತರು ಒಂದು ವೇದಿಕೆಯಲ್ಲಿ ಒಗ್ಗೂಡುವುದಕ್ಕೆ ಅಡ್ಡಿಗಳಾಗಿವೆ. ಹಾಗಾಗಿ ಇವರೆಲ್ಲ ಒಂದು ವರ್ಗವಾಗಿ ಸಂಘಟಿತರಾಗುವುದು, ಹೋರಾಟ ನಡೆಸುವುದು ಸುಲಭವಲ್ಲ. ಇವೆಲ್ಲವುಗಳನ್ನು ಸರ್ಕಾರಗಳು ದಮನ ಮಾಡುವ ನಿಟ್ಟಿನಲ್ಲಿ ನಿರಂತರ ಶ್ರಮಿಸಿವೆ. ಒಡೆದು ಆಳುವ ನೀತಿಯನ್ನು ಸಹ ಅನುಸರಿಸಿವೆ. ಆದರೆ ರೈತರೇನು ಸರ್ಕಾರಗಳ ಎಲ್ಲಾ ದಮನಕಾರಿ ನೀತಿಗಳಿಗೆ ಹೆದರಿಕೊಂಡು ಕೂತಿಲ್ಲ. ಅವರ ಎಲ್ಲಾ ಹಿಂಸೆಗಳನ್ನೂ ಎದುರಿಸಿದ್ದಾರೆ, ಪ್ರತಿಭಟಿಸಿದ್ದಾರೆ. ಆಳುವ ವರ್ಗಗಳ ಕುತಂತ್ರಗಳಿಗೆ ರೈತರು ಜಗ್ಗದಿದ್ದರೆ ಪೊಲೀಸರನ್ನು ಬಳಸಿ ಅವರನ್ನು ಸಾಯಬಡಿಯ ಲಾಗುತ್ತದೆ ಹಾಗೂ ಕ್ರಿಮಿನಲ್ ಕೇಸುಗಳನ್ನು ಜಡಿದು ಜೈಲಿಗೆ ಅಟ್ಟುವುದು, ನ್ಯಾಯಾಲಯಗಳಿಗೆ ಅಲೆದಾಡುವಂತೆ ಮಾಡುವುದನ್ನು ಇಲ್ಲವೇ ಅವರನ್ನು ರೈತರೇ ಅಲ್ಲ ಎಂದು ವರದಿಗಳನ್ನು ರೂಪಿಸಿ ಜನರನ್ನು, ನ್ಯಾಯಾಲಯಗಳನ್ನು ದಿಕ್ಕುತಪ್ಪಿಸುವ ಕೃತ್ಯಗಳನ್ನು ಎಲ್ಲಾ ಸರ್ಕಾರಗಳು ಮಾಡುತ್ತಾ ಬಂದಿವೆ. ಭೂಮಾಲೀಕರ ವಿರುದ್ಧ ನಡೆದ ಕಾಗೋಡು ರೈತ ಚಳುವಳಿ ಹಾಗೂ ಇತ್ತೀಚೆಗೆ ಹಾವೇರಿಯಲ್ಲಿ ರಸಗೊಬ್ಬರಕ್ಕಾಗಿ ನಡೆದ ಹೋರಾಟ, ಕಾವೇರಿ, ಮಹದಾಯಿ ಹಾಗೂ ಶಾಶ್ವತ ನೀರಾವರಿ ಹೋರಾಟಗಳನ್ನು, ಹೋರಾಟಗಾರರನ್ನು ಅಂದಂದಿನ ಸರ್ಕಾರಗಳು ನಡೆಸಿಕೊಂಡದ್ದು ಇದಕ್ಕೆ ಉದಾಹರಣೆಯಾಗಿದೆ.

ಆಧುನಿಕ ಸಂದರ್ಭದಲ್ಲಿ ನಮ್ಮ ಶಿಕ್ಷಣ ಪದ್ಧತಿ, ಸಾಹಿತ್ಯಿಕ ಚಳುವಳಿಗಳು, ಹೋರಾಟಗಳು, ಮಾಧ್ಯಮಗಳು, ರೈತರ ಸಮಸ್ಯೆಗಳನ್ನು ಕುರಿತು ಚರ್ಚಿಸಬೇಕಿತ್ತು. ಸರ್ಕಾರಗಳಿಗೆ ಎಚ್ಚರಿಕೆಯನ್ನು ನೀಡಬೇಕಿತ್ತು. ಆದರೆ ಅವೂ ಸಹ ಇಂದು ಬಂಡವಳಿಗರ ಕಪಿಮುಷ್ಟಿಯಲ್ಲಿವೆ. ಭಾರತದ ಬೆನ್ನೆಲುಬಾದ ರೈತನನ್ನೂ, ಅವನ ಕಸುಬನ್ನೂ ಕಡೆಗಣಿಸಿವೆ. ಇವತ್ತಿಗೂ ನಮ್ಮ ಸರಕಾರಗಳಿಗೆ ಸಮರ್ಪಕವಾದ ಒಂದು ಕೃಷಿ ನೀತಿಯನ್ನು ರೂಪಿಸಲು ಸಾಧ್ಯವಾಗಿಲ್ಲ ಎಂದರೆ ಸರ್ಕಾರದ ಆಸಕ್ತಿ ಮತ್ತು ಇಚ್ಛಾಶಕ್ತಿ ಹಾಗೂ ಅದರ ರೈತ ಕಾಳಜಿಯ ಬಗ್ಗೆ ಅನುಮಾನಗಳು ಮೂಡುತ್ತವೆ. ಈ ರೈತ ಕಾಳಜಿಯ ಪ್ರಹಸನಗಳು ಅವನಲ್ಲಿ ಯಾವ

ಆಶಾಭಾವನೆಯನ್ನೂ ಉಂಟುಮಾಡದೆ ಅವನನ್ನು ಮತ್ತಷ್ಟು ಏಕಾಂಗಿಯನ್ನಾಗಿ ಮಾಡಿದೆ. ಈಗ ಅವನಿಗಿರುವ ಏಕೈಕ ಮಾರ್ಗ ಆತ್ಮಹತ್ಯೆ ಎಂದು ಭಾವಿಸಿದ್ದಾನೆ.

ರೈತ ಎಂದರೆ ಕೇವಲ ಭೂಮಾಲೀಕ ಮಾತ್ರವಲ್ಲ, ರೈತಕಾರ್ಮಿಕನನ್ನೂ ಒಳಗೊಂಡಂತೆ ಕಮ್ಮಾರ, ದಳ್ಳಾಳಿ, ವ್ಯಾಪಾರಿ, ಕ್ಷೌರಿಕ, ನೀರಗಂಟಿ, ಕೃಷಿವಿಜ್ಞಾನಿ, ಸಂಶೋಧಕ, ಬೇಟೆಗಾರ ಇತರೆ ಕೃಷಿಯ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುವ ಇಡೀ ಗ್ರಾಮವೇ ಅವರಿಗೆ ರೈತಸಮುದಾಯವಾಗಿ ಕಾಣುತ್ತದೆ. ಅಷ್ಟೇ ಅಲ್ಲ ಕೃಷಿಯೆಂದರೆ ಬರೀ ಬೆಳೆ ಬೆಳೆಯುವುದು ಮಾತ್ರವಲ್ಲ, ಅದನ್ನು ಅವಲಂಬಿಸಿದ ಮಾರುಕಟ್ಟೆ ವ್ಯವಸ್ಥೆ, ಸಂಚಾರ ವ್ಯವಸ್ಥೆ, ವಿಜ್ಞಾನ ತಂತ್ರಜ್ಞಾನದ ಪ್ರಯೋಗಾಲಯಗಳು, ಹೊಸ ಆವಿಷ್ಕಾರಗಳು, ಜಾಗತಿಕ ತೀರ್ಮಾನಗಳು, ಸರ್ಕಾರಿ ಪ್ರಾಯೋಜಿತ ಗಣಿಗಾರಿಕೆ, ಹಣಕಾಸಿನ ಯೋಜನೆಗಳು, ಕೈಗಾರಿಕೆಗಳಿಗೆ ನೀಡುತ್ತಿರುವ ಅತಿಯಾದ ಪ್ರಾಮುಖ್ಯತೆ, ವಿದೇಶಿ ನೀತಿಗಳು, ರಫ್ತು – ಆಮದು ವಹಿವಾಟು ಇವುಗಳೆಲ್ಲವನ್ನೂ ರೈತನಿಂದ, ಅವನ ಕಸುಬಿನಿಂದ ಪ್ರತ್ಯೇಕಿಸಿ ನೋಡುವ ಆಲೋಚನೆಗಳೂ ಸೇರಿದಂತೆ ಕುಶಲಕಲೆಗಳು, ಪರಿಸರದ ಕಾಡು, ಕೆರೆ, ಕುಂಟೆಗಳು, ಸಸ್ಯ–ಪ್ರಾಣಿ–ಪಕ್ಷಿ ಸಂಕುಲಗಳನ್ನೂ ಒಳಗೊಂಡಂತೆ ಎಲ್ಲವನ್ನು ಏಕೀಭವಿಸಿ ನೋಡದ ಹಿನ್ನೆಲೆಯಲ್ಲಿ ರೈತರ ಸಮಸ್ಯೆಗಳನ್ನು ಸಮಗ್ರವಾಗಿ ಅರಿಯಲು ಅಸಾಧ್ಯ ವಾಗಿದೆ. ಈ ಸರಪಳಿಯಲ್ಲಿ ಯಾವ ಒಂದು ವಲಯ ಅವನತಿಯಾದರೂ ರೈತನನ್ನೂ ಒಳಗೊಂಡಂತೆ ಇಡೀ ವ್ಯವಸ್ಥೆಯೇ ನಾಶವಾಗುತ್ತದೆ. ಸಮಾಜದ ಪ್ರತಿಯೊಂದು ಆಗುಹೋಗುಗಳು, ಪ್ರತಿಯೊಂದು ಜೀವಜಾಲದ ಅವನತಿ ಮತ್ತು ರೈತನೊಂದಿಗೆ ಅಂತರ್‌ಸಂಬಂಧವನ್ನು ಬೆಸೆದು ನೋಡುವುದರಲ್ಲಿ ವಿಫಲರಾಗಿರುವುದೂ ಸಹ ರೈತನ ಅವನತಿಗೆ ಕಾರಣವಾಗಿದೆ. ಈ ಹಿನ್ನೆಲೆಯಲ್ಲಿ ಸಂಶೋಧನೆಗಳು, ಸರ್ಕಾರಗಳು, ರೈತ ಹೋರಾಟಗಾರರು, ಚಿಂತಕರು, ರೈತರು ಸಹ ಎಡವಿದ್ದಾರೆ ಎನಿಸುತ್ತದೆ.

ಸರ್ಕಾರಿ ಸೌಲಭ್ಯಗಳು ಕಾರ್ಯಾಂಗದ ಭ್ರಷ್ಟರಿಂದ ರೈತರಿಗೆ ತಲುಪದಂತಾಗಿರುವುದು ಒಂದು ಕಡೆಯಾದರೆ, ತಲುಪುವ ಕೆಲವೇ ಸೌಲಭ್ಯಗಳೂ ಸಹ ಮೂರ್‍ನಾಲ್ಕು ಶ್ರೀಮಂತ ಜಮೀನ್ದಾರರ ಕೈವಶವಾಗುತ್ತಿರುವುದು ರೈತರನ್ನು ಮತ್ತಷ್ಟು ನಿರಾಶೆಗೆ ನೂಕಿದೆ.

## ಅಭಿನಂದನೆ

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ೨೦೧೭ನೇ ಸಾಲಿನ ಪ್ರತಿಷ್ಠಿತ 'ನಾಡಪ್ರಭು ಕೆಂಪೇಗೌಡ ಪ್ರಶಸ್ತಿ'ಯನ್ನು ಸಾಹಿತ್ಯ ಕ್ಷೇತ್ರದಲ್ಲಿ ಡಾ॥ ವಸುಂಧರಾ ಭೂಪತಿ ಹಾಗೂ ಪ್ರೊ॥ ಎಂ. ಎಚ್. ಕೃಷ್ಣಯ್ಯ ಅವರಿಗೆ ಮತ್ತು ರಂಗಭೂಮಿ ಕ್ಷೇತ್ರದಲ್ಲಿ ಶ್ರೀ ಶಶಿಕಾಂತ ಯಡಹಳ್ಳಿ ಅವರಿಗೆ ನೀಡಲಾಗಿದೆ. ಅವರಿಗೆಲ್ಲರಿಗೂ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಸರ್ಕಾರದಿಂದ ದೊರೆಯುತ್ತಿರುವ ಸೌಲಭ್ಯಗಳಾದರೂ ಯಾವುವು ? ಸಬ್ಸಿಡಿಗಳು, ಬ್ಯಾಂಕ್ ಸಾಲ, ಸಾಲಮನ್ನಾ, ಕೃಷಿಯಂತ್ರಗಳು ಮುಂತಾದುವು ಇವು ಸಣ್ಣ ಹಿಡುವಳಿದಾರರಿಗೆ ಅಗತ್ಯವೇ ಅಥವಾ ಇವು ಸಣ್ಣ ಹಿಡುವಳಿದಾರರಿಗೆ ತಲುಪುವಷ್ಟು ಸರ್ಕಾರಿ ನಿಯಮಗಳು ಸಡಿಲಗೊಂಡಿವೆಯೇ ಎಂಬುದನ್ನೂ ಸಹ ಗಮನಿಸಬೇಕಿದೆ. ಸಣ್ಣ ಹಿಡುವಳಿದಾರರು ಮಳೆಯಾಧಾರಿತ ಕೃಷಿಯನ್ನು ನಡೆಸುತ್ತಿದ್ದು, ಅವರಿಗೆ ಈ ಮೇಲ್ಕಂಡ ಸರ್ಕಾರಿ ಸೌಲಭ್ಯಗಳ ಅಗತ್ಯವೇ ಇರುವುದಿಲ್ಲ. ಹಾಗಾಗಿ ಸರ್ಕಾರಿ ಯೋಜನೆಗಳು ಸಮಗ್ರವಾಗಿ ರೈತ ಸಮುದಾಯವನ್ನು ಪ್ರತಿನಿಧಿಸು ವಂತಿರಬೇಕು ಹಾಗೂ ಕೃಷಿಯೇತರ ಉದ್ದಿಮೆಗಳಿಗೆ ಸಮಾನಾಂತರವಾಗಿ ಕೃಷಿಗೂ ಮಾನ್ಯತೆ ದೊರೆಯ ಬೇಕು. ಈ ಹಿನ್ನೆಲೆಯಲ್ಲಿ ಸರ್ಕಾರಗಳು ಯೋಜನೆ ಗಳನ್ನು ರೂಪಿಸುವುದರಲ್ಲಿ ಅವುಗಳನ್ನು ರಚನಾತ್ಮಕವಾಗಿ ಸಾಧ್ಯವಾಗಿಸುವಲ್ಲಿ ವಿಫಲವಾಗಿವೆ. ಚುನಾವಣಾ ದೃಷ್ಟಿಯಿಂದ ನಿರ್ದಿಷ್ಟ ಉದ್ದೇಶವಿಲ್ಲದೆ ಕ್ಷಣಿಕ ಮತ್ತು ಅಲ್ಪಕಾಲಿಕ ಯೋಜನೆಗಳನ್ನು ರೂಪಿಸುತ್ತಿರುವುದು ರೈತರ ಸಮಸ್ಯೆಗಳು ನಿರಂತರತೆಯನ್ನು ಕಾಯ್ದುಕೊಳ್ಳು ವಂತಾಗಿವೆ. ಆದ್ದರಿಂದ ರೈತರ ಪ್ರದೇಶಕ್ಕನುಗುಣವಾಗಿ, ಮಾರುಕಟ್ಟೆ ವ್ಯವಸ್ಥೆ, ವಿದ್ಯುತ್, ನೀರಾವರಿ ಸೌಲಭ್ಯ ಮುಂತಾದ ದೀರ್ಘಾವಧಿ ಸಮಸ್ಯೆಗಳ ನಿವಾರಣೆಗೆ ಸಂಬಂಧಿಸಿದ ಯೋಜನೆಗಳನ್ನು ರೂಪಿಸಿ ರಚನಾತ್ಮಕವಾಗಿ ಕಾರ್ಯರೂಪಕ್ಕೆ ತಂದರೆ ಮಾತ್ರವೇ ರೈತರು ತಮ್ಮ ಬವಣೆಗಳಿಂದ, ಆತ್ಮಹತ್ಯೆಯ ತೀರ್ಮಾನಗಳಿಂದ ಮುಕ್ತರಾಗಲು ಸಾಧ್ಯವಾಗುತ್ತದೆ.



ವಾಯುಮಾಲಿನ್ಯ

ಜಲಮಾಲಿನ್ಯ

ಸಣ್ಣ ಹಿಡುವಳಿದಾರರಿಗೆ ಕೃಷಿ ಸಾಲ ನೀಡುವ ಬ್ಯಾಂಕುಗಳು ಮತ್ತು ಸರ್ಕಾರಗಳು ಇಬ್ಬಗೆಯ ನೀತಿಯನ್ನು ಅನುಸರಿಸುತ್ತವೆ. ಸಾಲ ಹಿಂತಿರುಗಿಸದ ರೈತರ ಮನೆಗಳನ್ನು, ಅವರ ಗೃಹೋಪಯೋಗಿ ವಸ್ತುಗಳನ್ನು ಜಪ್ತಿ ಮಾಡುವುದು ಅವರನ್ನು ಸಾಮಾಜಿಕವಾಗಿ ಅವಮಾನಿಸುವಂತಾಗಿದೆ. ಇದು ರೈತರ ಆತ್ಮಹತ್ಯೆಗಳಿಗೆ ಕಾರಣವಾಗಿದೆ. ಕೋಟ್ಯಂತರ ರೂಪಾಯಿ ಸಾಲ ಬಾಕಿ ಉಳಿಸಿಕೊಂಡಿರುವ ಉದ್ದಿಮೆದಾರರ ಸಾಲದ ಕುರಿತಾಗಿ ಇದೇ ತೀವ್ರತೆ ಸರ್ಕಾರ ಮತ್ತು ಬ್ಯಾಂಕುಗಳಿಗೆ ಏಕಿರುವುದಿಲ್ಲ ಎಂಬ ಪ್ರಶ್ನೆಯೂ ಇಲ್ಲಿ ಮೂಡುತ್ತದೆ. ಕೋಟ್ಯಂತರ ರೂ.ಗಳ ಸಾಲ ಉಳಿಸಿಕೊಂಡಿರುವ ಉದ್ದಿಮೆದಾರರನ್ನು ಸರ್ಕಾರಗಳೇ ಮುಂದೆ ನಿಂತು ರಕ್ಷಿಸುತ್ತವೆ.

ಸರ್ಕಾರಿ ಕಛೇರಿಗಳಲ್ಲಿನ ಭ್ರಷ್ಟಾಚಾರ, ಹತ್ತಾರು ವರ್ಷಗಳು ಅಲೆದಾಡಿದರೂ ತನ್ನ ಭೂಮಿಯನ್ನು ತನ್ನದಾಗಿಸಿಕೊಳ್ಳಲು ಸಾಧ್ಯವಾಗದ ಅಸಹಾಯಕತೆ ರೈತನನ್ನು ತೀವ್ರವಾಗಿ ಕಾಡಿವೆ. ಭೂಮಿ ಅವನದಾಗದಿದ್ದರೆ ಸರ್ಕಾರದ ಫಲಾನುಭವಿಯಾಗಲು ಸಾಧ್ಯವಾಗುವುದಿಲ್ಲ. ಬ್ಯಾಂಕ್ ಸಾಲಗಳು ದೊರೆಯುವುದಿಲ್ಲ. ಈ ಎಲ್ಲಾ ಕಾರಣಗಳಿಂದ ರೈತ ಲೇವಾದೇವಿದಾರರ ಮೊರೆಹೋಗುವಂತಾಗುತ್ತದೆ. ಇದು ಅವನ ಮತ್ತಷ್ಟು ಸುಲಿಗೆಗೆ ಕಾರಣವಾಗಿದೆ. ರೈತರಿಗೆ ಸಾಲ ನೀಡುವುದು ಮಾತ್ರ ಸರ್ಕಾರದ ಕೆಲಸವಲ್ಲ, ಅವರ ಬೆಳೆಗಳಿಗೆ ವ್ಯವಸ್ಥಿತ ಮಾರುಕಟ್ಟೆ, ಸಮರ್ಪಕ ನೀರಾವರಿ ವ್ಯವಸ್ಥೆ, ಅವರ ಪಂಪ್‌ಸೆಟ್‌ಗಳಿಗೆ ಸರಿಯಾದ ಕ್ರಮಬದ್ಧವಾದ ವಿದ್ಯುತ್, ಸೂಕ್ತ ಬೆಲೆ ಸಿಗುವಂತೆ ನೋಡಿ ಕೊಳ್ಳಬೇಕಾದ ಜವಾಬ್ದಾರಿಯೂ ಸರ್ಕಾರದ ಹಾಗೂ ಅದರ ಅಧಿಕಾರಿ ವರ್ಗದ ಮೇಲಿದೆ. ರೈತೋದ್ಧಾರದ ನೆಪದಲ್ಲಿ ಸರ್ಕಾರಗಳು ನಡೆಸುವ ಸಂಶೋಧನೆಗಳು ರೈತರನ್ನು ತಲುಪದೆ ಸಂಶೋಧನ ಕೇಂದ್ರಗಳಲ್ಲಿ ಕೊಳೆಯುತ್ತಿವೆ. ಇದಕ್ಕೆ ಆಳುವವರ ಜೊತೆಗೆ ವಿಜ್ಞಾನಿಗಳೂ, ರೈತರೂ ಕಾರಣರಾಗಿದ್ದಾರೆ. ನಮ್ಮ ರೈತರು ಸಂಶೋಧನ ಕೇಂದ್ರಗಳ ಕಡೆ, ಸಂಶೋಧಕರು ರೈತರ ಕಡೆ ಚಲಿಸುವುದೇ ಇಲ್ಲ. ಅವರುಗಳ ನಡುವೆ ಬಹುದೊಡ್ಡ ಕಂದಕಗಳೇ ಉಂಟಾಗಿವೆ.

ಇಂದು ಕೃಷಿಕರು ತಮ್ಮ ಕಸುಬನ್ನು ತೊರೆಯುವ ನಿರ್ಧಾರ ಮಾಡುತ್ತಿದ್ದಾರೆ. ತಮ್ಮ ನಂತರದ ಪೀಳಿಗೆಯು ಕೃಷಿಯನ್ನು ಅವಲಂಬಿಸದಂತೆ ಮಾಡುವ ನಿಟ್ಟಿನಲ್ಲಿ ಅವರು ತಮ್ಮ ಮಕ್ಕಳಿಗೆ ತಿಳಿ ಹೇಳುತ್ತಿದ್ದಾರೆ. ರೈತನ ಸಂಕಟಗಳಿಗೆ ಮಾನವ ನಿರ್ಮಿತ ಸಮಸ್ಯೆಗಳ ಜೊತೆಗೆ ಪ್ರಕೃತಿಯೂ ಸಹ ಹಲವು ಸಮಸ್ಯೆಗಳನ್ನು ತಂದೊಡ್ಡುತ್ತದೆ. ಇದಕ್ಕೆ ಮನುಷ್ಯನ ದುರಾಸೆಗಳಿಗೆ ಬಲಿಯಾಗಿರುವ ಕಾಡುಗಳು, ಕುಸಿಯುತ್ತಿರುವ ಅಂತರ್ಜಲ ಮಟ್ಟ, ಹೆಚ್ಚುತ್ತಿರುವ ವಾಯುಮಾಲಿನ್ಯ, ಜಲಮಾಲಿನ್ಯ, ಬೆಟ್ಟಗುಡ್ಡಗಳನ್ನೇ ಇಲ್ಲವಾಗಿಸುತ್ತಿರುವ ಗಣಿಗಾರಿಕೆಗಳು, ಅಕ್ರಮ ಮರಳು ದಂಧೆ, ಎಸ್. ಇ. ಝಡ್.ಗಳಂಥ ಯೋಜನೆಗಳು, ವಿಶಾಲವಾದ ರಸ್ತೆಗಳು, ವಿಮಾನ ನಿಲ್ದಾಣಗಳು ಮುಂತಾದ ಚಟುವಟಿಕೆಗಳಿಗಾಗಿ ರೈತರ ಭೂಮಿಯನ್ನು



ಅಕ್ರಮ ಮರಳು ದಂಧೆ

ಅವ್ಯಾಹತವಾಗಿ ವಶಪಡಿಸಿ ಕೊಳ್ಳುತ್ತಿರುವುದು ಇವು ಕಾರಣಗಳಾಗಿವೆ.

ಹೀಗೆ ರೈತರನ್ನು ಅತಿವೃಷ್ಟಿ, ಅನಾವೃಷ್ಟಿ, ಕ್ರಿಮಿಕೀಟಗಳು, ಕಾಡುಪ್ರಾಣಿಗಳು ಮುಂತಾದವುಗಳಿಂದ ಒದಗಬಹುದಾದ ಪ್ರಾಕೃತಿಕ ಸಮಸ್ಯೆಗಳು ಒಂದು ಕಡೆಯಾದರೆ, ಭ್ರಷ್ಟಾಚಾರ, ಅಸಮರ್ಪಕ ವಿದ್ಯುತ್, ಕಳಪೆ ಬಿತ್ತನೆ ಬೀಜ, ರಸಗೊಬ್ಬರದ ಕೊರತೆ, ಅವ್ಯವಸ್ಥಿತ ಮಾರುಕಟ್ಟೆ, ಕೃಷಿ ಕಾರ್ಮಿಕರ ಅಭಾವ, ಬೆಲೆಗಳ ವೈಪರೀತ್ಯ ಮುಂತಾದ ಮನುಷ್ಯ ನಿರ್ಮಿತ ಸಮಸ್ಯೆಗಳು ಸಹ ರೈತರನ್ನು ನಿರಂತರವಾಗಿ ಕಾಡುತ್ತಿವೆ. ರೈತನ ಬದುಕೆಂದರೆ ಬವಣೆಗಳನ್ನು ಅನುಭವಿಸುವುದೇ ವಿನಾ ಸಂತೋಷಪಡುವ ಯಾವ ಆಶಾಭಾವನೆಯೂ ಅವನಿಗಿಲ್ಲವಾಗಿದೆ. ಈ ಎಲ್ಲಾ ಕಾರಣಗಳು ರೈತರು ಕೃಷಿಯ ಬಗ್ಗೆ ಅನಾದರ ಬೆಳೆಸಿಕೊಳ್ಳಲು ಕಾರಣಗಳಾಗಿವೆ. ಹಾಗೆಂದು ರೈತರನ್ನು ದೇವರುಗಳು, ಮುಗ್ಧರು, ಅಮಾಯಕರು, ಎಂದೇನೂ ಭಾವಿಸಬೇಕಿಲ್ಲ. ಅವರ ಒಳಜಗಳ, ಜಾತೀಯತೆ, ಮೌಢ್ಯ, ಸ್ವಾರ್ಥ, ಸ್ವಜನಪಕ್ಷಪಾತ, ಸೋಮಾರಿತನ, ತಮ್ಮ ಕಷ್ಟಗಳನ್ನು ಸರ್ಕಾರ ಅಥವಾ ಯಾರಾದರೂ ಇತರರು ಬಂದು ನಿವಾರಿಸಬೇಕು ಎಂದು ಕಾಯುವ ಪರಾವಲಂಬಿ ಮನೋಭಾವ ಮುಂತಾದ ಸ್ವಯಂಕೃತ ಮನೋಭಾವಗಳೂ ಸಹಾ ಅವರ ಬವಣೆಗಳಿಗೆ ಕಾರಣವಾಗಿವೆ.

ಈ ಹಿನ್ನೆಲೆಯಲ್ಲಿ ರೈತನನ್ನು ಅವನ ಸಮಸ್ಯೆಗಳನ್ನು ಅವನೊಬ್ಬನನ್ನೇ ಕೇಂದ್ರೀಕರಿಸಿ ಚಿಂತಿಸುವ, ವ್ಯಾಖ್ಯಾನಿಸುವ ಬದಲು ರೈತನಿಗೆ ಸಂಬಂಧಿಸಿದಂತೆ ಇತರೆ ವಲಯಗಳೆಲ್ಲವುಗಳನ್ನು ಏಕೀಭವಿಸಿ ನೋಡುವುದು ಇಂದಿನ ಜರೂರಾಗಿದೆ. ರೈತ ಕೇಂದ್ರಿತ ಯೋಜನೆಗಳು ಮತ್ತು ಸಂಶೋಧನೆಗಳು ಸಹ ಈ ನಿಟ್ಟಿನಲ್ಲಿ ಸಾಗಬೇಕಾದ ಅನಿವಾರ್ಯತೆಯಿದೆ. ಈ ಬಗೆಯ ರೈತ ಚಿಂತನೆ ಮತ್ತು ಕಾರ್ಯೋನ್ಮುಖತೆ ರೈತರನ್ನು ಅವರ ಸಮಸ್ಯೆಗಳನ್ನು ಅರಿಯಲು, ನಿವಾರಿಸಲು ಹಾಗೂ ರೈತರ ಆತ್ಮಹತ್ಯೆಗಳಂತಹ ಅಸಹಾಯಕತೆಯನ್ನು ತಡೆಯಲು ಸಾಧ್ಯವಾಗುತ್ತವೆ.

**ವಿ. ಆರ್. ರಮೇಶ ಕೋಲಾರ**
ಪ್ರಥಮ ದರ್ಜೆ ಸಹಾಯಕರು
ಕರ್ನಾಟಕ ಲೋಕಾಯುಕ್ತ, ಚಿಕ್ಕಬಳ್ಳಾಪುರ

ಕಾವ್ಯಲೋಕ

# ಏನು ಬದಲಾಗಿದೆ?



ಒಂದು
ಇಪ್ಪತ್ತೈದು ವರ್ಷಗಳ ಹಿಂದೆ
ನೆನಪು ಇನ್ನೂ ಹಸಿರಾಗಿದೆ
ನಿನ್ನೆ ಮೊನ್ನೆಯ ಹಾಗೆ
ಮದುವೆಯಾಗಿ ವಾರದೊಳಗೇ ನಾವಿಬ್ಬರೂ ಸೇರಿ
ಕಾಮನೂರಿಗೆ ಬಂದಿದ್ದು
ಸಂಜೆ ಆರರ ಸುಮಾರಿಗೆ ಊರ
ಕೆರೆಯ ದಂಡೆಯ ಮೇಲಿನ
ಬಸ್ ನಿಲ್ದಾಣದ ಹತ್ತಿರದ ಡಬ್ಬಿ ಅಂಗಡಿ
ಗೆ ಹೋದಾಗ ಅಲ್ಲಿಯ ಜನಜಂಗುಳಿ ಕಂಡು
ಕಸಿವಿಸಿಯಿಂದ ಒದ್ದಾಡಿದ್ದು
ನೆಲ ಕೆರೆಯುತ್ತ ಅರ್ಧ ತಾಸು
ಆರು ಮಾರು ದೂರ ನಿಂತಿದ್ದು
ನಂತರ ಹೋಗಿ ಕಳ್ಳ
ಕಣ್ಣಿನಿಂದ ಆಚೆ ಈಚೆ ನೋಡುತ್ತ
ಡವಡವಿಸುವ ಎದೆಯೊಂದಿಗೆ ಏಳಲಾರದೆ
ಎದ್ದು ಹೊರಗೆ ಬರಲಾರದ ದನಿಯಲ್ಲಿ
ನಿರೋಧ್
ಎಂದು ಕೇಳಿ ಕೊಟ್ಟದ್ದನ್ನು
ಪಟ್ಟನೆ ಕಿಸೆಯಲ್ಲಿ ತುರುಕಿಕೊಂಡು
ಯುದ್ಧ ಗೆದ್ದ ಯೋಧನಂತೆ
ಮನದ ಬಾನಿಗೆ ಕೆಂಪು ತುಂಬುತ್ತ
ಮನೆಗೆ ಮರಳಿದ್ದು

ಎರಡು
ಕವಿಗೋಷ್ಠಿಯಲ್ಲಿ ಇಂದು ಸಂಜೆ
ಈ ಕವಿತೆ ಓದಿದಾಗ
ಇಡೀ ಸಭಾ ಭವನಕ್ಕೆ ಒಂದು ಗಳಿಗೆ
ಮಹಾ ಮೌನದ ಅಪ್ಪುಗೆ
ಎಲ್ಲರ ಮುಖದಲ್ಲೂ ನನಗಾಗಿದ್ದ
ಕಸಿವಿಸಿಯದ್ದೇ ಪಾಯಸ ಕುಡಿದ ಭಾವ

ಮೂರು
ಕಾಮನೂರು ಬೆಳೆದಿದೆ ಹೊರಗೆ ಹತ್ತೂ ದಿಕ್ಕಿನಲ್ಲಿ
ಕೆರೆ ಮಾಯವಾಗಿ ಮೈದಾನವಾಗಿದೆ
ಬಸ್ ನಿಲ್ದಾಣ ದೊಡ್ಡದಾಗಿದೆ ಈಗ
ಡಬ್ಬಿ ಅಂಗಡಿ ಹೋಗಿ ಬಂದಿದೆ
ಅಲ್ಲಿ ಮೆಡಿಕಲ್ ಮತ್ತು ಜನರಲ್ ಸ್ಟೋರ್ಸ್
ಆದರೆ ಏನು ಬದಲಾಗಿದೆ ಒಳಗೆ ?

**(ಸಂಕುಲಜೀವ) ಡಾ॥ ಸಂಜೀವ ಕುಲಕರ್ಣಿ**
'ನಗೆ ಮಲ್ಲಿಗೆ', ನಂ. ೨೦/೧, ಮಹಿಷಿ ರಸ್ತೆ, ಮಾಳಮಡ್ಡಿ
ಧಾರವಾಡ – ೫೮೦ ೦೦೭

ಈ ಇಬ್ಬರೂ ಕವಿಗಳ ಹುಟ್ಟಿನ ಮೂಲ ಒಂದೇ ಬಗೆಯದು. ಈರ್ವರ ಕಾವ್ಯ ಜೀವಪರ, ಸಮಾಜಮುಖಿ. ಆರೋಗ್ಯಪೂರ್ಣ ಸಮಾಜದ ರಚನೆಯೆಡೆಗೆ ಈರ್ವರ ಲಕ್ಷ್ಯ. ಇಬ್ಬರೂ ಬದುಕಿನಲ್ಲಿ ನೋವುಂಡವರು. ಸರ್ವಜ್ಞ ಎಲ್ಲವನ್ನೂ ಬಿಟ್ಟು ಅಲೆಮಾರಿ ಸಂತನಾಗಿ ಬಾಳಿದರೆ, ವಿಡಂಬಾರಿ ಕೂಡ ಹೆಂಡತಿ, ಮಗ, ಮೊಮ್ಮಗನನ್ನು ಕಳೆದುಕೊಂಡು ಅಲೆಮಾರಿಯಾಗಿ, ಇದೀಗ ತನ್ನ ಮಗಳ ಮನೆಯಲ್ಲಿ ಸಂತನ ಬದುಕನ್ನು ಸಾಗಿಸುತ್ತಿದ್ದಾರೆ. ಸರ್ವಜ್ಞ ತ್ರಿಪದಿಗಾಗಿ ಪ್ರಸಿದ್ಧನಾದರೆ, ವಿಡಂಬಾರಿ ಚೌಪದಿಯಲ್ಲಿ ಸಿದ್ಧಹಸ್ತರು. ಈರ್ವರೂ ಪ್ರಾಸಪ್ರಿಯರು. ಸರ್ವಜ್ಞನ ವಚನಗಳು ಹೆಚ್ಚು ಅಡಕವಾಗಿದ್ದರೆ, ವಿಡಂಬಾರಿಯವರದು ಹೆಚ್ಚು ತೆರೆದುಕೊಂಡಂತಹದು. ಈರ್ವರೂ ತಮ್ಮ ಕಾಲದ ವರ್ತಮಾನಕ್ಕೆ ತೀವ್ರವಾಗಿ ಸ್ಪಂದಿಸಿದವರು.



# ಸರ್ವಜ್ಞನೂ, ವಿಡಂಬಾರಿಯೂ

ಸರ್ವಜ್ಞ

ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲೂಕಿನ ಮಾಸೂರು ಎಂಬ ಗ್ರಾಮದಲ್ಲಿ ಜನಿಸಿ, ಅದೇ ಊರಿನಲ್ಲಿ ಜೀವನಯಾತ್ರೆ ಮುಗಿಸಿದ ಸರ್ವಜ್ಞ ಕವಿಗೆ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನವಿದೆ. ಹದಿನಾರನೆಯ ಶತಮಾನದ ಪೂರ್ವಾರ್ಧದಲ್ಲಿ ಬದುಕಿರಬಹುದಾದ ಈ ಕವಿ ತನ್ನ ೨೦೦೦ಗಳಷ್ಟು ತ್ರಿಪದಿಗಳ ಮೂಲಕ ಪ್ರಸಿದ್ಧನಾಗಿದ್ದಾನೆ. ಮೂರು ಸಾಲುಗಳ ವಿಶಿಷ್ಟ ಮಟ್ಟಿನ ಸರ್ವಜ್ಞನ 'ವಚನ'ಗಳು ಮೌಖಿಕ ಪರಂಪರೆಯ ಅನುಪಮ ರಚನೆಗಳಾಗಿವೆ. ಹುಬ್ಬಳ್ಳಿಯ 'ಲಲಿತ ಪ್ರಕಾಶನ'ದ ಅಡಿಯಲ್ಲಿ ವಿ. ಎಸ್. ಶ್ರೇಷ್ಠಿ ಎಂಬವರು ಪ್ರಕಟಿಸಿದ 'ಸರ್ವಜ್ಞನ ವಚನಗಳು' ಎಂಬ ಶೀರ್ಷಿಕೆಯ ಕೃತಿಗೆ ಬರೆದ ಮುನ್ನುಡಿಯಲ್ಲಿ ಕಲಮದಾನಿ ಗುರುರಾಯರು ಹೀಗೆ ಹೇಳುತ್ತಾರೆ :

"ಸರ್ವಜ್ಞನು ಆಶುಕವಿ. ಅಂದರೆ, ಯಾವುದೊಂದು ವಿಷಯ ನೋಡಿದೊಡನೆ, ಕೇಳಿದೊಡನೆ ಅದರ ಮೇಲೊಂದು ತ್ರಿಪದಿಯನ್ನು ಹಾಡುವನು. ಇವನು 'ಹಲಿಗೆ, ಬಳಪ ಹಿಡಿದವನಲ್ಲ'. 'ಬರೆಬರೆದಂತೊಡೆದು ತೊಟ್ಟನೆ ನಿಟ್ಟಿಸಿ' ಕಷ್ಟಪಟ್ಟವನಲ್ಲ. ವಚನಗಳೆಲ್ಲವನ್ನೂ ಇವನು ಒಂದೇ ಕಾಲದಲ್ಲಿ ಒಂದೇ ಸ್ಥಳದಲ್ಲಿ ಅಂದವನಲ್ಲ. ದೇಶಾಟನೆಯಲ್ಲಿ ಸದಾಕಾಲ ಇದ್ದವನಾದುದರಿಂದ ಅಲ್ಲಲ್ಲಿ ನೋಡಿದ, ಅನುಭವಿಸಿದ ವಿಷಯಗಳನ್ನು ಅಲ್ಲಲ್ಲಿಯ ಗ್ರಾಮೀಣ ಶಬ್ದಪ್ರಯೋಗಗಳನ್ನು ಮಾಡಿ ಹೇಳುವನು. ಎಲ್ಲ ತ್ರಿಪದಿಗಳೂ ಸರಳವೂ, ಸಹಜವೂ ಆಗಿವೆ."

ಇದೇ ಮುನ್ನುಡಿಯಲ್ಲಿ ಕಲಮದಾನಿಯವರು ಸರ್ವಜ್ಞನ ಹುಟ್ಟಿನ ಕುರಿತಾದ – ಧಾರವಾಡದ ಭಾಗದಲ್ಲಿ ಪ್ರಚಲಿತವಿರುವ–ಆಖ್ಯಾಯಿಕೆಯನ್ನೂ ಉಲ್ಲೇಖಿಸಿದ್ದಾರೆ. ಈ ಆಖ್ಯಾಯಿಕೆ ಕಪೋಲಕಲ್ಪಿತ ಪುರಾಣಕಥೆಯಂತಿದ್ದರೂ, ಅದು ಸರ್ವಜ್ಞನ ಹುಟ್ಟಿನ ಮೂಲವನ್ನು ಸೂಚಿಸುತ್ತದೆ. ಈ ಕಥೆಯ ಹೂರಣವೆಂದರೆ, ಸರ್ವಜ್ಞನ ತಂದೆ ಶೈವ ಬ್ರಾಹ್ಮಣ, ತಾಯಿ 'ಮಾಳಿ' ಎಂಬ ಹೆಸರಿನ ಶೂದ್ರ ಕನ್ಯೆ. ಸರ್ವಜ್ಞ ಇವರೀರ್ವರ ವಿವಾಹೇತರ ಸಂತಾನ. ಕನ್ನಡದ ಕವಿ ಡಾ॥ ಎಂ. ಅಕಬರ ಅಲಿ ಅವರು ಸರ್ವಜ್ಞನ ಕುರಿತಾದ ತಮ್ಮ ಸಂಪ್ರಬಂಧದಲ್ಲಿ ಸರ್ವಜ್ಞ ವೇಶ್ಯಾಪುತ್ರನಾಗಿದ್ದನೆಂದೇ ಪ್ರತಿಪಾದಿಸಿದ್ದಾರೆ. ಸರ್ವಜ್ಞನ ಮೂಲ ಹೆಸರು 'ಪುಷ್ಪದತ್ತ' ಎಂದು ಹೇಳಲಾಗಿದ್ದು, ಈ ಹೆಸರು ಕೂಡ ಅಕಬರ ಅಲಿಯವರ ಪ್ರತಿಪಾದನೆಯನ್ನು ಸಮರ್ಥಿಸುವಂತಿದೆ.

ಸರ್ವಜ್ಞ ಓರ್ವ ಸಂತ; ಪರಿವ್ರಾಜಕ. ಆಖ್ಯಾಯಿಕೆಯ ಪ್ರಕಾರ ಕಾಶಿಗೆ ಹೊರಟಿದ್ದ ಸರ್ವಜ್ಞನ ತಂದೆ ತನ್ನ ಮರುಪ್ರಯಾಣದಲ್ಲಿ ಓರ್ವ ಕುಂಬಾರನ ಮನೆಯಲ್ಲಿ ಉಳಿದುಕೊಂಡ. ಮಾಳಿ ಕುಂಬಾರರ ಹೆಣ್ಣು. ಸರ್ವಜ್ಞ ಹುಟ್ಟಿ ಬೆಳೆದದ್ದು ಕುಂಬಾರನ ಮನೆಯಲ್ಲಿ. 'ಮಾಳನೂ ಮಾಳಿಯೂ ಕೂಳಿತ್ತ ಹೆಮ್ಮೆಯಲಿ। ಕೇಳಲೆನ್ನಾರ ಮಗನೆಂದು। ನಾ ಶಿವನ। ಮೇಳದವನೆಂದೆ' ಎಂದು ಈ ಕವಿ ಹೇಳಿಕೊಂಡಿದ್ದಾನೆ. ಪ್ರಾಯಶಃ ಸರ್ವಜ್ಞನಿಗೆ ತನ್ನ ತಂದೆಯ ಕುರಿತು ಅವಜ್ಞೆ. ಆತ ಮನೆ ಬಿಟ್ಟ. ದೇಶದೆಲ್ಲೆಡೆ ಅಲೆದಾಡಿದ. ಅನೇಕ ಗುರುಗಳನ್ನು ಸಂದರ್ಶಿಸಿದ. ಸಿಕ್ಕ ಮಠಗಳಲ್ಲಿ ಆಶ್ರಯ ಪಡೆದ. ಇಡೀ ದಕ್ಷಿಣ ಭಾರತವನ್ನು ಸಂಚರಿಸಿದ. ವಿದ್ವಾಂಸರನ್ನೂ, ಯೋಗಿಗಳನ್ನೂ, ಸನ್ಯಾಸಿಗಳನ್ನೂ ಕಂಡ. ಯಾವ ಊರನ್ನೂ ನೆಚ್ಚಿಕೊಳ್ಳದೆ, ಯಾರ ಹಂಗಿಗೂ ಬೀಳದೆ, 'ಮಂಡೆ ಬೋಳಿಸಿಕೊಂಡು, ತುಂಡುಗಂಬಳಿ ಹೊದೆದು, ಕರದಿ ಕಪ್ಪರ ಹಿಡಿದು' ತಾನು ಕಂಡಿದ್ದನ್ನು, ಅನುಭವಿಸಿದ್ದನ್ನು ಹಾಡಾಗಿಸುತ್ತ 'ಹಿಂಡನಗಲಿದ ಗಜ'ದಂತೆ ಅಲೆದಾಡಿದ. ತಾನು ಗಳಿಸಿದ ಜ್ಞಾನದ ಕುರಿತಾದ ವಿನಯವನ್ನು ತನ್ನ ವಚನವೊಂದರ ಮೂಲಕ ಹೀಗೆ ವ್ಯಕ್ತಪಡಿಸಿದ್ದಾನೆ :

*ಸರ್ವಜ್ಞನೆಂಬವನು ಗರ್ವದಿಂದಾವನೆ ?*
*ಸರ್ವರೊಳೊಂದೊಂದು ನುಡಿಗಲಿತು। ವಿದ್ಯೆಯ।*
*ಪರ್ವತವೇ ಆದ ಸರ್ವಜ್ಞ॥*

ಕಲಮದಾನಿಯವರು ಸರ್ವಜ್ಞನ ವಚನಗಳ ಗುಣಲಕ್ಷಣಗಳನ್ನು ಹೀಗೆ ಪಟ್ಟಿ ಮಾಡುತ್ತಾರೆ : ಔಚಿತ್ಯಪ್ರಜ್ಞೆ, ಉಪಮೆಯ ಸಮರ್ಪಕತೆ, ದೃಷ್ಟಾಂತಸಾಮೀಪ್ಯ, ಅನುಭವ ವೈಶಾಲ್ಯ ಮತ್ತು ಅವಲೋಕನ ಸೂಕ್ಷ್ಮತೆ. ಸರ್ವಜ್ಞಕವಿಯ ಪ್ರತಿಯೊಂದು ವಚನ ಕಲಮದಾನಿಯವರು ಗುರುತಿಸಿರುವ ಗುಣಗಳನ್ನು ಸಮರ್ಥಿಸುವಂತಿವೆ.

ತನ್ನ ಹುಟ್ಟಿನ ಕಾರಣದಿಂದ ಸರ್ವಜ್ಞ ಅಪಮಾನದ ಕ್ಷಣಗಳನ್ನು ಎದುರಿಸಿರುವ ಸಂದರ್ಭಗಳನ್ನು ಊಹಿಸಬಹುದಾಗಿದೆ. ಆದ್ದರಿಂದಲೇ ಆತ ಬ್ರಾಹ್ಮಣ್ಯವನ್ನು ಹೀಗಳೆದ, 'ಹರಿದು ಕರ್ಮವ ಮಾಡಿ। ಹರಿವ ನೀರೊಳಗೆ ಮುಳುಗೆ। ಕರಗುವುದೆ ಪಾಪ ?' ಎಂದು ಛೇಡಿಸಿದ. 'ಹಾರುವರು ಸ್ವರ್ಗದ

ಮೋಹನ ಹಬ್ಬು

ದಾರಿ ಬಲ್ಲರೇ ? ನಾರಿ ಪತಿವ್ರತದ ದಾರಿ ನಡೆದಿಹರೆ ಸ್ವರ್ಗದ ದಾರಿ ತೋರುವಳು' ಎಂದು ಸಾರಿ ಹೆಣ್ಣನ್ನು ಸಮರ್ಥಿಸಿದ. ಹೆತ್ತಮ್ಮನಿಗಿಂತ ಹಿತರಿಲ್ಲವೆಂದು ಘೋಷಿಸಿ ತಾಯಿಯ ಮಹತ್ವವನ್ನು ಎತ್ತಿ ಹಿಡಿದ. 'ಜಾತಿಹೀನನ ಮನೆಯ ಜ್ಯೋತಿ ತಾ ಹೀನವೇ ?' ಎಂದು ಪ್ರಶ್ನಿಸಿದ. ವೇದವನ್ನು, 'ವೇದವೇ ಶ್ರೇಷ್ಠ' ಎಂಬ ವಾದವನ್ನು ಅಲ್ಲಗಳೆದ. 'ಅನುಭವಿಯ ವೇದವೆ ವೇದ' ಎಂದು ಸಾರಿದ. 'ಓದಿದಾ ಓದು ತಾ ಮೇದ ಕಬ್ಬಿನ ಸಿಪ್ಪೆ। ಓದಿನ ಒಡಲನರಿದಿಹರೆ। ಸಿಪ್ಪೆ ಕಬ್ಬಾದಂತೆ' ಎನ್ನುತ್ತ ಓದಿನ ಮಹಿಮೆಯನ್ನು ಶ್ರುತಪಡಿಸಿದ. 'ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ' ಎಂದು ಜೀವನಾಸಕ್ತಿಗೆ ಇಂಬು ನೀಡಿದ.

ಕಾಲಮಾನದ ನೆಲೆಯಲ್ಲಿ, ಬ್ರಾಹ್ಮಣ್ಯವನ್ನು, ಮಹಾಭಾರತದಂತಹ ಕಾವ್ಯದ ವಸ್ತುವನ್ನು ತೀಕ್ಷ್ಣವಾಗಿ ಟೀಕಿಸಿದ ಸರ್ವಜ್ಞನ ವೈಚಾರಿಕತೆ ಮತ್ತು ಧಾರ್ಷ್ಟ್ಯ ಪ್ರಶಂಸನೀಯ. ಈ ಕೆಳಗಿನ ವಚನಗಳನ್ನು ಗಮನಿಸಿ :

*ಹಾರುವರ ನಂಬಿದವರಾರಾರು ಉಳಿದಿಲ್ಲ*
*ಹಾರುವರ ನಂಬಿ ಭೂಪರು । ಕೆಟ್ಟರಿ ।*
*ನ್ನಾರು ನಂಬುವರು ಸರ್ವಜ್ಞ ॥*

*ನೀರ ಮುಳುಗಿದ ವಿಪ್ರ ಹಾರುವಡೆ ಸ್ವರ್ಗಕ್ಕೆ*
*ಹಾರುವನೊಲು ಮುಳುಗಿಪ್ಪ । ಕಪ್ಪೆ ತಾ ।*
*ಹಾರಬೇಕೆಂದ ಸರ್ವಜ್ಞ*

– ಈ ವಚನ ತನ್ನ ಅಪ್ಪನ ಕುರಿತಾದ ಆಕ್ರೋಶದ ಅಭಿವ್ಯಕ್ತಿ ಎಂದೆನಿಸದೇ ?

*ಹಾದರದ ಕಥೆಯನ್ನು ಸೋದರರ ವಧೆಯನ್ನು*
*ಆಧರಿಸಿ ಪುಣ್ಯ ಕಥೆಯನ್ನು । ಕೇಳುವರು ।*
*ಮಾದಿಗರು ನೋಡ ಸರ್ವಜ್ಞ ॥*

– ಇದು ನಿಸ್ಸಂದೇಹವಾಗಿ ಮಹಾಭಾರತದ ಕುರಿತಾದ ಟೀಕೆ.

ಸರ್ವಜ್ಞ ತನ್ನ ಕಾಲಮಾನದಿಂದ ತುಂಬ ಮುಂದೆ ಇದ್ದ ಎಂಬುದನ್ನು ಸೂಚಿಸಲು ಈ ಕೆಳಗಿನ ಎರಡು ಪ್ರಸಿದ್ಧ ವಚನಗಳೇ ಸಾಕು :

*೧) ಜಾತಿಹೀನನ ಮನೆಯ ಜ್ಯೋತಿ ತಾ ಹೀನವೇ ?*
*ಜಾತಿ–ವಿಜಾತಿ ಎನಬೇಡ । ದೇವನೊಲಿ ।*
*ದಾತನೇ ಜಾತ, ಸರ್ವಜ್ಞ ॥*

*೨) ನಡೆವುದೊಂದೇ ಭೂಮಿ ಕುಡಿವುದೊಂದೇ ನೀರು*
*ಸುಡುವಗ್ನಿಯೊಂದೇ ಇರುತಿರಲು । ಕುಲಗೋತ್ರ*
*ನಡುವೆ ಎತ್ತಣದು ಸರ್ವಜ್ಞ ॥*

**ವಿಡಂಬಾರಿ**

ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿನ ಕಡತೋಕ ಎಂಬ ಗ್ರಾಮದಲ್ಲಿ ಜನಿಸಿದ ವಿನಾಯಕ ಗಣಪಿ ಭಂಡಾರಿ (ಕಾವ್ಯನಾಮ : 'ವಿಡಂಬಾರಿ') ಕನ್ನಡ ಮೂರನೆಯ ತರಗತಿಯವರೆಗೆ ಕಲಿತವರು. ತಂದೆ ಅನಾಮಿಕ. ಸರ್ವಜ್ಞ ಮತ್ತು ವಿಡಂಬಾರಿಯವರ ಬದುಕಿನಲ್ಲಿ ಕಾಣುವ ಸಾಮ್ಯ

**ಪೀಳಿಗೆ**

ಅವರು ಗದ್ದುಗೆಯ ಮೇಲೆ
ಕುಳಿತು ಕಾರು – ಬಾರು
ನಡೆಸುವ ಪರಿಯ ನೋಡುತ್ತಾ
ಭರವಸೆಗಳು ಈಡೇರದೆ
ಖಿನ್ನ ಮನಸ್ಕರಾಗಿ
ಮುಂದಿನ ಆಯ್ಕೆಯ
ಎದುರು ನೋಡುತ್ತಿರುವರು
ನಿರಂತರ

**ಎನ್. ಶ್ರೀನಿವಾಸ್**
ಮಂಡ್ಯ

ಅದ್ವಿತೀಯವಾದುದು. ಜೀವನ ನಿರ್ವಹಣೆಗಾಗಿ ಅಂಚೆ ಇಲಾಖೆಯಲ್ಲಿ ರನರ್ ಆಗಿ ಕೆಲಸ ಮಾಡಿರುವ ವಿಡಂಬಾರಿಯವರ ಬದುಕಿನ ಕಥೆಯ ದಾರುಣ ಚಿತ್ರಣ ಅವರೇ ರಚಿಸಿದ 'ಅಂಚೆ ಪೇದೆಯ ಆತ್ಮಕಥೆ'ಯಲ್ಲಿ ಮನೋಜ್ಞವಾಗಿ ನಿರೂಪಿತವಾಗಿದೆ. ತಮ್ಮ ಹುಟ್ಟಿನ ಮೂಲವನ್ನು ವ್ಯಕ್ತಪಡಿಸುವಲ್ಲಿ ಸರ್ವಜ್ಞ ತೋರಿದ – ಅಥವಾ, ಸರ್ವಜ್ಞನಿಗಿಂತ ಮಿಗಿಲಾದ–ಧಾರ್ಷ್ಟ್ಯವನ್ನು ತೋರಿರುವ ವಿಡಂಬಾರಿ ಸರ್ವಜ್ಞನಂತೆಯೇ 'ಎಲ್ಲರೊಳಗೊಂದೊಂದು ನುಡಿಗಲಿತು ವಿದ್ಯೆಯ ಪರ್ವತವೆ' ಆಗಿದ್ದಾರೆ. ಅವರ ಬಾಲ್ಯ ಬಡತನ, ಅವಮಾನದ ದಿನಗಳಾಗಿದ್ದವು. ಆದರೆ, ತನ್ನ ಮೇಲೆ ಕರುಣೆ ತೋರಿದವರನ್ನು, ತನ್ನನ್ನು ಪೊರೆದವರನ್ನು ಅವರು ಕೃತಜ್ಞತೆಯಿಂದ ನೆನೆದಿದ್ದಾರೆ. ಸರ್ವಜ್ಞನಂತೆ, ಅವರು ಬ್ರಾಹ್ಮಣರನ್ನು ನೇರವಾಗಿ ಟೀಕಿಸಿಲ್ಲ. ಆದರೆ ಪುರೋಹಿತಶಾಹಿ ನಡೆಯನ್ನು ಟೀಕಿಸುವುದರಲ್ಲಿ ಹಿಂದೆ ಬಿದ್ದಿಲ್ಲ.

ವಿಡಂಬಾರಿ ತನ್ನನ್ನು 'ಏಕಲವ್ಯ' ಎಂದು ಕರೆದುಕೊಂಡಿದ್ದಾರೆ. ಅವರ ಪಾಲಿನ 'ದ್ರೋಣ' ದಿನಕರ ದೇಸಾಯಿ. ಆದರೆ ಈ ದ್ರೋಣ ಏಕಲವ್ಯನ ಬೆರಳನ್ನು ಕೇಳಲಿಲ್ಲ. ಬದಲಿಗೆ, ವಿಡಂಬಾರಿಯವರ ಬೆನ್ನು ತಟ್ಟಿ ಹರಸಿದ್ದಾರೆ. ಇಂದಿಗೆ ದೇಸಾಯಿಯವರ ನಂತರ ಅತಿ ಹೆಚ್ಚು ಚುಟುಕಗಳನ್ನು ರಚಿಸಿದ ಕೀರ್ತಿ ವಿಡಂಬಾರಿಯವರಿಗೆ ಸಲ್ಲುತ್ತದೆ (ಸುಮಾರು ೬೫೦೦ರಷ್ಟು ). ಸರ್ವಜ್ಞ ತ್ರಿಪದಿಯ ನೆರೆ ನಂಬಿದರೆ, ವಿಡಂಬಾರಿ ದಿನಕರ ದೇಸಾಯಿ ಹುಟ್ಟುಹಾಕಿದ ನಾಲ್ಕು ಸಾಲುಗಳ, ಹದಿನೆಂಟು ಮಾತ್ರೆಗಳ ಚೌಪದಿಗೆ ಅಂಟಿಕೊಂಡಿದ್ದಾರೆ. ರೂಢಿಗತ ಶಿಕ್ಷಣ ಕಡಿಮೆಯೇ ಆದರೂ ವಿಡಂಬಾರಿಯವರಿಗೆ ದೊರೆತ ಸ್ನೇಹಿತರ ವಲಯ ದೊಡ್ಡದು. ಅವರ ಮೇಲೆ ಪ್ರಭಾವ ಬೀರಿದ ಬಹು ಮುಖ್ಯ ವ್ಯಕ್ತಿಗಳೆಂದರೆ, ಕವಿ–ವಿಮರ್ಶಕ ಡಾ॥ ರೋಹಿದಾಸ ಭಂಡಾರಿ ಮತ್ತು ಕವಿ ಜಿ. ಎಸ್. ಅವಧಾನಿ. ಅಂದಿನ ದಿನಗಳಲ್ಲಿ ಈ ಇಬ್ಬರೂ ಮಹನೀಯರು ಬಂಡಾಯ ಸಾಹಿತ್ಯದ ಪ್ರಮುಖ ವಕ್ತಾರರಾಗಿದ್ದರು. ವಿಡಂಬಾರಿಯವರ ಚುಟುಕಗಳಲ್ಲಿ ಎಡಪಂಥೀಯ ವಿಚಾರಧಾರೆ ಹೊರಹೊಮ್ಮಿದ್ದು ಇವರಿಬ್ಬರ ಚಿಂತನೆಯ ಪ್ರಭಾವದಿಂದಲೇ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲ. ವಿಡಂಬಾರಿಯವರು ವ್ಯಾಪಕ ಓದಿನ ನೆರವಿನಿಂದ ತಮ್ಮ ಚಿಂತನೆಯನ್ನು ಹರಿತಗೊಳಿಸಿದ್ದಾರೆ. ವಿಡಂಬಾರಿ ಪಡೆದ ಶಿಕ್ಷಣದ ಎದುರಿಗೆ ಅವರ ಚಿಂತನೆಗಳನ್ನಿಟ್ಟು ನೋಡಿದರೆ ಅಚ್ಚರಿಯಾಗುತ್ತದೆ. ದೇವರ ಅಸ್ತಿತ್ವವನ್ನು, ಮತಮಾನ್ಯಗಳನ್ನು ನಂಬದ ಅವರು ವೈಜ್ಞಾನಿಕ ಮನೋಧರ್ಮದವರು.

**ವಿಡಂಬಾರಿಯವರ ಎರಡು ಚುಟುಕಗಳು :**

*೧) ಬದುಕಿನಲಿ ಈವರೆಗೆ ನೋವನ್ನೆ ನುಂಗಿ*
*ಬಾಳಿರುವೆ ಕೇಳಿಲ್ಲಿ ಓ ನನ್ನ ತಂಗಿ*
*ಉದ್ದಕ್ಕು ನನಗುಂಟು ಬಂಧುಗಳ ಸಾಲು*
*ಒಬ್ಬರೂ ಕೇಳಿಲ್ಲ ನೋವಿನಲಿ ಪಾಲು*

*೨) ನೀ ಬರಿದೆ ಮಾಡಿದರೆ ತಿರುಪತಿಯ ಯಾತ್ರೆ*
*ಬರಿದಾಗಬಹುದೇನೊ ಪಾಪಗಳ ಪಾತ್ರೆ ?*
*ಅಂತರಂಗದ ತುಂಬ ಹುದುಗಿರಲು ರಾಡಿ*
*ಗಹಗಹಿಸಿ ನಗದಿರನು ತಿಮ್ಮಪ್ಪ ನೋಡಿ*

**ಸರ್ವಜ್ಞ ಮತ್ತು ವಿಡಂಬಾರಿ**

ಈ ಇಬ್ಬರೂ ಕವಿಗಳ ಹುಟ್ಟಿನ ಮೂಲ ಒಂದೇ ಬಗೆಯದು. ಈರ್ವರ ಕಾವ್ಯ ಜೀವಪರ, ಸಮಾಜಮುಖಿ. ಆರೋಗ್ಯಪೂರ್ಣ ಸಮಾಜದ ರಚನೆಯೆಡೆಗೆ ಈರ್ವರ ಲಕ್ಷ್ಯ. ಇಬ್ಬರೂ ಬದುಕಿನಲ್ಲಿ ನೋವುಂಡವರು. ಸರ್ವಜ್ಞ ಎಲ್ಲವನ್ನೂ ಬಿಟ್ಟು ಅಲೆಮಾರಿ ಸಂತನಾಗಿ ಬಾಳಿದರೆ, ವಿಡಂಬಾರಿ ಕೂಡ ಹೆಂಡತಿ, ಮಗ, ಮೊಮ್ಮಗನನ್ನು ಕಳೆದುಕೊಂಡು ಅಲೆಮಾರಿಯಾಗಿ, ಇದೀಗ ತನ್ನ ಮಗಳ ಮನೆಯಲ್ಲಿ ಸಂತನ ಬದುಕನ್ನು ಸಾಗಿಸುತ್ತಿದ್ದಾರೆ. ಸರ್ವಜ್ಞ ತ್ರಿಪದಿಗಾಗಿ ಪ್ರಸಿದ್ಧನಾದರೆ, ವಿಡಂಬಾರಿ ಚೌಪದಿಯಲ್ಲಿ ಸಿದ್ಧಹಸ್ತರು. ಈರ್ವರೂ ಪ್ರಾಸಪ್ರಿಯರು. ಸರ್ವಜ್ಞನ ವಚನಗಳು ಹೆಚ್ಚು ಅಡಕವಾಗಿದ್ದರೆ, ವಿಡಂಬಾರಿಯವರದು ಹೆಚ್ಚು ತೆರೆದುಕೊಂಡಂತಹದು. ಈರ್ವರೂ ತಮ್ಮ ಕಾಲದ ವರ್ತಮಾನಕ್ಕೆ ತೀವ್ರವಾಗಿ ಸ್ಪಂದಿಸಿದವರು.

ಮೇಲಿನ ಚರ್ಚೆಯಿಂದ ಸ್ಪಷ್ಟವಾಗುವುದೇನೆಂದರೆ, ವಿಡಂಬಾರಿ 'ಅಭಿನವ ಸರ್ವಜ್ಞ' ಎಂದೆನಿಸಿಕೊಳ್ಳಲು ಅರ್ಹರು. ಆದರೆ ಈಗಾಗಲೇ ಕರ್ನಾಟಕ ಸರಕಾರ ದಿನಕರ ದೇಸಾಯಿಯವರಿಗೆ ಈ ಅಭಿದಾನವನ್ನು ನೀಡಿರುವುದರಿಂದ, ಕವಿ ವಿಡಂಬಾರಿಯನ್ನು 'ಎರಡನೆಯ ಅಭಿನವ ಸರ್ವಜ್ಞ' ಎಂದು ಕರೆಯಬಹುದು.

**ಮೋಹನ ಹಬ್ಬು**
'ಸೌಜನ್ಯ', ಅಂಚೆ : ವಂದಿಗೆ (ಅಂಕೋಲಾ)
ಉತ್ತರ ಕನ್ನಡ – ೫೮೧ ೩೫೭



# ಪಶ್ಚಿಮ ಘಟ್ಟಗಳ ಜೀವವೈವಿಧ್ಯತೆಯ ನಾಶ ಮತ್ತು ದಕ್ಷಿಣ ಭಾರತದ ಮರುಭೂಮಿಗಳು

ದಕ್ಷಿಣ ಭಾರತದ ೭ ರಾಜ್ಯಗಳಲ್ಲಿ ವಾಸಿಸುವ ಸುಮಾರು ೪೦೦ ದಶಲಕ್ಷ ಜನರ ೬೬ ಜೀವನಾಡಿ ನದಿಗಳು ಪಶ್ಚಿಮ ಘಟ್ಟಗಳಲ್ಲಿ ಹುಟ್ಟಿ ಹರಿಯುತ್ತವೆ. ಕೃಷ್ಣ, ಗೋದಾವರಿ, ಕಾವೇರಿ ಜೀವನದಿಗಳು ಮತ್ತು ಅವುಗಳ ಉಪನದಿಗಳ ಜಲಾನಯನಗಳಲ್ಲಿ ಬತ್ತ, ಕಬ್ಬು, ಇನ್ನಿತರ ಬೆಳೆಗಳನ್ನು ಬೆಳೆಯಲಾಗುತ್ತದೆ. ಅಷ್ಟೇ ಅಲ್ಲದೆ ಈ ಜಲಾನಯನಗಳಲ್ಲಿ ಬರುವ ಹಳ್ಳಿಗಳು, ಪಟ್ಟಣಗಳು ಮತ್ತು ದೂರದ ಮಹಾನಗರಗಳಿಗೂ ಈ ನದಿಗಳಿಂದ ಕುಡಿಯುವ ನೀರನ್ನು ಕೊಂಡೊಯ್ಯಲಾಗುತ್ತದೆ. ಪಶ್ಚಿಮ ಘಟ್ಟಗಳು ನಾಶ ಹೊಂದಿದಲ್ಲಿ ಇಲ್ಲಿ ಹುಟ್ಟಿ ಹರಿಯುವ ನದಿಗಳು ಬರಡಾಗಿ ದಕ್ಷಿಣ ಭಾರತ ಮರುಭೂಮಿಯಾಗಿ ಮಾರ್ಪಡುವಲ್ಲಿ ಯಾವ ಸಂದೇಹವೂ ಇಲ್ಲ. ನಾವು ಈ ನದಿಗಳನ್ನು ಉಳಿಸಿಕೊಳ್ಳದಿದ್ದಲ್ಲಿ ಕೋಟ್ಯಂತರ ರೂಪಾಯಿ ವ್ಯಯಮಾಡಿ ಮೂಲ ಸೌಕರ್ಯಗಳನ್ನು ಅಭಿವೃದ್ಧಿಪಡಿಸುವುದರಲ್ಲಿ ಅರ್ಥವಿಲ್ಲ. ಸೂಕ್ಷ್ಮ ಜೀವವೈವಿಧ್ಯಮಯ ಪಶ್ಚಿಮ ಘಟ್ಟಗಳನ್ನು ಉಳಿಸಿಕೊಳ್ಳದಿದ್ದರೆ ಲಕ್ಷಾಂತರ ವರ್ಷಗಳಿಂದ ಜೀವವಿಕಾಸಗೊಂಡಿರುವ ಸಾವಿರಾರು ಸಸ್ಯ – ಪ್ರಾಣಿಗಳ ಜೈವಿಕ ಕೊಂಡಿಗಳು ಮುರಿದುಹೋಗಿ ಹಾನಿಗೆ ಒಳಗಾಗುತ್ತವೆ. 'ಪಶ್ಚಿಮ ಘಟ್ಟಗಳಲ್ಲಿ ನಡೆದ ಗಣಿಗಾರಿಕೆಯನ್ನು ಎಲ್ಲಾ ರಾಜ್ಯಗಳು ೩೦ ವರ್ಷಗಳ ಹಿಂದೆಯೇ ನಿಲ್ಲಿಸಿದ್ದರೂ ಇಂದಿಗೂ ಅಲ್ಲಿ ಯಾವ ಗಿಡಮರಗಳೂ ಬೆಳೆದಿಲ್ಲ' ಎನ್ನುತ್ತಾರೆ ಸಾಕ್ಷ್ಯಚಿತ್ರ ನಿರ್ದೇಶಕರಾದ ಶೇಖರ್ ದತ್ತಾರಿ. ಗುಜರಾತ್‌ನಿಂದ ಕನ್ಯಾಕುಮಾರಿಯವರೆಗೆ ೧೬೦೦ ಕಿ.ಮೀ.ಗಳ ಉದ್ದದ ಈ ಘಟ್ಟಗಳಲ್ಲಿ ಅನೇಕ ರೀತಿಯ ಮಾನವನ ಆಘಾತಕಾರಿ ಚಟುವಟಿಕೆಗಳು ಈಗಲೂ ನಡೆಯುತ್ತಲೇ ಇವೆ.

ಕಳೆದ ಕೆಲವು ದಶಕಗಳಿಂದ ಅಭಿವೃದ್ಧಿಯ ಹೆಸರಿನಲ್ಲಿ ನಡೆಸುತ್ತಿರುವ ಚಟುವಟಿಕೆಗಳಾದ ರಸ್ತೆಗಳು, ರೈಲ್ವೆ ರಸ್ತೆಗಳು, ಅಣೆಕಟ್ಟುಗಳು, ತೋಟ ಮತ್ತು ವಸತಿ ಇತ್ಯಾದಿಗಳನ್ನು ನಿರ್ಮಿಸಲು ಕಾಡನ್ನು ಕಡಿಯಲಾಗಿ, ಈಗಾಗಲೇ ಸಾಕಷ್ಟು ಹಾನಿ ಸಂಭವಿಸಿದೆ. ಹುಲಿ, ಚಿರತೆ ಮತ್ತು ಏಷ್ಯನ್ ಆನೆಗಳಿಗೆ ತವರೂರಾದ ಕಾಡುಗಳು ನಾಶವಾಗಿ ಈ ಪ್ರಾಣಿಗಳೆಲ್ಲ ದಿಕ್ಕು ತೋಚದೆ ಹಳ್ಳಿಗಳಿಗೆ ನುಗ್ಗಿಬರುತ್ತಿವೆ. ಸಾವಿರಾರು ವರ್ಷಗಳಿಂದ ಆನೆಗಳು ನಡೆದುಹೋಗುತ್ತಿದ್ದ ಕಾರಿಡಾರುಗಳು ಮಾಯವಾಗಿ ಅವು ದಾರಿ ಕಾಣದೆ ತತ್ತರಿಸುತ್ತಿವೆ. ವನ್ಯ ಜೀವಗಳ ಸಂರಕ್ಷಣೆ ಎಂಬ ಪದ ಕೇವಲ ಮನುಷ್ಯ ಹುಟ್ಟುಹಾಕಿರುವ ಕಲ್ಪನೆಯ ಪದವಾಗಲಿ ಅಥವಾ ಪ್ರಾಣಿಗಳ ಬಗ್ಗೆ ಕನಿಕರ ಮೂಡಿಸುವ ವಿಷಯವಲ್ಲ. ಲಕ್ಷಾಂತರ ವರ್ಷಗಳಿಂದ ನಿಸರ್ಗದಲ್ಲಿ ನೈಸರ್ಗಿಕವಾಗಿ ಸೃಷ್ಟಿಯಾಗಿರುವ ಜೀವವೈವಿಧ್ಯತೆ ಒಮ್ಮೆ ನಾಶವಾದಲ್ಲಿ ಅದನ್ನು ಮರುಸೃಷ್ಟಿ ಮಾಡಲು ಯಾವ ಆಧುನಿಕ ವಿಜ್ಞಾನದಿಂದಲೂ ಸಾಧ್ಯವಿಲ್ಲ. ಜೀವವೈವಿಧ್ಯತೆಯ ನಾಶದೊಂದಿಗೆ ಮನುಷ್ಯನೂ ನಾಶವಾಗುವುದರಲ್ಲಿ ಯಾವ ಸಂಶಯವೂ ಇಲ್ಲ.

ಇಂದಿಗೂ ಮನುಷ್ಯ ಜೀವವೈವಿಧ್ಯತೆಯ ಬಗ್ಗೆ ಕೇವಲ ಒಂದೆರಡು ಪಟ್ಟು ಜ್ಞಾನವನ್ನು ಸಂಪಾದಿಸಲು ಸಾಧ್ಯವಾಗಿದೆ. ಘಟ್ಟಗಳಲ್ಲಿನ ವೈವಿಧ್ಯತೆ ಅಪಾರ ಮತ್ತು ಅದ್ಭುತವಾದದ್ದು. ಸಾವಿರಾರು ವಿಜ್ಞಾನಿಗಳು ಸಂಶೋಧನೆಗಳನ್ನು ನಡೆಸಿದ್ದರೂ ಅದು ಮನುಷ್ಯನಿಗೆ ನಿಲುಕಲಾರದ ಜ್ಞಾನವೆಂದೇ ಹೇಳಬೇಕು. ಪ್ರಪಂಚದಲ್ಲಿ ಆಗಾಗ ಹೊಸ ಹೊಸ ಮಾರಕ ಕಾಯಿಲೆಗಳು ಸೃಷ್ಟಿಯಾಗುತ್ತಲೇ ಇರುತ್ತವೆ. ಅವುಗಳನ್ನು ವಾಸಿಮಾಡುವ ನೀಲಿ ನಕಾಶೆಗಳು, ಅಂದರೆ ಔಷಧಿಗಳು ಈ ಅರಣ್ಯಗಳಲ್ಲಿ ದೊರಕುತ್ತವೆ. ಈಗ ನಾವು ಉಪಯೋಗಿಸುವ ಬಹಳಷ್ಟು ಆಧುನಿಕ ಔಷಧಿಗಳು – ಅಲೋಪತಿ, ಹೋಮಿಯೋಪತಿ, ಆಯುರ್ವೇದ ಇತ್ಯಾದಿ ಔಷಧಿಗಳೆಲ್ಲ ಅರಣ್ಯಗಳಿಂದ ದೊರಕುವ ಔಷಧಿಗಳೇ. ಅಂದರೆ ಅರಣ್ಯಗಳು ನಾಶವಾದರೆ ನಮ್ಮ ರೋಗಗಳನ್ನು ಗುಣಪಡಿಸುವ ಔಷಧಿಗಳು ದೊರಕುವುದಿಲ್ಲ. ಪಶ್ಚಿಮ ಘಟ್ಟಗಳೆಂಬ ಜ್ಞಾನಭಂಡಾರದ ಪುಸ್ತಕಗಳು ನಾವು ಓದುವ ಮುಂಚೆಯೇ ನಾಶವಾಗಿಹೋಗುತ್ತವೆ.

ಡಾ॥ ಎಂ. ವೆಂಕಟಸ್ವಾಮಿ
ಆರ್. ಹೆಚ್. ಸಾಹುಕಾರ್

ದೇಶದ ಉತ್ತರದಲ್ಲಿ ಹಿಮಾಲಯ ಪರ್ವತಗಳು ಇದ್ದಂತೆ ದೇಶದ ಪಶ್ಚಿಮದಲ್ಲಿ ಜೀವವೈವಿಧ್ಯತೆಯಿಂದ ಕೂಡಿದ ಹಸಿರು ಕಾಡುಗಳು ಮತ್ತು ವನ್ಯಜೀವಿಗಳು ತುಂಬಿರುವ ೧೬೦೦ ಕಿ.ಮೀ. ಉದ್ದ





ಚಾಚಿಕೊಂಡಿರುವ ಘಟ್ಟಗಳಿವೆ. ಈ ಹಸಿರು ಘಟ್ಟಗಳು ನಾಶವಾದರೆ ದಕ್ಷಿಣ ಭಾರತದಲ್ಲಿ ಮರುಭೂಮಿ ಸೃಷ್ಟಿಯಾಗುತ್ತವೆ. ಅದು ಈಗಾಗಲೆ ಪ್ರಾರಂಭವಾಗಿರುವುದಾಗಿ ವಿಜ್ಞಾನಿಗಳು ಹೇಳುತ್ತಿದ್ದಾರೆ. ಒಂದು ಕಾಲದಲ್ಲಿ ಇಡೀ ದಕ್ಷಿಣ ಭಾರತದ ಉದ್ದಗಲಕ್ಕೂ ಹಳ್ಳಕೊಳ್ಳ, ಕೆರೆ–ಕುಂಟೆ, ಬಾವಿಗಳು ನೀರಿನಿಂದ ತುಂಬಿ ತುಳುಕಾಡುತ್ತಿದ್ದವು. ಭೂಮಿ ಯಾವಾಗಲೂ ತಣ್ಣಗಿದ್ದ ಕಾರಣ ಮರಗಿಡ ಹಸಿರು ಹುಲ್ಲಿನಿಂದ ಕಂಗೊಳಿಸುತ್ತಿತ್ತು. ಹುಲ್ಲಿನ ವೈವಿಧ್ಯತೆಯೇ ಸಾವಿರಾರು ರೀತಿ. ಹಸು, ಕುರಿ, ಮೇಕೆ, ಪಕ್ಷಿ, ಪ್ರಾಣಿಗಳು ಎಲ್ಲೆಂದರಲ್ಲಿ ನೀರು ಕುಡಿದು ಹುಲ್ಲು ಮೇಯ್ದು ಓಡಾಡುತ್ತಿದ್ದವು. ಜನರೂ ತಮಗೆ ಎಷ್ಟು ಬೇಕೊ ಅಷ್ಟು ದವಸ ಧಾನ್ಯಗಳನ್ನು ಬೆಳೆದು ಮನೆ ತುಂಬಿಕೊಂಡು ಸುಗ್ಗಿ ಕಾಲವಾದ ಮೇಲೆ ಮತ್ತೆ ಬರುವ ಮುಂಗಾರು ಮಳೆಯವರೆಗೂ ದಿನಗಳನ್ನು ಸಂತೆ ಜಾತ್ರೆಗಳೆಂದು ಸಂತೋಷವಾಗಿ ಕಳೆಯುತ್ತಿದ್ದರು.

ಜನಸಂಖ್ಯೆ ಜಾಸ್ತಿಯಾಗುತ್ತಿದ್ದಂತೆ, ಸಿಕ್ಕ ಸಿಕ್ಕ ಕಡೆಗಳಲ್ಲೆಲ್ಲ ಕೊಳವೆ ಬಾವಿಗಳನ್ನು ಹಾಕಿ ಅಂತರ್ಜಲವನ್ನು ಹೊರಕ್ಕೆ ತೆಗೆದು ಪೋಲು ಮಾಡುತ್ತಿದ್ದಂತೆ ಭೂಮಿ ಕಾದ ಬಾಣಲೆಯಾಗತೊಡಗಿತು. ಸಾವಿರಾರು ವರ್ಷಗಳಿಂದ ಭೂಮಿ ತನ್ನ ಒಡಲಲ್ಲಿ ಸಂಗ್ರಹಿಸಿ ಇಟ್ಟುಕೊಂಡಿದ್ದ ಅಂತರ್ಜಲದ ಪದರುಗಳೆಲ್ಲ ನೂರಾರು ಸಾವಿರಾರು ಅಡಿಗಳ ಆಳದವರೆಗೂ ಖಾಲಿಯಾಯಿತು. ಬಹಳಷ್ಟು ಜನರು ಸಾವಿರಾರು ಅಡಿಗಳ ಆಳದವರೆಗೂ ಕೊಳವೆ ಬಾವಿಗಳನ್ನು ತೋಡಿದರೆ ಅಂತರ್ಜಲ ದೊರಕುತ್ತದೆ ಎಂದು ತಿಳಿಯುವುದು ಅಜ್ಞಾನದ ಸೂಚಕ. ಭೂಮಿಯ ಮೇಲಿನ ಸವಕಲು ಮಣ್ಣು ಪದರುಗಳನ್ನು ಬಿಟ್ಟರೆ ಮಣ್ಣಿನ ಕೆಳಗೆ ಗಟ್ಟಿಯಾದ ಹಾಸು ಶಿಲೆಗಳು ಪ್ರಾರಂಭವಾಗುತ್ತವೆ. ಶಿಲೆಗಳಲ್ಲಿ ನೀರು ಸಂಗ್ರಹವಾಗುವುದಿಲ್ಲ. ಶಿಲೆಗಳ



ಬಿರುಕು–ನೆರಿಕೆಗಳಲ್ಲಿ ಮಾತ್ರ ಅಂತರ್ಜಲ ಕ್ರೋಢೀಕರಣವಾಗುತ್ತದೆ. ಎಲ್ಲಿಯವರೆಗೂ ಬಿರುಕು–ನೆರಿಕೆಗಳು ಇರುತ್ತವೊ ಅಲ್ಲಿಯವರೆಗೂ ನೀರು ದೊರಕುತ್ತದೆ. ಅದಾದ ಮೇಲೆ ಬರೀ ಹಾಸುಬಂಡೆ. ಆದರೆ ಜನರು ನೀರು ದೊರಕದಿದ್ದರೂ ಕೊಳವೆ ಬಾವಿಗಳನ್ನು ಇನ್ನಷ್ಟು ಮತ್ತಷ್ಟು ಆಳಕ್ಕೆ ಕೊರೆಯುತ್ತ ವೃಥಾ ಹಣ ಪೋಲು ಮಾಡುತ್ತಾರೆ.

ಇದೆಲ್ಲದರ ಕಾರಣಗಳಿಂದ ಭೂಮಿಯ ಬಿಸಿ ಏರುತ್ತಿದ್ದು, ಇದ್ದ ಮರಗಿಡಗಳನ್ನೆಲ್ಲ ಕಡಿದುಹಾಕಲಾಗುತ್ತಿದೆ. ಹಸಿರು ಕಡಿಮೆಯಾಗುತ್ತಿದ್ದಂತೆ ಮಳೆ ಕೂಡ ಕಡಿಮೆಯಾಗುತ್ತಾ ಹೋಗುತ್ತದೆ. ಮೋಡಗಳು ಬಿಸಿ ವಾತಾವರಣ ಇರುವ ಕಡೆಗೆ ಬರುವುದಿಲ್ಲ ಎಂಬ ಜ್ಞಾನವನ್ನು ನಾವು ಮರೆತೇ ಹೋಗಿದ್ದೇವೆ. ವರ್ಷ ವರ್ಷವೂ ಮಳೆ ಕಡಿಮೆಯಾಗಿ ಬರ ಶಾಶ್ವತವಾಗಿ ನಮ್ಮ ರಾಜ್ಯವನ್ನು ಆವರಿಸಿಕೊಂಡಿದೆ. ಪಕ್ಷಿ, ಪ್ರಾಣಿಗಳು ನೀರಿಲ್ಲದೆ ಕಂಗಾಲಾಗಿದ್ದರೆ ಜಾನುವಾರುಗಳು ಮೇವಿಲ್ಲದೆ ಕಸಾಯಿಖಾನೆ ಸೇರುತ್ತಿವೆ. ಮನುಷ್ಯರಿಗೂ ಕುಡಿಯಲು ನೀರಿಲ್ಲದೆ ತತ್ವಾರ ಉಂಟಾಗಿದೆ. ಇನ್ನು ಕೃಷಿ ಕೆಲಸ ನಿಂತೇ ಹೋಗಿದೆ. ಕರ್ನಾಟಕದ ಬಹಳಷ್ಟು ಜಿಲ್ಲೆಗಳು ದಶಕಗಳಿಂದ ಕಾಣದ ಬರವನ್ನು ಎದುರಿಸುತ್ತಿವೆ. ಎಂತಹ ಬರ ಬಂದರೂ ಅಷ್ಟೋ ಇಷ್ಟೋ ರಾಗಿಯನ್ನು ಬೆಳೆದುಕೊಳ್ಳುತ್ತಿದ್ದ ಬರಡು ನೆಲದ ರೈತರು ಮೊದಲ ಬಾರಿಗೆ ದಿಕ್ಕು ತೋಚದೆ ಕಂಗಾಲಾಗಿದ್ದಾರೆ. ಹಳ್ಳಿಯ ಬದುಕು ಮೂರಾಬಟ್ಟೆಯಾಗಿ ಹೋಗಿದೆ. ಹಳ್ಳಿಹಳ್ಳಿಗಳೇ ಸಂಪೂರ್ಣವಾಗಿ ಖಾಲಿಯಾಗಿ ನಗರಗಳ ಮೇಲೆ ಬೀಳುತ್ತಿದ್ದು, ನಗರಗಳು ಮಾಲಿನ್ಯ ಕೂಪಗಳಾಗಿ ಉಸಿರಾಡಲಾಗದೆ ತತ್ತರಿಸುತ್ತಿವೆ.

ಈಗ ದಕ್ಷಿಣ ಭಾರತದ ಬಯಲು ಪ್ರದೇಶಗಳು ಸಂಪೂರ್ಣವಾಗಿ ಮರುಭೂಮಿಯಾಗುವ ಎಲ್ಲಾ ಚಿಹ್ನೆಗಳನ್ನು ತೋರುತ್ತಿವೆ. ದಕ್ಷಿಣ ಭಾರತದ ಬಹಳಷ್ಟು ಭಾಗಗಳು ಪಶ್ಚಿಮ ಘಟ್ಟಗಳಿಂದ ಹುಟ್ಟಿ ಹರಿಯುವ ೬೬ ನದಿ–ಉಪನದಿಗಳು ಉಸಿರಾಡುತ್ತಿದ್ದು, ಅವು ಕೂಡ ತೊಂದರೆಗೆ ಸಿಲುಕಿಕೊಳ್ಳುತ್ತಿವೆ. ಇದಕ್ಕೆ ಕಾರಣ ಮನುಷ್ಯ ನಿಸರ್ಗದ ಮೇಲೆ ನಡೆಸುತ್ತಿರುವ ಘಾತಕ ಚಟುವಟಿಕೆಗಳು. ಒಟ್ಟಿನಲ್ಲಿ ಹವಾಮಾನ ತೀವ್ರವಾಗಿ ಬದಲಾಗುತ್ತಿದ್ದು ದಕ್ಷಿಣ ಭಾರತ ರಾಜಸ್ತಾನದ ಮರಳುಗಾಡುಗಳಂತೆ ಬದಲಾಗುತ್ತಿದೆ. ವಿಶೇಷವೆಂದರೆ ಒಂದು ಕಾಲದಲ್ಲಿ ಇಂದಿನ ರಾಜಸ್ತಾನ, ಸರಸ್ವತಿ ನದಿ, ಮಹಾನದಿ ಮತ್ತು ಅದರ ಉಪ ನದಿಗಳಿಂದ ಹಚ್ಚಹಸಿರಾಗಿ ಸಸ್ಯಶಾಮಲೆಗಳಿಂದ ತುಂಬಿ ತುಳುಕಾಡುತ್ತಿತ್ತು ಎನ್ನುವುದು.

**ಡಾ॥ ಎಂ. ವೆಂಕಟಸ್ವಾಮಿ**

# ೪ಡಿ, 'ಸಿ' ಟವರ್, ಕ್ಲಾಸಿಕ್ ಅಪಾರ್ಟ್‌ಮೆಂಟ್ಸ್

ಅಮೃತ ವಿಶ್ವವಿದ್ಯಾಪೀಠಂ ಕಾಲೇಜ್ ಹತ್ತಿರ, ಕಸವನಹಳ್ಳಿ ರಸ್ತೆ, ಬೆಂಗಳೂರು – ೫೬೦ ೦೩೫

**ಆರ್. ಹೆಚ್. ಸಾಹುಕಾರ್**

ಜಿಯಾಲಾಜಿಕಲ್ ಸೊಸೈಟಿ ಆಫ್ ಇಂಡಿಯಾ, ಬೆಂಗಳೂರು

ಮೇಯರ್ ಆಫೀಸಿನಿಂದ ಆತ ಹೊರಬರುತ್ತಿದ್ದಂತೆ ಜನರು ಆತನನ್ನು ಸುತ್ತುವರಿದು ಕುತೂಹಲದಿಂದ ಹಾಗೂ ಅವಮಾನಗೊಳಿಸುವ ರೀತಿಯಲ್ಲಿ ಪ್ರಶ್ನೆ ಮಾಡಿದರು. ಆತನಿಗೆ ಸಿಟ್ಟು ಬರಲಿಲ್ಲ. ತಾನು ರಸ್ತೆಯಲ್ಲಿ ಎತ್ತಿಕೊಂಡಿದ್ದ ಸುರುಳಿ ತಂತಿಯ ವಿಷಯವನ್ನು ವಿವರಿಸಿದ. ಯಾರೂ ಅದನ್ನು ನಂಬಲಿಲ್ಲ. ಎಲ್ಲರೂ ನಕ್ಕರು. ದಾರಿಯುದ್ದಕ್ಕೂ ಹೋಗುತ್ತ ಎದುರಾದ ಎಲ್ಲರಿಗೂ ತಂತಿ ಕತೆಯನ್ನು ವಿವರಿಸಿದ. ತನ್ನ ಜೋಬುಗಳನ್ನು ಖಾಲಿ ಮಾಡಿ ತೋರಿಸಿದ. ಏನೂ ಇರಲಿಲ್ಲ. ಅವರು ಇವನನ್ನು ನಂಬಲಿಲ್ಲ. ಅವರೆಲ್ಲ "ಘಾಟಿ ಮುದುಕ, ಇಲ್ಲಿಂದ ತೊಲಗು" ಎಂದರು. ಆತನಿಗೆ ಕೋಪ ಬಂದು ತುಂಬ ನೋವಿನಿಂದ ಏನೂ ಮಾಡಲು ತೋಚದೆ ತನ್ನನ್ನು ಯಾರೂ ನಂಬದಿದ್ದರೂ ಪದೇ ಪದೇ ನಡೆದದ್ದನ್ನು ಹೇಳುತ್ತ ನಡೆದ.

# ಸುರುಳಿ ಸುತ್ತಿದ ತಂತಿ



ಗೋಡರ್‌ವಿಲ್‌ನಿಂದ ಹಳ್ಳಿಗರು ಮತ್ತು ಅವರ ಹೆಂಡಿರು ರಸ್ತೆಗಳ ಉದ್ದಕ್ಕೂ ಆ ದಿನ ಸಂತೆ ಮೈದಾನದ ಕಡೆ ನಡೆದುಬರುತ್ತಿದ್ದರು. ಕಾರಣ ಆ ದಿನ ಸಂತೆ ದಿನ. ಗಂಡಸರು ಸಾವಕಾಶವಾಗಿ ಹೆಜ್ಜೆ ಹಾಕುತ್ತಿದ್ದರು. ಅವರ ಶರೀರವೆಲ್ಲಾ ಮುಂದೆ ಬಾಗಿತ್ತು. ಅವರ ಉದ್ದನೆಯ ಕಾಲುಗಳು ಬೆಳೆದ ಗೋಧಿ ಫಸಲನ್ನು ಕಟಾವು ಮಾಡುತ್ತಿದ್ದರ ಫಲವಾಗಿ ನೇರವಾಗಿರದೆ ವಕ್ರಗತಿಯಾಗಿದ್ದವು. ಎಡಭುಜ ನೊಗವನ್ನು ಹೊರುತ್ತಿದ್ದ ಕಾರಣದಿಂದ ಸ್ವಲ್ಪ ಮೇಲೇರುತ್ತಿತ್ತು. ಅವರ ಆಕಾರವೇ ಒಂದು ರೀತಿಯಲ್ಲಿ ವಿಲಕ್ಷಣವಾಗಿ ಕಾಣುತ್ತಿತ್ತು. ಇದು ಅವರ ಕಷ್ಟಸಹಿಷ್ಣು ಜೀವನದ ಹೆಗ್ಗುರುತಾಗಿತ್ತು. ಅವರ ಮೇಲಿನ ಹೊದಿಕೆ ನೀಲಿ ಬಣ್ಣದ್ದು. ಜೊತೆಗೆ ಮಿರಿ ಮಿರಿಯಾಗಿ ಗಂಜಿ ಹಾಕಿದ ಕತ್ತಿನ ಹಿಂಭಾಗದಲ್ಲಿ ಮತ್ತು ಮಣಿಕಟ್ಟಿನ ಸುತ್ತಲೂ ಬಿಳಿಯ ಚಿತ್ತಾರವುಳ್ಳ ಉಡಿಗೆ. ಅದು ಅವರ ಒಣಕಲು ಶರೀರವನ್ನು ಆವರಿಸಿಕೊಂಡು ದುಂಡುದುಂಡಾಗಿ ಕಾಣುವಂತೆ ತೋರುತ್ತಿತ್ತು. ಅವರನ್ನು ನೋಡಿದರೆ ಗಾಳಿ ತುಂಬಿದ ಬೆಲೂನಿನಂತೆ, ಯಾವುದೇ ಕ್ಷಣ ಮೇಲೆ ಹಾರುವಂತೆ ಕಾಣಿಸುತ್ತಿತ್ತು. ಆ ಬೆಲೂನಿನಿಂದ ಒಂದು ತಲೆ, ಎರಡು ಕೈಗಳು ಮತ್ತು ಎರಡು ಕಾಲುಗಳು ಮಾತ್ರ ಪ್ರಧಾನವಾಗಿ ಕಾಣಸಿಗುತ್ತಿದ್ದವು.

ಕೆಲವರು ಒಂದು ಹಸು ಅಥವಾ ಒಂದು ಕರುವನ್ನು ಒಂದು ಹಗ್ಗ ಕಟ್ಟಿ ನಡೆಸುತ್ತಿದ್ದರು. ಅವರ ಹೆಂಡರು ಒಂದು ಗಿಡದ ರೆಂಬೆಯಿಂದ ಅದನ್ನು ಹೊಡೆಯುತ್ತಾ ಜೋರಾಗಿ ಹೆಜ್ಜೆ ಹಾಕುವಂತೆ ಮಾಡುತ್ತಿದ್ದುದು ಕಾಣುತ್ತಿತ್ತು. ಹೆಂಗಸರು ದೊಡ್ಡ ದೊಡ್ಡ ಬುಟ್ಟಿಗಳನ್ನು ತಲೆಯ ಮೇಲೆ ಇರಿಸಿಕೊಂಡಿದ್ದು, ಆ ಬುಟ್ಟಿಗಳಿಂದ ಕೋಳಿಗಳು ಅಥವಾ ಡಕ್ಕುಗಳು ತಮ್ಮ ತಲೆ ಭಾಗವನ್ನು ಹೊರಹಾಕುವುದು ಕಾಣಿಸುತ್ತಿತ್ತು. ಅವರು ತಮ್ಮ ಗಂಡಂದಿರಿಗಿಂತ ಹೆಚ್ಚು ಚುರುಕಾಗಿ, ವೇಗವಾಗಿ ಕಾಲು ಹಾಕುತ್ತಿದ್ದರು. ಅವರ ಒಣಕಲ ಶರೀರ ಹಾಗೂ ಎದೆ ಭಾಗವನ್ನು ತಮ್ಮ ಸಾಮಾನ್ಯವಾದ ಶಾಲುಗಳಿಂದ ಮುಚ್ಚಿಕೊಂಡು ತಲೆಯನ್ನು ಬಿಳಿ ಬಟ್ಟೆಯಿಂದ ಸುತ್ತಿಕೊಂಡು ಅದರ ಮೇಲೆ ಬಿಳಿ ಟೋಪಿಗಳನ್ನು ಹಾಕಿಕೊಂಡು ಹೆಜ್ಜೆ ಹಾಕುತ್ತಾ ಇದ್ದರು.

**ಪ್ರೊ॥ ಬಿ. ಕೆ. ಹನುಮಂತಯ್ಯ**

ಇವರ ಪಕ್ಕದಲ್ಲೇ ಇಬ್ಬರು ಗಂಡಸರು ಮತ್ತು ಒಬ್ಬ ಹೆಂಗಸು ಇದ್ದ ಗಾಡಿ ನಿಧಾನಗತಿಯಲ್ಲಿ ಅತ್ತಿಂದಿತ್ತ ಇತ್ತಿಂದತ್ತ ಅಲುಗತ್ತ ಚಲಿಸುತ್ತಿತ್ತು. ಗಾಡಿಯ ಅಲುಗುವಿಕೆಯನ್ನು ತಾಳಲಾರದೆ ಆ ಹೆಂಗಸು ಗಾಡಿಯ ಅಂಚನ್ನು ಭದ್ರವಾಗಿ ಹಿಡಿದು ಸಾಗುತ್ತಿದ್ದಳು.

ಗೋಡರ್‌ವಿಲ್‌ನ ಮುಖ್ಯ ಸರ್ಕಲ್‌ನಲ್ಲಿ ಒಂದು ದೊಡ್ಡ ಗುಂಪು ಸೇರಿತ್ತು. ಗುಂಪಿನಲ್ಲಿ ದನಗಳೂ ಜಮಾಯಿಸಿದ್ದವು. ದನಗಳ ಕೂಗಾಟ, ಅವುಗಳ ಕೊಂಬುಗಳು, ಸಾಹುಕಾರ ವ್ಯವಸಾಯಗಾರರ ಉದ್ದನೆಯ ಟೋಪಿಗಳು (ಹ್ಯಾಟ್ಸ್) ಮತ್ತು ರೈತ ಮಹಿಳೆಯರ ತಲೆಯ ಉಡುಪುಗಳು ಎಲ್ಲಕ್ಕಿಂತ ಎತ್ತರವಾಗಿ ಕಾಣುತ್ತಿದ್ದವು. ಜನಜಂಗುಳಿಯ ಕಿರಿಚಾಟದಲ್ಲಿ ಒಬ್ಬೊಬ್ಬ ರೈತರ ಭೀಕರ ನಗುವಿನ ಶಬ್ದ ಹೆಚ್ಚು ಪ್ರಧಾನವಾಗಿ ಕೇಳಿಸುತ್ತಿತ್ತು. ಜೊತೆಗೆ ಗೋಡೆಗೆ ಕಟ್ಟಿದ ಹಸುಗಳು ಅಂಬಾ ಎಂಬ ಶಬ್ದವೂ ಮಿಳಿತವಾಗಿತ್ತು. ಇದೆಲ್ಲವೂ ರೈತ ಸಮುದಾಯಕ್ಕೆ ಚಿರಪರಿಚಿತವಾದ ಗೊಬ್ಬರ, ದನದ ಕೊಟ್ಟಿಗೆ, ಕುದುರೆಲಾಯ, ಗಂಜಳ, ಬೆವರು (ದನಗಳ ಹಾಗೂ ಮನುಷ್ಯರ) ಸೇರಿ ಸಹಿಸಲಾರದ ವಾತಾವರಣವೇರ್ಪಟ್ಟಿತ್ತು.

ಈ ಸಂದರ್ಭದಲ್ಲಿ "ಮೈತ್ರೆ ಹಾಚ್‌ಕಂ" ಎನ್ನುವ ವ್ಯಕ್ತಿ ಆಗ ತಾನೆ ಗೋಡರ್‌ವಿಲ್‌ಗೆ ಆಗಮಿಸಿದ್ದು, ಮುಖ್ಯ ಸರ್ಕಲ್ ಕಡೆಗೆ ಹೆಜ್ಜೆ ಹಾಕುತ್ತಿದ್ದ. ಆತ ದಾರಿಯಲ್ಲಿ ಬಿದ್ದಿದ್ದ ಒಂದು ಸುರುಳಿ ಸುತ್ತಿದ ತಂತಿಯನ್ನು ಕಂಡ. ಆತ ನಿಜವಾದ ನಾರ್ಮನ್ ದೇಶದವನಂತೆ ತುಂಬ ಮಿತವ್ಯಯದಲ್ಲಿ ನಂಬಿಕೆಯುಳ್ಳ ವ್ಯಕ್ತಿಯಾಗಿದ್ದು ಯಾವ ವಸ್ತುವನ್ನು ವಿನಾ ಕಾರಣ ಹಾಳಾಗಲು ಬಿಡದವನಾಗಿದ್ದ. ಆದ್ದರಿಂದ ಆತ ರಸ್ತೆಯಲ್ಲಿ ಕಂಡ ಆ ಚಿಕ್ಕ ತಂತಿಯನ್ನು ಕೈಗೆತ್ತಿಕೊಂಡು ಸುರುಳಿ ಸುತ್ತುತ್ತಿದ್ದ ಸಮಯದಲ್ಲಿ ಎದುರು ಮನೆಯ ಹೊಸ್ತಿಲಿನಲ್ಲಿ ಮೈತ್ರರಿ ಮಲಾಂಡಿಯನ್ (ಕುದುರೆ ಜೀನನ್ನು ಮಾಡುವವ)ನನ್ನು ನೋಡಿದ. ಆತ ಈತನು ಏನನ್ನೋ ಎತ್ತಿಕೊಂಡಿದ್ದನ್ನು ನೋಡಿದ. ಇಬ್ಬರಿಗೂ ಪರಿಚಯವಿತ್ತು. ಕುದುರೆಗಳಿಗೆ ಹಾಕುವ ಲಗಾಮುಗಳ ಅಥವಾ ದನಗಳಿಗೆ ಹಾಕುವ ಮೂಗುದಾರ, ಹಗ್ಗಗಳ ವ್ಯವಹಾರದ ಸಲುವಾಗಿ ಇಬ್ಬರಿಗೂ ಈರ್ಷೆ ಇತ್ತು. ತಾನು ಎತ್ತಿಕೊಂಡ ವಸ್ತುವನ್ನು ಕೂಡಲೇ ಈತ ಆತನಿಗೆ ಕಾಣದಂತೆ ಜೇಬಿಗೆ ಹಾಕಿದ. ಈತ ಮತ್ತೆ ನೆಲದ ಕಡೆ ನೋಡಿ ಏನೂ ಸಿಗಲಿಲ್ಲವೆಂಬಂತೆ ನಟಿಸಿ ಆತ ನನ್ನನ್ನು ನೋಡಿದ್ದು ಸರಿಯಾಗಲಿಲ್ಲವೆಂಬ ಭಾವನೆಯಿಂದ ಬೆನ್ನು ಬಗ್ಗಿಸಿದ್ದರಿಂದ ಆದ ನೋವನ್ನು ಪಕ್ಕಕ್ಕೆ ತಳ್ಳಿ ಮಾರ್ಕೆಟ್ ಕಡೆಗೆ ಹೆಜ್ಜೆ ಹಾಕಿದ. ಆ ಜನಜಂಗುಳಿಯಲ್ಲಿ ಸೇರಿ ಮರೆಯಾದ. ರೈತರು ಹಾಲು ಕರೆದು ಮಾರಾಟ ಮಾಡಿ ಚೌಕಾಸಿಯಲ್ಲಿ ಸಿಕ್ಕಿ ಪೇಚಾಡಿ ಲಾಭನಷ್ಟಗಳ ಲೆಕ್ಕ ಹಾಕುತ್ತಾ ಇದ್ದರೆ ಹೆಂಗಸರು ತಮ್ಮ ಕೋಳಿಗಳನ್ನು ಮಾರುತ್ತ ಚೌಕಾಸಿ ಮಾಡುತ್ತಾ ಕೊಳ್ಳುವವ ಕೊಳ್ಳದೆ ಹೋಗುವುದನ್ನು ಗಮನಿಸಿ ಸಿಕ್ಕಷ್ಟೇ ಲಾಭ ಎಂದುಕೊಂಡು ಹೋಗುವವನನ್ನು ಕರೆದು ಅವನು ಕೇಳಿದ್ದಕ್ಕೆ ಮಾರಿ ವ್ಯವಹಾರ ಮುಗಿಸುತ್ತಿದ್ದರು. ಕ್ರಮೇಣ ಸಂತೆಯಿಂದ ಒಬ್ಬೊಬ್ಬರೇ ಖಾಲಿಯಾಗಿ, ಸಂತೆ ಬರಿದಾಗಿ, ಊಟಕ್ಕಾಗಿ ಜನಜಂಗುಳಿ ಹೋಟೆಲ್ ಬಳಿ ಜಮಾಯಿಸಿತು. ಜೋರ್ಡೆನ್ ಹೋಟೆಲ್ ಬಳಿ ಎಲ್ಲ ರೀತಿಯ ಸಾರಿಗೆ ವಾಹನಗಳು ಜಮಾಯಿಸಿದ್ದವು. ಊಟ ಮಾಡಲು ಎಲ್ಲರೂ ದೊಡ್ಡ ಒಲೆಯ ಬಳಿ ಕುಳಿತಿದ್ದರು. ಒಲೆಯಲ್ಲಿ ಕೋಳಿ, ಪಾರಿವಾಳ, ಮಾಂಸದ ತೊಡೆಗಳು, ದನದ ಮಾಂಸ ಉರಿಯಲ್ಲಿ ಬೇಯುತ್ತಾ ಇದ್ದವು. ಕಾಯುತ್ತಾ ಕುಳಿತ್ತಿದ್ದ ಗ್ರಾಹಕರ ಬಾಯಲ್ಲಿ ನೀರೂರಿಸುವ ಘಮ ಘಮಿಸುವ ಪರಿಮಳ ಸೂಸುತ್ತಿದ್ದುದನ್ನು ಆಘ್ರಾಣಿಸುತ್ತಿದ್ದವರನ್ನು ಆಹ್ವಾನಿಸುತ್ತಿದ್ದವು. ರೈತ ಸಮೂಹದ ಎಲ್ಲ ಅಂತಸ್ತಿನವರೂ ಆ ಹೋಟೆಲ್ ಯಜಮಾನ, ಕುದುರೆ ವ್ಯಾಪಾರಿ, ಫಾಟಿ ಇಸಂ, ಹಣವಂತ ದರ್ಬಾರನ್ನು ಗಮನಿಸುತ್ತಿದ್ದರು.

ಎಲ್ಲ ಬಗೆಯ ತಿನಿಸುಗಳು ತಟ್ಟೆಗಳಲ್ಲಿ ಒಬ್ಬರಿಂದೊಬ್ಬರಿಗೆ ರವಾನಿಸಲ್ಪಡುತ್ತಿದ್ದವು. ಜೊತೆಯಲ್ಲೇ ಜಗ್ಗುಗಳಲ್ಲಿ ಆ್ಯಪಲ್‌ನಿಂದ ತಯಾರಿಸಿದ ಪಾನೀಯ ಖಾಲಿಯಾಗುತ್ತಿತ್ತು. ಪ್ರತಿಯೊಬ್ಬರೂ ತಮ್ಮ ವ್ಯವಹಾರದ ಬಗ್ಗೆ ಪಕ್ಕದವರೊಂದಿಗೆ ವಿನಿಮಯ ಮಾಡಿಕೊಳ್ಳುವುದು ನಡೆದಿತ್ತು. ಅವರ ಫಸಲುಗಳ ಬಗ್ಗೆಯೂ ಮಾತುಕತೆ ನಡೆಯುತ್ತಿತ್ತು. ಪರಿಸರ ಸರಕಾರಿ ಬೆಳೆಗೆ ಅನುಕೂಲವಾಗಿತ್ತು. ಆದರೆ ಗೋಧಿ ಬೆಳೆಗೆ ಪ್ರತಿಕೂಲವಾಗಿತ್ತು. ಇದ್ದಕ್ಕಿದ್ದಂತೆ ನಗಾರಿ ಬಾರಿಸಿದ ಶಬ್ದ ಎಲ್ಲರನ್ನೂ ಚಕಿತಗೊಳಿಸಿ ಎದ್ದು ನಿಲ್ಲುವಂತೆ ಮಾಡಿತು. ಇದಕ್ಕೆ ಬೆಲೆ ಕೊಡದೆ ಕೆಲವರು ಉದಾಸೀನದಿಂದ ಕುಳಿತೇ ಇದ್ದರು. ಎದ್ದವರೆಲ್ಲರೂ ಬಾಗಿಲ ಬಳಿ, ಕಿಟಕಿಗಳ ಬಳಿ ಬಾಯಲ್ಲಿ ಇದ್ದ ಆಹಾರವನ್ನು ಮೆಲ್ಲುತ್ತಾ ಕೈಯಲ್ಲಿ ಕರವಸ್ತ್ರ ಹಿಡಿದೇ ನುಗ್ಗಿದರು.

ಸಮಾಚಾರವನ್ನು ಪ್ರಚಾರ ಮಾಡಲು ಬಂದ ವ್ಯಕ್ತಿ ತನ್ನ ನಗಾರಿ ಬಾರಿಸುವುದನ್ನು ನಿಲ್ಲಿಸಿ ಕೀರಲು ಸ್ವರದಲ್ಲಿ ನಿಧಾನವಾಗಿ "ಕೇಳಿರಿ, ಕೇಳಿರಿ" ಎಂದು ಕೂಗಿದ. "ಗೋಡರ್‌ವಿಲ್ ನಿವಾಸಿಗಳಿಗೆ ಹಾಗೂ ಸಂತೆಗೆ ಬಂದ ಎಲ್ಲರಿಗೂ ತಿಳಿಯಪಡಿಸುವುದೇನೆಂದರೆ ಇಂದು ಬೆಳಿಗ್ಗೆ ಬೆನ್ಜೆವಿಲ್ ರಸ್ತೆಯಲ್ಲಿ ೯ರಿಂದ ೧೦ರ ಒಳಗೆ ಐನೂರು ಫ್ರಾಂಕ್ಸ್ ಇದ್ದ ಚರ್ಮದ ಚೀಲ ಮತ್ತು ಹಲವು ವ್ಯವಹಾರದ ಪತ್ರಗಳು ಕಳೆದುಹೋಗಿವೆ. ಇವು ಯಾರ ಕೈಗೆ ಸಿಕ್ಕಿದ್ದರೂ ಅವನ್ನು ತುರ್ತಾಗಿ ನಗರದ ಮೇಯರ್ ಆಫೀಸಿಗೆ ಹಿಂದಿರುಗಿಸಬೇಕು ಅಥವಾ ಮೆನ್‌ವಿಲ್‌ನ ಮೈತ್ರಿ ಫಾರ್ಚೂನ್ ಹಾಲ್‌ಬ್ರಿಕ್‌ಗೆ ಹಿಂದಿರುಗಿಸಬೇಕು. ಇದಕ್ಕೆ ಇಪ್ಪತ್ತು ಫ್ರಾಂಕ್ ಬಹುಮಾನ ಉಂಟು." – ಇಷ್ಟು ಘೋಷಿಸಿ ಆತ ನಿರ್ಗಮಿಸಿದ. ನಂತರ ಸ್ವಲ್ಪ ದೂರದಲ್ಲಿ ಅದೇ ಸಮಾಚಾರ ಕೂಗಿ ಹೇಳುತ್ತಿದ್ದುದು ಕೇಳಿಸಿತು. ಅಲ್ಲಿದ್ದವರಲ್ಲಿ ಕಳೆದುಹೋದ ಪಾಕೆಟ್ ಸಿಗುವುದೋ ಇಲ್ಲವೋ ಎಂದು ತಮ್ಮ ತಮ್ಮಲ್ಲೇ ಚರ್ಚೆಯಾಯಿತು. ಊಟ ಮುಗಿದು ಕಾಫಿ ಸೇವನೆ ಮಾಡುತ್ತಿದ್ದಂತೆ ಪೊಲೀಸ್ ಇಲಾಖೆಯ ಮುಖ್ಯಸ್ಥ ಬಾಗಿಲ ಬಳಿ ನಿಂತಿದ್ದ. ಆತ ಅಲ್ಲಿದ್ದವರನ್ನು ಕೇಳಿದ! "ಇಲ್ಲಿ ಬ್ರೂಟ್ ಊರಿನ ಮೈತ್ರೆ ಹಾಚ್‌ಕಂ ಎಂಬ ವ್ಯಕ್ತಿ ಇರುವರೆ?" ಆ ವ್ಯಕ್ತಿ ಅಲ್ಲೆ ಒಂದು ಬೆಂಚಿನ ಮೇಲೆ ಕುಳಿತಿದ್ದ "ನಾನೇ" ಎಂದು ಉತ್ತರಿಸಿದ. ಆತ ಮತ್ತೆ ಆ ವ್ಯಕ್ತಿಯನ್ನು ಕುರಿತು, ತಾವು ದಯಮಾಡಿ ಮೇಯರ್ ಆಫೀಸಿಗೆ ಬರಬೇಕೆಂದ. ಮೇಯರ್ ತಮ್ಮೊಂದಿಗೆ ಸ್ವಲ್ಪ ಮಾತನಾಡಲು ಬಯಸಿದ್ದಾರೆಂದ. ಮೈತ್ರೆ ಹಾಚ್‌ಕಂಗೆ ಆಶ್ಚರ್ಯ ಮತ್ತು ಗಾಬರಿಯಾಯ್ತು. ಒಂದೇ ಗುಟುಕಿಗೆ ಕೈಯಲ್ಲಿದ್ದ ಬ್ರಾಂದಿ ಗ್ಲಾಸನ್ನು ಖಾಲಿ ಮಾಡಿ ಎದ್ದ. ಬೆಳಿಗ್ಗೆಗಿಂತ ಹೆಚ್ಚು ಬಾಗಿದ. ಹೆಜ್ಜೆ ಹಾಕಲು ಒಂದಕ್ಕಿಂತ ಇನ್ನೊಂದು ಹೆಚ್ಚು ಕಷ್ಟವಾಯಿತು ಅಂತೂ ಹೊರಟು "ಇದೋ ಬಂದೆ ಇದೋ ಬಂದೆ" ಎನ್ನುತ್ತ ಹೊರಟ.

ತನ್ನ ಆರಾಮು ಕುರ್ಚಿಯ ಮೇಲೆ ಮೇಯರ್ ಈತನಿಗಾಗಿ ಕಾದು ಕುಳಿತ್ತಿದ್ದ. ಆತ ಆ ಪ್ರದೇಶದ ನೋಟರಿಯೂ ಸಹ. ದಢೂತಿ ವ್ಯಕ್ತಿ, ತುಂಬ ಗಾಂಭೀರ್ಯದ, ಅರ್ಥಕ್ಕಿಂತಲೂ ಹೆಚ್ಚು ಶಬ್ದಮಯವಾದ ಭಾಷೆಯನ್ನು ಉಪಯೋಗಿಸುವ ವ್ಯಕ್ತಿ. ಆತ, "ಮೈತ್ರೆ ಹಾಚ್‌ಕಂ ಅವರೇ, ಇಂದಿನ ಬೆಳಿಗ್ಗೆ ಮಾನ್‌ವಿಲ್ ರಸ್ತೆಯಲ್ಲಿ ತಾವು ಮೈತ್ರಿ ಹಾಲ್‌ಬ್ರಿಕ್ ಅವರು ಬೀಳಿಸಿದ್ದ ಪಾಕೆಟ್ ಬುಕ್ಕನ್ನು ಎತ್ತಿಕೊಂಡಿದ್ದನ್ನು ನೋಡಿದ್ದಾರೆ ಎಂದ. ಈ ಗೃಹಸ್ಥನಿಗೆ ಆಶ್ಚರ್ಯವೂ ಭಯವೂ ಆಯ್ತು. ಹೆದರಿಕೆಯಿಂದ ಮೇಯರನ್ನು ನೋಡುತ್ತಾ ಏಕೆ ತನ್ನ ಮೇಲೆ ಅನುಮಾನ ಬಂತೆಂದು ತಬ್ಬಿಬ್ಬಾಗಿ, "ನಾನು ಪಾಕೆಟ್ ಬುಕ್ಕನ್ನು ಎತ್ತಿಕೊಂಡನೇ?" ಎಂದ. ಮೇಯರ್ "ಹೌದು" ನೀನೇ, ನೀನೆ ಎಂದು ಗುಡುಗಿದರು. "ಪ್ರಮಾಣ ಮಾಡುತ್ತೇನೆ, ಅದನ್ನು ನಾನು ಕೇಳೇ ಇಲ್ಲ" ಎಂದ ಈ ಪ್ರಾಮಾಣಿಕ ವ್ಯಕ್ತಿ. ಮೇಯರ್ ಅಂದ "ನೀನು ಅದನ್ನು ಎತ್ತಿ ಕೊಂಡಿದ್ದನ್ನು ನೋಡಿದವರಿದ್ದಾರೆ" ಎಂದ. ನಾನು ಎತ್ತಿಕೊಂಡಿದ್ದನ್ನು ನೋಡಿದವರಿದ್ದಾರೆಯೇ? ಯಾರು ಹಾಗೆ ಹೇಳಿದವರು? ಎಂದು ಪ್ರಶ್ನಿಸಿದ, ಹಾಚ್‌ಕಂ. ಮೇಯರ್ ಹೇಳಿದ, "ಹಾಗೆ ಹೇಳಿದ್ದು ಕುದುರೆ ಜೀನ್ ತಯಾರಿಸುವ ಮಲಾಂಡೇನ್. ಈ ಪ್ರಾಮಾಣಿಕ ವಯಸ್ಸಾದ ವ್ಯಕ್ತಿಗೆ ಎಲ್ಲ ಅರ್ಥವಾಗಿ ತುಂಬ ಸಿಟ್ಟು ಬಂದು, "ಆ ಕುದುರೆ ಜೀನ್ ಮಾಡುವವನು ನೋಡಿದ್ದು ಮೇಯರ್ ಅವರೇ – ಇಗೋ ಈ ಕಬ್ಬಿಣದ ಸುರುಳಿ ಸುತ್ತಿದ್ದ ತಂತಿಯನ್ನು" ಎನ್ನುತ್ತ ತನ್ನ ಜೇಬಿನಿಂದ ತಾನು ಬೆಳಗ್ಗೆ ಎತ್ತಿಕೊಂಡಿದ್ದ ತಂತಿಯನ್ನು ಅವರ ಮುಂದೆ ಹಿಡಿದ. ಮೇಯರ್ ಅದನ್ನು ನಂಬದೆ ಈ ತಂತಿಯನ್ನು ಕಳೆದುಹೋದ ಪಾಕೆಟ್ ಬುಕ್ಕು ಎಂದು ನಾನು ನಂಬಲಾರೆ ಎಂದರು. ಈ ಪ್ರಾಮಾಣಿಕ ವ್ಯಕ್ತಿಗೆ ಎಲ್ಲಿಲ್ಲದ ಕೋಪ ಬಂದು ತನ್ನ

ಒಂದು ಕೈ ಎತ್ತಿ ಒಂದು ಕಡೆ ತಿರುಗಿ ಉಗುಳಿ ತನ್ನ ಪ್ರಾಮಾಣಿಕತನವನ್ನು ಮತ್ತೊಮ್ಮೆ ಸ್ಪಷ್ಟೀಕರಿಸಲು, "ಮೇಯರ್ ಮಹಾಶಯರೆ! ನಾನು ಹೇಳುವುದು ಸತ್ಯ. ಅಪ್ಪಟ ಸತ್ಯ. ಅದನ್ನೇ ನಾನು ಸಾವಿರ ಸಲ ಹೇಳುತ್ತೇನೆ. ನೀವು ನಂಬಿ ಇಲ್ಲ ಬಿಡಿ, ನಾನು ನನ್ನ ಆತ್ಮಸಾಕ್ಷಿಯಾಗಿ ಹೇಳುತ್ತಿದ್ದೇನೆ" ಎಂದ. ಮೇಯರ್ ಮತ್ತೆ, "ನೀವು ರಸ್ತೆಯ ಮಧ್ಯೆ ನಿಂತು ಅಕ್ಕಪಕ್ಕ ಹಣವೇನಾದರೂ ಬಿದ್ದಿರಬಹುದೆಂದು ಸ್ವಲ್ಪ ಸಮಯ ನೋಡಿದ್ದು ನಿಜವಲ್ಲವೆ" ಎಂದರು. ಆ ವ್ಯಕ್ತಿಗೆ ಕೋಪ ಬಂದು ಮಾತನಾಡಲಾಗದೆ, "ಯಾರೋ ಒಬ್ಬ ಒಳ್ಳೆಯ ವ್ಯಕ್ತಿಯ ಬಗ್ಗೆ ಈ ರೀತಿ ಆಪಾದನೆ ಹೊರಿಸಿ ನನ್ನ ವ್ಯಕ್ತಿತ್ವಕ್ಕೆ ಮಸಿ ಬಳಿಯಲು ಪ್ರಯತ್ನಿಸಲು ಹೇಗೆ ಸಾಧ್ಯ?" ಎಂದು ಗುಡುಗಿದ.

ತಾನು ಎಷ್ಟೇ ಹೇಳಿದರೂ ಅದನ್ನು ನಂಬುವವರೂ ಇರಲಿಲ್ಲ. ತನ್ನ ಬಗ್ಗೆ ಸುಳ್ಳು ವದಂತಿ ಹಬ್ಬಿದ ಮಲಾಂಡೇನ್‌ನನ್ನು ಒಮ್ಮೆ ಭೇಟಿಯಾದ. ಆತ ತಾನು ಹೇಳಿದ್ದನ್ನೇ ಮತ್ತೆ ಮತ್ತೆ ಹೇಳಿದ. ಇಬ್ಬರೂ ಒಬ್ಬರನ್ನೊಬ್ಬರು ಒಂದು ಗಂಟೆ ಕಾಲ ಬೈದಾಡಿದರು. ತನ್ನ ಕೋರಿಕೆಯಂತೆ ಹಾಚ್‌ಕಂನನ್ನು ಎಲ್ಲ ರೀತಿಯಲ್ಲೂ ಪರೀಕ್ಷಿಸಿದರೂ ಆತನ ಬಳಿ ಏನೂ ಸಿಗಲಿಲ್ಲ. ಮೇಯರ್‌ಗೆ ಏನೂ ತೋಚದೆ ತಾನು ಸರ್ಕಾರದ ಪ್ರಾಸಿಕ್ಯೂಟರ್ ಅವರನ್ನು ಸಂಪರ್ಕಿಸಿ ಮುಂದಿನ ಕ್ರಮ ಜರುಗಿಸುವುದಾಗಿ ಎಚ್ಚರಿಕೆ ಕೊಟ್ಟು ಬಿಡುಗಡೆ ಮಾಡಿದರು.

ಈ ವಿಚಾರ ಎಲ್ಲರ ಕಿವಿ ಮೇಲೆ ಬಿದ್ದಿತ್ತು. ಮೇಯರ್ ಆಫೀಸಿನಿಂದ ಆತ ಹೊರಬರುತ್ತಿದ್ದಂತೆ ಜನರು ಆತನನ್ನು ಸುತ್ತುವರಿದು ಕುತೂಹಲದಿಂದ ಹಾಗೂ ಅವಮಾನಗೊಳಿಸುವ ರೀತಿಯಲ್ಲಿ ಪ್ರಶ್ನೆ ಮಾಡಿದರು. ಆತನಿಗೆ ಸಿಟ್ಟು ಬರಲಿಲ್ಲ. ತಾನು ರಸ್ತೆಯಲ್ಲಿ ಎತ್ತಿಕೊಂಡಿದ್ದ ಸುರುಳಿ ತಂತಿಯ ವಿಷಯವನ್ನು ವಿವರಿಸಿದ. ಯಾರೂ ಅದನ್ನು ನಂಬಲಿಲ್ಲ. ಎಲ್ಲರೂ ನಕ್ಕರು. ದಾರಿಯುದ್ದಕ್ಕೂ ಹೋಗುತ್ತ ಎದುರಾದ ಎಲ್ಲರಿಗೂ ತಂತಿ ಕತೆಯನ್ನು ವಿವರಿಸಿದ. ತನ್ನ ಜೇಬುಗಳನ್ನು ಖಾಲಿ ಮಾಡಿ ತೋರಿಸಿದ. ಏನೂ ಇರಲಿಲ್ಲ. ಆದರೂ ಅವರು ಇವನನ್ನು ನಂಬಲಿಲ್ಲ. ಅವರೆಲ್ಲ "ಘಾಟಿ ಮುದುಕ, ಇಲ್ಲಿಂದ ತೊಲಗು" ಎಂದರು. ಆತನಿಗೆ ಕೋಪ ಬಂದು ತುಂಬ ನೋವಿನಿಂದ ಏನೂ ಮಾಡಲು ತೋಚದೆ ತನ್ನನ್ನು ಯಾರೂ ನಂಬದಿದ್ದರೂ ಪದೇ ಪದೇ ನಡೆದದ್ದನ್ನು ಹೇಳುತ್ತ ನಡೆದ. ರಾತ್ರಿಯಾಯಿತು ಮೂವರು ಪರಿಚಿತರೊಂದಿಗೆ ಹೊರಟ. ಅವರನ್ನು ತಾನು ರಸ್ತೆಯಲ್ಲಿ ತಂತಿ ಸುರುಳಿಯನ್ನು ಎತ್ತಿಕೊಂಡ ಸ್ಥಳಕ್ಕೆ ಕರೆದೊಯ್ದು ತೋರಿಸಿದ. ದಾರಿಯುದ್ದಕ್ಕೂ ಅದೇ ಕತೆಯನ್ನು ಹೇಳುತ್ತಾ ಹೋದ. ಯಾರೂ ಅದನ್ನು ನಂಬಲಿಲ್ಲ. ಇದರಿಂದ ರಾತ್ರಿಯೆಲ್ಲಾ ತುಂಬ ಯಾತನೆಯಾಯ್ತು. ಹಳ್ಳಿಯವರೂ ಆತನನ್ನು ನಂಬಲಿಲ್ಲ. ರಾತ್ರಿಯೆಲ್ಲಾ ನಿದ್ರೆ ಇಲ್ಲದೆ ಚಡಪಡಿಸಿದ.

ಮರುದಿನ ಮಧ್ಯಾಹ್ನ ಒಂದು ಗಂಟೆಗೆ ಮೈತ್ರೆ ಬ್ರೆಟನ್‌ರ ನೌಕರ ಮಾರಿಸ್ ಪೊಮೆಲ್ ದಾರಿಯಲ್ಲಿ ಸಿಕ್ಕ ಆ ಕಳೆದಿದ್ದ ಪಾಕೆಟ್ಟನ್ನು ಅದರ ಒಡೆಯ ಮೈತ್ರೆ ಹಾಲ್‌ಬ್ರಕ್‌ಗೆ ಹಿಂತಿರುಗಿಸಿದ. ರಸ್ತೆಯಲ್ಲಿ ಸಿಕ್ಕದ ಆ ಪಾಕೆಟ್ ತನಗೆ ಓದಲು ಬರುತ್ತಿಲ್ಲವಾಗಿ ಯಜಮಾನನ ಕೈಗೆ ತಲುಪಿಸಿದ. ಅದರಲ್ಲಿ ಹಣ ಮತ್ತು ಕಾಗದ ಪತ್ರಗಳೆಲ್ಲಾ ಸುರಕ್ಷಿತವಾಗಿದ್ದವು. ಈ ವಿಷಯ ಎಲ್ಲರ ಗಮನಕ್ಕೂ ಬಂದು ಮೈತ್ರೆ ಹಾಚ್‌ಕಂಗೆ ತಿಳಿಸಲಾಯ್ತು. ಆತ ಕೂಡಲೆ ಎಲ್ಲ ಕಡೆ ಹೋಗಿ ಇದನ್ನು ಸಂತೋಷದಿಂದ ಪ್ರಚುರಪಡಿಸಿದ. ಆತನಿಗೆ ತುಂಬ ಸಂತೋಷವಾಯ್ತು. ಸುಳ್ಳು ಪ್ರಚಾರದಿಂದ ಬಂದಿದ್ದ ನೋವು ಆತನನ್ನು ತುಂಬ ಘಾಸಿಗೊಳಿಸಿತ್ತು. ಎಲ್ಲ ಕಡೆ ಹೋಗಿ ಸತ್ಯ ಏನು ಎಂದು ಹೆಮ್ಮೆಯಿಂದ ಹೇಳತೊಡಗಿದ. ದಿನವೆಲ್ಲಾ ಅದೇ ವಿಚಾರವನ್ನು ದಾರಿಹೋಕರು, ಪರಿಚಯಸ್ಥರು ಎನ್ನದೆ ಎಲ್ಲರಿಗೂ ವಿವರಿಸತೊಡಗಿದ. ಆದರೆ ಅವರಿಗೆ ನಂಬಿಕೆ ಬಂದಂತೆ ಕಾಣಲಿಲ್ಲ.

ಮರುದಿನ ಇದೇ ವಿಷಯಕ್ಕೆ ಸಂಬಂಧಿಸಿದಂತೆ ಒಬ್ಬ ರೈತನ ಜೊತೆ ಮಾತನಾಡುತ್ತಿದ್ದುದನ್ನು ತಡೆದು ಆ ರೈತ ಇವನ ಹೊಟ್ಟೆ ಗುದ್ದಿ "ಘಾಟಿ ಮನುಷ್ಯ" ಎಂದು ಕರೆದು ಮಾತು ಮುಂದುವರಿಸದೆ ಹೊರಟೇ ಹೋದ. ಮೈತ್ರೆ ಹಾಚ್‌ಕಂಗೆ "ಘಾಟಿ ಮನುಷ್ಯ" ಎಂಬ ಮಾತು ಏಕೆ ನನ್ನ ಬಗ್ಗೆ ಎಂಬ ಯೋಚನೆ ಬಂತು. ಮರುದಿನ ಹೋಟೆಲ್‌ಗೆ ಹೋಗಿ ಅಲ್ಲಿ ಇದೇ ವಿಚಾರದಲ್ಲಿ ವಿವರಣೆ ಕೊಡತೊಡಗಿದ, ಅಲ್ಲಿದ್ದ ಕುದುರೆ ವ್ಯಾಪಾರಿ, "ಬಿಡಿ ಬಿಡಿ. ಅನುಭವಸ್ಥ ಚುರುಕು ಮುದುಕ ಅದು ಹಳೇ ಟ್ರಿಕ್ ನಿನ್ನ ಸುರುಳಿ ತಂತಿ ಬಗ್ಗೆ ನನಗೆ ಎಲ್ಲ ತಿಳಿದಿದೆ" ಎಂದ. ಈತ ಹೇಳಿದ "ಹಣದ ಪಾಕೆಟ್ ಸಿಕ್ಕಾಯಿತಲ್ಲ. ಕುದುರೆ ವ್ಯಾಪಾರಸ್ಥರು" "ಬಾಯಿಮುಚ್ಚು, ಒಬ್ಬರಿಗೆ ಪಾಕೆಟ್ಟನ್ನು ಇನ್ನೊಬ್ಬನ ಮೂಲಕ ಹಿಂದಿರುಗಿಸುವ ಜಾಣ ಎಂದು ತನ್ನನ್ನು ಕರೆಯುತ್ತಿದ್ದಾನೆ ಎಂಬ ಗುಮಾನಿ ಬಂತು. ಆತ ಹೋಟೆಲಿನಲ್ಲಿ ಇದು ಅನ್ಯಾಯ. ನನ್ನನ್ನು ಮೋಸಗಾರ ಎಂದು ನಂಬುತ್ತೀರಾ ಎಂದು ಬೊಬ್ಬೆ ಇಟ್ಟ. ಎಲ್ಲರೂ ನಗಲಾರಂಭಿಸಿದರು. ಮತ್ತೆ ಈ ರೈತನಿಗೆ ತುಂಬ ನೋವಾಯಿತು. ಪ್ರತಿ ದಿನವೂ ಇದೇ ವಿಷಯವನ್ನು ಪ್ರಸ್ತಾಪಿಸುತ್ತಾ ಜನರನ್ನು ನಂಬಿಸಲು ಪ್ರಯತ್ನಪಟ್ಟ. ಬೇರೆ ಬೇರೆಯಾಗಿ ಕಾರಣಗಳನ್ನು ಕೊಡಲು ಯತ್ನಿಸಿದ. ಎಲ್ಲ ಪ್ರಯತ್ನಗಳೂ ಏನೂ ಫಲ ನೀಡಲಿಲ್ಲ. ಎಲ್ಲರೂ ತನ್ನನ್ನು ಅಪ್ರಮಾಣಿಕ, ಮೋಸಗಾರನೆಂದು ನಂಬಿದ್ದಾರೆ ಎಂದು ತುಂಬ ನೋವನ್ನು ಅನುಭವಿಸಿದ. ದಿನದಿನಕ್ಕೆ ಕೃಶನಾದ ಮನಸ್ಸು ಆಘಾತಕ್ಕೆ ಸಿಕ್ಕಿ ಹಾಸಿಗೆ ಹಿಡಿದ. ವರ್ಷದ ಕೊನೆಯ ತಿಂಗಳು ಹಾಸಿಗೆ ಹಿಡಿದವನು ಚೇತರಿಸಿಕೊಳ್ಳಲಿಲ್ಲ. ಕೊನೆ ಗಳಿಗೆಯಲ್ಲೂ ತಾನು ತಪ್ಪೆಸಗಲಿಲ್ಲ ಎಂಬುದನ್ನು ಸಾಬೀತುಪಡಿಸುತ್ತಾ ಕೊನೆ ಉಸಿರು ಎಳೆಯುತ್ತಾ, "ಮೇಯರ್ ಅವರೆ, ಒಂದು ಸುರುಳಿ ಸುತ್ತಿದ್ದ ತಂತಿ" ಎಂದು ವದುರುತ್ತ ಪ್ರಾಣಬಿಟ್ಟ.


ಮೂಲ : **ಮಾಪಸ**
ಕನ್ನಡಕ್ಕೆ : **ಪ್ರೊ|| ಬಿ. ಕೆ. ಹನುಮಂತಯ್ಯ**
ನಂ. ೯೮, ೧೭ನೇ ಮುಖ್ಯರಸ್ತೆ
ಬನಶಂಕರಿ ೧ನೇ ಹಂತ, ಬೆಂಗಳೂರು – ೫೬೦ ೦೫೦


# ಗಜಲ್

**ಕಾ**ರಿರುಳಲೂ ತೂರಿ ಬರುವ ಬೆಳಕನು ಯಾರಿಂದಲೂ ತಡೆಯಲು ಆಗುವುದಿಲ್ಲ
ಅರಳುವ ಹೂಗಳನು ತೇಲಿ ಬರುವ ಕಂಪನು ತುರುಬಲು ಆಗುವುದಿಲ್ಲ.

ಬಣ್ಣ ಬಣ್ಣದ ನೂರು ಕನಸುಗಳ ನಲಿವನು ಅಳೆಯಲು ಆಗುವುದಿಲ್ಲ
ನೋವಿನ ಒಡಲಲಿ ಪುಟಿವ ಕವಿತೆಯನು ತಡೆಯಲು ಆಗುವುದಿಲ್ಲ.




ಎಲೆಗಳ ಮೇಲೆ ಬೀಳುವ ಮಂಜಿನ ಹನಿಗಳನು ತಪ್ಪಿಸಲು ಆಗುವುದಿಲ್ಲ
ಕಾಡು ಮಲ್ಲಿಗೆಯ ಜೊತೆ ಕಾಗದದೂವನು ಹೋಲಿಸಲು ಆಗುವುದಿಲ್ಲ.

ಒಡೆದ ಕನ್ನಡಿ ತರಹ ಮುರಿದ ಮನಸು ಜೋಡಿಸಲು ಆಗುವುದಿಲ್ಲ
ಕನ್ನಡಿ ನುಡಿವ ನಿಜ ರೂಪವನು ಅಳಿಸಲು ಆಗುವುದಿಲ್ಲ.

ಕೋಟಿ ಒಡೆಯನಾದರೂ ಬೆಳ್ಳಿ ಬಂಗಾರ ತಿಂದಿರಲು ಆಗುವುದಿಲ್ಲ
ಸಾವಿನ ಗಳಿಗೆಯಲು ಮಿಡಿವ ಬದುಕುವಾಸೆಯನು ಕಸಿಯಲು ಆಗುವುದಿಲ್ಲ.


**ಡಾ|| ದಸ್ತಗೀರ್ ಸಾಬ್ ದಿನ್ನಿ**
ನಂ. ೮, ಪದ್ಮಾವತಿ ಕಾಲೋನಿ, ಆಸಾಪುರ ರಸ್ತೆ, ರಾಯಚೂರು – ೫೮೪ ೧೦೧

ಕಾವ್ಯಲೋಕ





ಕಲ್ಲಳ್ಳಿ ಗುಡ್ಡದ ಕಲ್ಲುಗವಿ ಬಳಿಗೆ
ಹುಲ್ಲರಸುತ ಬಂದ ಮುಂಗುರಿಯೆದುರಿಗೆ
ಚಂಗನೆ ಜಿಗಿದ ಹಸಿದ ಹೆಬ್ಬುಲಿ
ಕೆನ್ನಾಲಿಗೆಯಾಡಿಸಿತು ರಸಗವಳಕೆ

ಅಡವಿಗೆ ಅಡವಿ ಅನುರಣಿಸುವಂತೆ
ತರುಬಿನಿಂದ ಹೆಬ್ಬುಲಿ ಮುಂದೆ
ಮೊರೆಯಿಟ್ಟಿತು ಮುಂಗುರಿ ಸೆರಗೊಡ್ಡಿ

ಓ, ಕ್ರೂರವ್ಯಾಘ್ರನೆ
ಹೀರುವ ಮುನ್ನ ಗುಂಡಿಗೆಯ ಬಿಸಿನೆತ್ತರನ್ನ
ಕಿತ್ತುತಿನ್ನುವ ಮುನ್ನ ಹಸಿಮಾಂಸಖಂಡವನ್ನ
ಆಲಿಸು ಅರೆಕ್ಷಣ ಈ ಒಂದು ಬಿನ್ನಹ

# ಹಾಲಾಹಲ ಹಾಲಾಗಿ...

ಹಿಗ್ಗಿದ ಯಮಬಾಯಿ ಕುಗ್ಗಿಸಿ
ಕಿವಿಯೊಡ್ಡಿ ನಿಂದಿತು ಬೆರಗಾಗಿ ಹೆಬ್ಬುಲಿ
ಮುಂಗುರಿಯೆದೆಯಿಂದ ಧುಮುಕುವ ಅಕ್ಷರಧಾರೆಗೆ

ಕಳೆದಿರುಳು ನಿನ್ನ ಪುಟ್ಟ ಮರಿಯೊಂದು
ಬೇಟೆಯಾಡುವ ಕಲೆ ಕಲಿಯಲೆಂದೋ ಏನೋ ?
ಹಾರಿದಾಗ ನನ್ನ ಕಳ್ಳೆಗೂಡಿಗೆ
ಮೂಲೆ ಹಿಡಿದಿದೆ ಮುರಿದು ಮುಂಗಾಲೆರಡು
ಆರಯ್ಯಬೇಕಿದೆ ಹಸುಳೆಯಂತೆ ಅದಕೆ ಹಾಲುಣಿಸಿ
ದಬ್ಬೆಕಟ್ಟಿದ್ದಾನೆ ಕುರಿಯಪ್ಪ ಹಿತ್ತಲ ಮದ್ದುಸವರಿ
ಕಾಲು ಬಂದೊಡನೆ ಅದರ ಜೊತೆಗೆ
ಬಂದೇ ತೀರುತ್ತೇನೆ ಈ ಕಲ್ಲುಗವಿ ಬಳಿಗೆ
ವಿಶ್ವಾಸ ಮೂಡದಿದ್ದರೆ ನನ್ನ ಮಾತಿನ ಮೇಲೆ
ಇಗೊ, ಭಾಷೆ ತಗೊ !

ಕರುಳು ಚುರುಗುಟ್ಟಿ ದಾರಿಬಿಟ್ಟಿತು ಮುಂಗುರಿಗೆ
ಹಸಿವ ಮರೆತು ಹೆಬ್ಬುಲಿ
ಮುಂಗಾಲು ಮುರಿದ ಕರುಳಕುಡಿ ಕರೆಗೋ ?
ಮುಂಗುರಿಯಿಟ್ಟ ದೀನ ಮೊರೆಗೋ ?

ಉರುಳುವವಷ್ಟರಲ್ಲಿ ಮೂರು ವಾರ
ಕಾಲು ಬಂದ ಹುಲಿ ಮರಿಯೊಡನೆ
ಕಾಲು ಬೆಳೆಸಿತು ಕಲ್ಲುಗವಿ ಬಳಿಗೆ
ಮಾತುಕೊಟ್ಟಂತೆ ಮಂದೆ ಮುಂಗುರಿ
ಯೋಚನೆ ಮಾಡದೆ ಹಿಂದು ಮುಂದು
ಮರಳಿ ಬಳಿ ಬಂದ ಹರಕೆ ತಿಂದು
ಹಬ್ಬ ಮಾಡಿತು ಹೆಬ್ಬುಲಿ
ಅಯ್ಯೋ ! ಕರುಣೆ ಹಾಲು ಒಡೆದುಹೋಯಿತೇ ?
ಕಲ್ಲಳ್ಳಿ ಗುಡ್ಡದೊಡೆಯ ಶ್ರೀರಂಗನಾಥನೇ

ಉಸಿರು ನಿಂತಂತಾಯಿತು ಆ ಕ್ಷಣ ಹುಲಿಮರಿಗೆ
ತನ್ನ ಕರುಳ ಕುಡಿ ಆರೈದ ಕರುಣೆಯನ್ನ
ಜೀವಕಿಂತ ಕೊಟ್ಟ ಭಾಷೆ ಮೇಲೆಂಬ ಭರತವಾಕ್ಯವನ್ನ
ತಿಂದು ತೇಗಿದ ಹೃದಯಹೀನ ಜನನಿ ಕಂಡು
ಹಾಲಾಗಿತು ಅದರೊಳಗಿನ ಹಾಲಾಹಲ
ಕಳಚಿಕೊಂಡು ಕೂಡಲೇ ಕರುಳ ಕೊಂಡಿ
ರಾಹುಮನೆಯಿಂದ ಪಾರಾದ ಬಾಲಚಂದಿರನಂತೆ
ಕಾಲು ಕಿತ್ತಿತು ಜಿಗಿದು ಕುರಿಯಪ್ಪನೆಡೆಗೆ

ಇಲ್ಲಿರಲಾರೆ, ಇಲ್ಲಿರಲಾರೆ,
ಕ್ರೂರ ಕರುಳಿಗಿಂತ ಆ ಬೆರಳ ಪ್ರೀತಿ ಸಾಕೆಂದು

ಮುಂಗುರಿಗಾಣದೆ ಇತ್ತ ಗೋಧೂಳಿ ಗಳಿಗೆಯಲ್ಲಿ
ಬೊಗಸೆಧೂಳ ತೂರಿತೂರಿ ಕಲ್ಲುಗವಿಯತ್ತ
ಕನವರಿಸುತ್ತಲೇ ಇದ್ದ ಇರುಳೆಲ್ಲಾ ಕುರಿಯಪ್ಪ

ಮೈಬೆಚ್ಚಗಾಗಿ ಇದ್ದಕ್ಕಿದ್ದಂತೆ ಬೆಳಗುಜಾವದಲ್ಲಿ
ಕರಿಕಂಬಳಿ ಹೊದಿಕೆ ಸರಿಸಿ ಕುರಿಯಪ್ಪ
ಕಣ್ಣುಜ್ಜುಜ್ಜಿ ನೋಡುತ್ತಾನೆ
ಕಣ್ಣೀರು ಕರೆಯುತ್ತಿತ್ತು ಆ ಹುಲಿಮರಿ
ಅವನ ಕೊರಳ ಬಾಚಿ ತಬ್ಬಿಕೊಂಡು
ಎದೆಗೆ ಪದಕವಾಗಿ

ಹಾಲಾಹಲ ಹಾಲಾದ ಸೋಜಿಗದ ಅಲೆಗಳು
ಮರುಭೂಮಿ ತಾಯಿಯೆದೆಗೆ ತಾಗಿ
ಬಂದೂಕು ಬಿತ್ತಿದ ವಿಷ ಬೆಂಕಿ ಬೀಜಗಳು
ಅರಳಿ ನಗುತಿವೆ ಕೆಂಗುಲಾಬಿಯಾಗಿ

**ಎಲ್. ಮಹಲಿಂಗಪ್ಪ**
ಕನ್ನಡ ಉಪನ್ಯಾಸಕರು, 'ಹೊಂಬಾಳೆ ನಿಲಯ', ಶಂಕರನಗರ, ಹಳೇಪಾಳ್ಯ ಅಂಚೆ
ತಿಪಟೂರು – ೫೭೨ ೨೦೨







# ಹವ್ಯಾಸಿ ಕಲಾವಿದೆ ಸ್ವರೂಪ್

ವೃತ್ತಿಯಲ್ಲಿ ಸಾಫ್ಟ್‌ವೇರ್ ಇಂಜಿನಿಯರ್, ಪ್ರವೃತ್ತಿಯಲ್ಲಿ ಕಲಾವಿದೆ. ಟಾಟಾ ಕನ್ಸಲ್ಟೆನ್ಸಿ ಸರ್ವಿಸಸ್‌ನಲ್ಲಿ ಸೀನಿಯರ್ ಕನ್ಸಲ್ಟೆಂಟ್ ಆಗಿ ಕೆಲಸ ಮಾಡುತ್ತಿರುವ ಸ್ವರೂಪ್ ವೆಂಕಟರಾಮನ್ ದೆಹಲಿಯ ಐಐಟಿಯಿಂದ ಎಂ.ಟೆಕ್. ಪದವೀಧರೆ. ಬಿಡುವಿನ ವೇಳೆಯಲ್ಲಿ ಬಣ್ಣಗಳ ಜೊತೆ ಚೆಲ್ಲಾಟ ಆಡುವ ಅಭ್ಯಾಸ ಬೆಳೆಸಿಕೊಂಡಿದ್ದಾರೆ. ವಾಟರ್ ಕಲರ್ಸ್, ಪೋಸ್ಟರ್ ಕಲರ್ಸ್, ಆಯಿಲ್ ಪೇಂಟ್ಸ್ ಮೊದಲಾದವನ್ನು ಬಳಸಿ ಚಿತ್ರ ಬಿಡಿಸುವುದು ಅವರಿಗೆ ಪ್ರಿಯ. ಚಿಕ್ಕಂದಿನಲ್ಲೇ ಚಿತ್ರ ಬಿಡಿಸುವ ಹವ್ಯಾಸ ಬೆಳೆಸಿಕೊಂಡ ಇವರು ಲಲಿತಕಲೆ ಕಲಿತದ್ದು ಧಾರವಾಡದ ಸರಕಾರಿ ಲಲಿತಕಲಾ ಶಾಲೆಯಲ್ಲಿ. ಐದು ವರ್ಷ ಎಂ. ಆರ್. ಬಾಳೇಕಾಯಿಯವರ ನೇತೃತ್ವದಲ್ಲಿ ತರಬೇತಿ ಪಡೆದ ಸ್ವರೂಪ್ ಹಲವು ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ.



**ಸ್ವರೂಪ್ ವೆಂಕಟರಾಮನ್**
# 861, 6ನೇ ಅಡ್ಡರಸ್ತೆ
3ನೇ ಬ್ಲಾಕ್, 3ನೇ ಫೇಸ್
ಬನಶಂಕರಿ
ಬೆಂಗಳೂರು–560 085





Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

